ಸೆಪ್ಟೆಂಬರ ೧೯೫೭

ಬೆಲೆ : ೧೨ ಆಣೆ



# ಕಸ್ತೂರಿ

ಜ್ಞಾನ ಮತ್ತು ಮನೋರಂಜನ

# ನಾರುಗಳು

ಕರ್ನಾಟಕದಲ್ಲಿ ಹಲವು ಬಗೆಯ ನಾರುಗಳು ಬೆಳೆಯುತ್ತವೆ. ಆದರೆ ಅವುಗಳ ಉಪಯೋಗ ಆಗುತ್ತಿರುವದು ತೀರ ಸ್ವಲ್ಪ.

ಸುಧಾರಿಸಿದ ಉಪಕರಣಗಳಿಂದ ಇದು ನಮ್ಮ ಪ್ರಾಂತದ ಬಹು ದೊಡ್ಡ ಗ್ರಾಮೋದ್ಯೋಗವಾಗಬಹುದು.

ಮುಂಬೈ ಗ್ರಾಮೋದ್ಯೋಗ ಮಂಡಲದ ಧಾರವಾಡ ಕಚೇರಿಯಿಂದ ಹೆಚ್ಚಿನ ವಿವರ ಪಡೆಯುಬಹುದು.

ಪ್ರತ್ಯಕ್ಷ ಮಾಹಿತಿಗಾಗಿ ಧಾರವಾಡದಲ್ಲಿರುವ

**ಗ್ರಾಮೋದ್ಯೋಗ ಮಂಡಲದ ವರ್ಕಶಾಪಿಗೆ**

ಭೆಟ್ಟಿ ಕೊಡಬಹುದು

# ಕಸ್ತೂರಿ

ಕನ್ನಡ ಡೈಜೆಸ್ಟ್

ಮುಖ್ಯ ಸಂಪಾದಕರು :
ಮೊಹರೆ ಹನುಮಂತರಾಯರು

ಪ್ರಕಾಶಕರು :
ಲೋಕಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಚಂದಾ ದರ :
ವಾರ್ಷಿಕ (ಅಂಚೆಸೇರಿ) ರೂ. ೯-೦-೦
ಬಿಡಿ ಸಂಚಿಕೆ — ರೂ. ೦-೧೨-೦

ಮುಖಪುಟ ಚಿತ್ರ :
ಕೆ. ಎಸ್. ಪೋತದಾರ

## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು; ಆದರೂ ಸಾಮಾನ್ಯವಾಗಿ ಸ್ವೀಕೃತ ಲೇಖಗಳ ಸ್ವೀಕಾರದ ಸುದ್ದಿಯನ್ನು ಲೇಖ ತಲುಪಿದ ನಾಲ್ಕು ವಾರದೊಳಗಾಗಿ ಲೇಖಕರಿಗೆ ತಿಳಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನು ಕಾಯ್ದಿಟ್ಟುಕೊಳ್ಳುವದೊಳಿತು.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

*

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆ ಹಿಂದಿಣ ತಿಂಗಳ ಕೊನೆಯ ವಾರದೊಳಗೆ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ನಮ್ಮ-ನಿಮ್ಮೊಳಗೆ

( ಸಂಪಾದಕರಿಂದ )

"ಕಸ್ತೂರಿ"ಯ ಗುರಿ ಜ್ಞಾನ ಮತ್ತು ಮನೋರಂಜನೆ. ಧಾವಿಸುತ್ತಿರುವ ಇಂದಿನ ಜಗತ್ತಿನಲ್ಲಿ ಜ್ಞಾನ-ವಿಜ್ಞಾನ-ಸಾಹಿತ್ಯಗಳು ಅನಂತಧಾರೆಗಳಾಗಿ ಹರಿಯುತ್ತಿವೆ. ಅವುಗಳಲ್ಲಿ ಬಹುಭಾಗ ಕನ್ನಡ ಓದುಗನಿಗೆ ನಿಲುಕುವುದಿಲ್ಲ; ಏಕೆ, ಸಾಧಾರಣ ಇಂಗ್ಲೀಷು ಬಲ್ಲವನಿಗೂ ಅದು ದುರ್ಲಭವೇ ಆಗಿದೆ. ಆದರೆ ಈ ಓಘದ ಸಾಮಾನ್ಯ ಪರಿಚಯವಾದರೂ ನಿರಂತರವಾಗಿ ಇದ್ದ ಹೊರತು ಈ ಶತಮಾನದಲ್ಲಿ ನಾವು ಪ್ರಗತಿ ಹೊಂದಲಾರೆವು. ಹಲವು ತೀರ್ಥಗಳ ಪುಣ್ಯ ಜಲವನ್ನು ತಮ್ಮವರಿಗೆ ಪ್ರಾಶನ ಮಾಡಿಸಲು ಯಾತ್ರಿಕರು ಗಿಂಡಿಗಳಲ್ಲಿ ತರುವಂತೆ "ಕಸ್ತೂರಿ"ಯು ಓದುಗರಿಗೆ ಹಲವು ಜ್ಞಾನ-ತೀರ್ಥಗಳನ್ನು ಒದಗಿಸಲು ಹವಣಿಸುವುದು. ಹಲವು ಭಾಷೆ, ಹಲವು ಮೂಲಗಳಿಂದ ಹಲ ಬಗೆಯ ಸಾಮಗ್ರಿಗಳನ್ನು ಕೂಡಿಸಿ ಇಲ್ಲಿ ಕೊಡಲಾಗುವುದು.

"ಕಸ್ತೂರಿ" ಇಂದಿನ ಕಾಲದ ಜನತೆಗಾಗಿ ಇರುವುದು. ಅದು ಭಾರತದ ಭವ್ಯ ಪ್ರಾಚೀನ ಸಂಸ್ಕೃತಿ ಮತ್ತು ಸಾಹಿತ್ಯಗಳ ಪರಂಪರೆಯನ್ನು ಪರಿಚಯ ಮಾಡಿಕೊಡಲು ಯತ್ನಿಸುವುದು. ಆದರೆ ಗತ ವೈಭವವನ್ನು ನೆನೆಯುವಾಗ ಗತ ಕಾಲಕ್ಕೆ ಮರಳುವ ಹವ್ಯಾಸ ಅದಕ್ಕಿಲ್ಲ. ನಾವು ಇಂದಿನ ಕಾಲದಲ್ಲಿ ಬಾಳಬೇಕಾಗಿದೆ ಮತ್ತು ಇಂದಿನ ಸಮಸ್ಯೆಗಳನ್ನು ಬಿಡಿಸಬೇಕಾಗಿದೆಯೆಂದು ಅದು ಮರೆಯುವುದಿಲ್ಲ.

ಸಂತೋಷಂ ಜನಯೇತ್ ಪ್ರಾಜ್ಞಃ ತದೇವೇಶ್ವರಪೂಜನಂ—ಎಂದು ಸುಭಾಷಿತ ಹೇಳುತ್ತದೆ. "ಕಸ್ತೂರಿ"ಯು ಜೀವನದ ಬಗ್ಗೆ ವಹಿಸುವ ನೀತಿ ಇದು. ಜೀವನದ ಆಶಾದಾಯಕ ಅಂಶಗಳ ಕಡೆ ದೃಷ್ಟಿ ತಿರುಗಿಸಿ ಮನುಷ್ಯನನ್ನು ಪೌರುಷದ ಕಡೆ ಹೊರಳಿಸುವುದು ನಮ್ಮ ನಾಡಿನಲ್ಲಿ ಅವಶ್ಯ ಮಾಡಬೇಕಾದ ಕಾರ್ಯ. ಜೀವನದಲ್ಲಿ ನಿಜವಾಗಿ ಸುಂದರವಾದದ್ದು, ರುಚಿಕರವಾದದ್ದು, ಸ್ಪೃಹಣೀಯವಾದದ್ದು ಧಾರಾಳವಾಗಿದೆ. ಮೊಳಕೆಯಿಂದಲೇ ಬೆಳಕಿನ ಕಡೆ ಮುಖ ಮಾಡಿ ಸಸ್ಯ ಬೆಳೆಯುತ್ತದೆ. ಜೀವನವೆಲ್ಲವೂ ಆನಂದದ ಹಂಬಲದಲ್ಲಿ ಮೊಳೆಯುತ್ತದೆ. ಮರಳುಗಾಡಿನಲ್ಲಿಯೂ ಓಯಸಿಸ್ಸುಗಳಿರುವಂತೆ ಅತಿ ಶುಷ್ಕ ಜೀವನದಲ್ಲಿಯೂ ರಸದ ಬುಗ್ಗೆಗಳಿರುತ್ತವೆ. ಆ ಧಾರೆಗಳನ್ನು ಗುರುತಿಸಿ ತೋರಿಸುವ ಅಪೇಕ್ಷೆ "ಕಸ್ತೂರಿ"ಯದು.

ಒಂದು ಮಾತಿನಲ್ಲಿ, "ಕಸ್ತೂರಿ" ಜೀವನದ ಕಂಪಿನ ಸೇವನೆಯ ಪಕ್ಷಪಾತಿ. ಆ ಕಂಪು ಎಲ್ಲೆಲ್ಲಿ ಪ್ರತೀತಿಗೆ ಬರುತ್ತದೋ ಅಲ್ಲಲ್ಲಿಂದ ಅದನ್ನು ಹೊತ್ತು ತರುವ ಗಾಳಿಯ ಕೆಲಸವನ್ನು ಅದು ಮಾಡಬೇಕೆನ್ನುತ್ತದೆ. ಇದಕ್ಕೆ ಓದುಗರ ಸಕ್ರಿಯ ಸಹಕಾರ ಬೇಕು. "ಕಸ್ತೂರಿ"ಯನ್ನು ಕುರಿತು ತಮಗನಿಸಿದ್ದನ್ನು ಓದುಗರು ಬರೆದು ತಿಳಿಸಿದರೆ ನಮಗೆ ಸಂತೋಷವಾಗುವುದು. ಗ್ರಾಹ್ಯವಾದುದನ್ನು ಸ್ವೀಕರಿಸುವೆವು. ಅವರ ಸೂಚನೆಗಳನ್ನೂ ನಾವು ಸ್ವಾಗತಿಸುವೆವು. ಬರೆದ ಪತ್ರಗಳಲ್ಲಿನ ಉತ್ತಮಾಂಶಗಳನ್ನು ಸಂಕ್ಷೇಪವಾಗಿ ಪ್ರಕಟಿಸುವ ವಿಚಾರವೂ ಇದೆ. ಓದುಗರ ನೆರವಿನಿಂದ "ಕಸ್ತೂರಿ" ತಿಂಗಳಿಂದ ತಿಂಗಳಿಗೆ ಹೆಚ್ಚು ವಾಚನೀಯವಾಗುತ್ತ ಹೋಗುವದೆಂದು ನಂಬಿದ್ದೇವೆ.

ಆಧುನಿಕ ಕಾಲಕ್ಕೆ ಬೇಕಾದ ಜ್ಞಾನವನ್ನು ಸುಲಭ ರೂಪದಲ್ಲಿ ಜನತೆಗೆ ಒದಗಿಸುವ ಗುರಿಯಿಟ್ಟುಕೊಂಡ ಲೋಕ ಶಿಕ್ಷಣ ಟ್ರಸ್ಟಿನ ಹೊಸ ಉದ್ಯಮವಿದಾಗಿದೆ. ಟ್ರಸ್ಟಿನ ಇತರ ಉಪಕ್ರಮಗಳನ್ನು ಕನ್ನಡ ನಾಡು ಎಂದಿನಿಂದಲೂ ವಿಶ್ವಾಸದಿಂದ ಪ್ರೋತ್ಸಾಹಿಸಿದೆ. ಈ ಸಾಹಸಕ್ಕಾದರೂ ಅದೇ ಬಗೆಯ ಬೆಂಬಲವು ಕನ್ನಡಿಗರಿಂದ ಬಂದೇ ತೀರುವದೆಂಬ ವಿಶ್ವಾಸ ನಮಗಿದೆ.

—ooಽoಽoo—



ಕಸ್ತೂರಿ

ವರ್ಷ ೧ ಸೆಪ್ಟಂಬರ ೧೯೫೬ ಸಂಚಿಕೆ ೧


**ಯುದ್ಧಗಳ ಮೂಲ ನಿಜವಾದ ದೂರುಗಳಲ್ಲಿರುವುದಿಲ್ಲ. ಮನುಷ್ಯರ ಮನಸಿನೊಳಗಿನ ಮತ್ಸರದಲ್ಲೇ ಅವುಗಳ ಬೇರುಗಳಿವೆ.**

# ಬುದ್ಧ ನಿಲ್ಲಿಸಿದ ಯುದ್ಧ

ಬಹು ಕಾಲದಿಂದ ಸ್ನೇಹದಿಂದ ಬಾಳಿದ್ದ ಶಾಕ್ಯರು ಮತ್ತು ಕೋಲೀಯರು ಒಮ್ಮೆ ಪರಸ್ಪರ ಕಾದಾಡಲು ಸಿದ್ಧತೆ ನಡೆಸತೊಡಗಿದರು. ದ್ವೇಷವನ್ನು ಹುಟ್ಟಿಸಿಬೆಳೆಸುವ ಕಥೆಗಳು ಉಭಯತರಲ್ಲೂ ಅಪರಿಮಿತವಾಗಿ ಪ್ರಸಾರವಾಗತೊಡಗಿದವು. ಜನ ರೊಚ್ಚಿಗೆದ್ದರು. ಸೇಡು ತೀರಿಸಿಕೊಳ್ಳಲು ಹಾತೊರೆದರು. ಶಾಕ್ಯ ಮತ್ತು ಕೋಲೀಯರ ಸೇನೆಗಳು ಯುದ್ಧಭೂಮಿಗೆ ತೆರಳಿ ಎದುರುಬದುರು ಪಾಳೆಯ ಹೂಡಿದವು.



ಯುದ್ಧ ಪ್ರಾರಂಭವಾಗುವದು ಎನ್ನುವ ಹೊತ್ತಿಗೆ ಬುದ್ಧದೇವನು ಅಲ್ಲಿಗೆ ಬಂದು ಯುದ್ಧಭೂಮಿಯಲ್ಲಿದ್ದ ಒಂದು ಕಟ್ಟಿಗೆಯ ತೊಲೆಯ ಮೇಲೆ ಕುಳಿತನು.

ಈ ಸುದ್ದಿ ಸೇನೆಗಳಲ್ಲಿ ಹರಡಿತು. ಉಭಯ ಕುಲಗಳ ಅರಸರು ಬುದ್ಧನಿಗೆ ಪ್ರಣಾಮಗಳನ್ನರ್ಪಿಸಲು ಧಾವಿಸಿ ಬಂದರು.

ಬುದ್ಧನ ಒಂದು ಮಗ್ಗುಲಲ್ಲಿ ಶಾಕ್ಯರಾಜನೂ ಇನ್ನೊಂದು ಮಗ್ಗುಲಲ್ಲಿ ಕೋಲೀಯ ರಾಜನೂ ಮೊಣಕಾಲೂರಿ ಕುಳಿತರು. ಕೋಲೀಯ ರಾಜನನ್ನು ಉದ್ದೇಶಿಸಿ ಬುದ್ಧನು, "ಮಿತ್ರಾ, ನೀನೇತಕ್ಕೆ ಇಲ್ಲಿಗೆ ಬಂದಿರುವಿ? ಯುದ್ಧ ಮಾಡುವಂಥ ಕಾರಣವಾದರೂ ಏನು?" ಎಂದು ಕೇಳಿದನು.

"ಪ್ರಭು, ಮಹಾದ್ರೋಹವಾಗಿದೆ. ಶಾಕ್ಯರು ದೀರ್ಘಕಾಲದಿಂದ ನಮ್ಮ ಮೇಲೆ ನಾನಾ ಆರೋಪಗಳನ್ನು ಹೊರಿಸಿದ್ದಾರೆ. ನಾವು ಹೇಡಿಗಳೆಂದೂ ದನಗಾಹಿ

ಗಳೆಂದೂ ಅಪವಿತ್ರರೆಂದೂ ನಮ್ಮನ್ನು ಮೂದಲಿಸಿದ್ದಾರೆ. ಮನುಷ್ಯಕುಲದಲ್ಲಿ ದೇವನಾಗಿರುವ, ಕತ್ತಲೆಯಲ್ಲಿ ಬೆಳಕಾಗಿರುವ ರಾಜಕುಮಾರನು ನಮ್ಮ ಕುಲದಲ್ಲಿ ಹುಟ್ಟಿಲ್ಲ ಎಂದು ಹೀಯಾಳಿಸಿದ್ದಾರೆ," ಎಂದು ಕೋಲೀಯ ರಾಜನು ದೂರಿದನು.

"ಆದರೆ ಯುದ್ಧ ಸುರುವಾದುದಕ್ಕೆ ಕಾರಣವಾದ ಕೃತಿ, ಶಬ್ದ ಯಾವದು ?" ಬುದ್ಧ ನಡುವೆಯೆ ಕೇಳಿದನು.

"ಪ್ರಭು, ಹೇಳುತ್ತೇನೆ. ಅಥವಾ ಈ ವಿಷಯವನ್ನು ನನಗಿಂತಲೂ ಚನ್ನಾಗಿ ಬಲ್ಲ ನನ್ನ ಮುಖ್ಯ ಮಂತ್ರಿಗೆ ಅದನ್ನು ನಿವೇದಿಸಲು ಆಜ್ಞಾಪಿಸುತ್ತೇನೆ," ಎಂದು ಕೋಲೀಯ ರಾಜನು ತನ್ನ ಮುಖ್ಯ ಮಂತ್ರಿಯನ್ನು ಬರಮಾಡಿಕೊಂಡು ಕೋಲೀಯರು ಯುದ್ಧ ಸಾರಿದ್ದರ ಕಾರಣವನ್ನು ನಿವೇದಿಸಲು ಆಜ್ಞಾಪಿಸಿದನು.

ಮುಖ್ಯ ಮಂತ್ರಿ ನಮ್ರ ಭಾವದಿಂದ ಬುದ್ಧನತ್ತ ತಿರುಗಿ "ದೇವಾ, ಶಾಕ್ಯರು ಕೃತಿ, ಶಬ್ದ ಮತ್ತು ಚರ್ಯೆಗಳಿಂದ ನಮ್ಮನ್ನು ಮೂದಲಿಸುತ್ತಿರುವದರಿಂದ ಈ ಯುದ್ಧವನ್ನು ಸಾರಿದ್ದೇವೆ," ಎಂದ.

"ಅಂದರೆ-ಅವು ಯಾವವು ಎಂಬುದನ್ನು ನಿರ್ದಿಷ್ಟವಾಗಿ ಹೇಳು."

ಮುಖ್ಯ ಮಂತ್ರಿಗೆ ಪೇಚಿಗಿಟ್ಟುಕೊಂಡಿತು. ಉಗುಳು ನುಂಗಿಕೊಂಡು ಆತ, "ಪ್ರಭು, ನನ್ನ ಕಾರ್ಯದರ್ಶಿಗೆ ಎಲ್ಲ ವಿವರಗಳೂ ಗೊತ್ತು. ಅವನನ್ನು ಕೇಳುತ್ತೇನೆ," ಎಂದ.

ಕಾರ್ಯದರ್ಶಿ ಬಂದ. ಮುಖ್ಯ ಮಂತ್ರಿಯ ಅಪ್ಪಣೆಯಂತೆ ಆತ ಬುದ್ಧನಿಗೆ, "ಪ್ರಭು, ಶಾಕ್ಯರು ನಮ್ಮನ್ನು ಹೇಡಿಗಳೆಂದರು. ದನಗಾಹಿಗಳೆಂದರು. ನಾವೂ ಯೋದ್ಧರೇ ಅಲ್ಲವೆ! ಸಮಯ ಬಂದಾಗ ಯುದ್ಧ ಮಾಡುವೆವು, ಎಂದು ನಾವಂದೆವು! ಶಾಕ್ಯರು ನಮ್ಮನ್ನು ಕಲ್ಪನಾತೀತವಾಗಿ ಮೂದಲಿಸಿದ್ದಾರೆ," ಎಂದ.

"ಅವರಾಡಿದ ಅವಹೇಳನದ ಶಬ್ದಗಳು ಯಾವವು ?"

"ಅವು--ನನಗೆ ಮರೆತುಹೋಗಿವೆ. ನನ್ನ ಸಹಾಯಕ ಅಧಿಕಾರಿಯನ್ನು ಕೇಳುತ್ತೇನೆ."

ಸಹಾಯಕ ಅಧಿಕಾರಿ ಬಂದ. ಅವನೂ ಶಾಕ್ಯರಾಡಿದ ನಿಂದ್ಯ ಶಬ್ದಗಳನ್ನು ನೆನಪಿಗೆ ತಂದುಕೊಳ್ಳಲಾರದೆ ಹೋದ. ಕಾರ್ಯದರ್ಶಿಯು, "ಹೇಳು. ನೆನಪು ಮಾಡಿಕೊ," ಎಂದು ಒತ್ತಾಯಿಸಲು ಆತ, "ಅದೇನ್ರಿ, ನೀರಿಗೆ ಸಂಬಂಧಪಟ್ಟ ಮಾತು," ಎಂದ.

ಈ ಮಾತು ತೀರ ಹಾಸ್ಯಾಸ್ಪದವೆನಿಸಿತು. ಆ ಮಾತುಗಳನ್ನು ಕೇಳಿ ರಾತ್ರಿ ಕಾಗೆಗಳು ನಕ್ಕವು. ಆದರೆ ಬುದ್ಧ ನಗಲಿಲ್ಲ. ಕೋಲೀಯರು ಶಾಕ್ಯರ ಮೇಲೆ ಯುದ್ಧ ಸಾರಿದ್ದರ ಕಾರಣವೇನು ಎಂಬುದರ ವಿಚಾರಣೆಯನ್ನು ತಾಳ್ಮೆಯಿಂದ ಮುಂದುವರಿಸಿದ.

ಮುಂದೆ ಮುಖ್ಯ ಕರಣಿಕನನ್ನು ಕರೆಸಿದರು. ಆತನ ಹೇಳಿಕೆಯಂತೆ ಕಾಗದ ಪತ್ರಗಳನ್ನು ಕಾಯ್ದಿಡುವ ಅಧಿಕಾರಿಯನ್ನು ಕರೆಸಲಾಯಿತು. ಆತ ತನ್ನ ಕೈಕೆಳಗಿನವರನ್ನು ಕರೆಸಬೇಕೆಂದನು. ಆದರೆ ಒಬ್ಬರೂ ನಿಶ್ಚಿತವಾದದ್ದೇನನ್ನೂ ಹೇಳಲು ಸಮರ್ಥರಾಗಲಿಲ್ಲ. ಕೋಲೀಯ ರಾಜ ನಿರುಪಾಯನಾಗಿ, ನಿರಾಶನಾಗಿ, ಸೇನೆಯೊಡನೆ ಯುದ್ಧಕ್ಕಾಗಿ ಬಂದಿದ್ದ ಹಳ್ಳಿಯ ಗೌಡ ಆನಂದಸಿಂಹಳನನ್ನು ಕರೆಸಿದನು.

"ಶಾಕ್ಯರ ವಿರುದ್ಧ ಏನೇನೋ ಹೇಳಿದೆಯಂತಲ್ಲ? ಯಾಕೆ?" ಎಂದು ಬುದ್ಧ ಆತನನ್ನು ಕೇಳಿದನು.

ಕೈಜೋಡಿಸಿ ನಿಂತು ಆನಂದ ಸಿಂಹಳ ಹೇಳಿದ: "ಸ್ವಾಮಿ, ಒಂದೇ ಸಮನೆ ಮೂರು ವರ್ಷಗಳಿಂದ ಮಳೆಯಾಗಿಯೆ ಇಲ್ಲ. ನದಿಯ ನೀರು ಬತ್ತಿ ಹೋಗಿದೆ. ಶಾಕ್ಯರು ನದಿಯ ಮೇಲ್ಗಡೆ ತಮ್ಮ ಗದ್ದೆಗಳಿಗೆ ನೀರುಣಿಸಲೆಂದು ಕಲ್ಲು-ಮಣ್ಣುಗಳಿಂದ ಒಡ್ಡು ಕಟ್ಟುತ್ತಿದ್ದಾರೆಂದು ಕೇಳಿದೆ. ನಾವು ಬರಗಾಲದ ಭವಣೆಯನ್ನನುಭವಿಸುವಾಗ ತಾವು ನೀರಿನ ಸಮೃದ್ಧಿಯಿಂದ ಸುಖಪಡುತ್ತಿರುವ ಈ ಶಾಕ್ಯರ ಮೇಲೆ ನಾನು ಹಗೆ ತೊಟ್ಟೆ. ಮರುದಿನ ನಾನು ಹಳ್ಳಿಯ ಚಾವ

ಡಿಗೆ ಹೋಗಿ ಶಾನುಭೋಗನಿಗೆ ಒಂದು ತೆಂಗಿನ ಕಾಯಿಯನ್ನೂ ಹೂಗಳನ್ನೂ ಅರ್ಪಿಸಿ ದೂರಿ ಕೊಂಡೆ. ಅವನು ನನ್ನ ವರಿಷ್ಠನಿಗೆ, ಆತ ತನ್ನ ವರಿಷ್ಠನಿಗೆ, ಮತ್ತೆ ಆ ವರಿಷ್ಠ ತನ್ನ ವರಿಷ್ಠನಿಗೆ ಈ ದೂರಿನ ವಿಚಾರ ತಿಳಿಸಿದರು."

"ಮುಂದೆ?" ಬುದ್ಧ ಕೇಳಿದ.

"ಕೋಲೀಯರು ಶಾಕ್ಯರು ಯುದ್ಧ ಸಾರಿದರು.

"ಪ್ರಭು, ನಾವೆಲ್ಲ ಬಡವರು, ಹಳ್ಳಿಯ ಗೌಡ ನಾಗಿರುವ ನಾನು ಬಹಳಷ್ಟು ಕಷ್ಟಗಳನ್ನು ಕಂಡಿ ದ್ದೇನೆ," ಎಂದು ಗೌಡ ನಾಚಿಕೆಯಿಂದ ತಲೆ ಬಾಗಿಸಿದ.

ಬಹಳ ಹೊತ್ತು ಯಾರೂ ಮಾತಾಡಲಿಲ್ಲ. ಕೊನೆಗೆ ಬುದ್ಧ, "ಮಿತ್ರರೆ, ವಾಸ್ತವದಲ್ಲಿಲ್ಲದ ತುಸು ನೀರಿನ ನೆಪ ಮಾಡಿ ನೀವು ಯುದ್ಧಕ್ಕೆಳ ಸುತ್ತೀರಿ. ಹೋಗಿರಿ, ಅಜ್ಞ ಜನರೇ, ಮುಕ್ತಿಯ ಶ್ರೇಷ್ಠ ಮಾರ್ಗವನ್ನನುಸರಿಸಿರಿ. ದ್ವೇಷವು ದ್ವೇಷ ದಿಂದ ನಿರ್ಮೂಲವಾಗುವದಿಲ್ಲ. ಆದರೆ ಅದು ಪ್ರೇಮ-ವಿಶ್ವಾಸ-ತಿಳಿವಳಿಕೆಗಳಿಂದ ನಿರ್ಮೂಲ ವಾಗುತ್ತದೆ. ಇದೇ ಅಮರ ಸತ್ಯ," ಎಂದು ಹೇಳಿದನು.

ಶಾಕ್ಯ ಮತ್ತು ಕೋಲೀಯರ ನಡುವೆ ಹೀಗೆ ಶಾಂತಿ ಪ್ರಸ್ಥಾಪಿತವಾಯಿತು.



## ಸತ್ಯವೇ ದೇವರು

ಅನಿರ್ವಚನೀಯವಾದ ಒಂದು ಗೂಢ ಶಕ್ತಿಯು ಈ ವಿಶ್ವಸರ್ವಸ್ವವನ್ನೆಲ್ಲ ವ್ಯಾಪಿಸಿಕೊಂಡಿದೆ. ಅದನ್ನು ನಾನು ಕಣ್ಣಿನಿಂದ ಕಾಣೆ. ಆದರೆ ಎಲ್ಲೆಲ್ಲಿಯೂ ತುಂಬಿಕೊಂಡಿದೆ ಎಂಬುದನ್ನು ಅನುಭವಿ ಸುವೆ. ನಮಗೆ ಆ ಅದೃಶ್ಯಶಕ್ತಿಯ ಅನುಭವವಾಗಬಲ್ಲದು. ಆದರೆ ಅದನ್ನು ತರ್ಕದಿಂದ ಪ್ರಮಾಣ ಕೊಟ್ಟು ಸಿದ್ಧಮಾಡಲಿಕ್ಕೆ ಆಗದು. ಯಾಕಂದರೆ ಅದು ಇಂದ್ರಿಯಗೋಚರ ವಸ್ತುಗಳಿಗಿಂತ ತೀರ ಭಿನ್ನವಾದುದು, ಅದು ಇಂದ್ರಿಯಾತೀತವು. ಆದರೆ ದೇವರೆಂಬ ವಸ್ತು ಇರಲಿಕ್ಕೆ ಬೇಕು ಎಂದು ಕೆಲಮಟ್ಟಿಗೆ ಬುದ್ಧಿಯಿಂದ ತಿಳಿದುಕೊಳ್ಳುವದು ಶಕ್ಯವು.

ಈ ಶಕ್ತಿಯು ಸುಷ್ಟವೊ ದುಷ್ಟವೋ? ನನಗಂತೂ ಅದು ಶುದ್ಧ ಕಲ್ಯಾಣಕಾರಕ ಶಕ್ತಿ ಎಂದೆನಿಸುವದು. ಯಾಕಂದರೆ ಸುತ್ತಲೂ ಸಾವು ನೋವುಗಳು ಆವರಿಸಿಕೊಂಡಿರುವಾಗ ಪ್ರಾಣವು ಜೀವಿಸುತ್ತಿರುವದು. ವ್ಯಾಪಿಸಿದ ಅಸತ್ಯವನ್ನು ಸವರಿ ಸತ್ಯವು ಎದ್ದೇಳುವದು. ಮುಸುಕಿದ ಕತ್ತಲೆ ಯನ್ನು ಹರಿದು ಬೆಳಕು ಬೆಳಗುವದು. ಆದುದರಿಂದ ದೇವರೆಂದರೆ ಪ್ರಾಣ. ಸತ್ಯ, ಬೆಳಕು. ಅವನು ಪ್ರೇಮಸ್ವರೂಪಿಯು; ಅವನು ಸರ್ವಮಂಗಲನು.

—ಬಾಪು

# ಜೀವನ ನೌಕಾಯಾನ

ಸರ್ ಆರ್. ಬಾಡೆನ್ ಪಾವೆಲ್

ಉತ್ತರ ಕೆನಡಾದ ಒಂದು ಮಹಾಸರೋವರದಲ್ಲಿ ಒಮ್ಮೆ ನೌಕಾವಿಹಾರ ಮಾಡುತ್ತಿದ್ದಾಗ ನಾನು ಬಿರುಗಾಳಿಯಲ್ಲಿ ಸಿಲುಕಿದೆ. ತತ್ಕಾಲದಲ್ಲಿ ಅದು ಭೀಕರ ಅನುಭವವಾಗಿತ್ತು. ಆದರೆ ಅದೊಂದು ಸಾರ್ಥಕ ಅನುಭವವೂ ಹೌದು.

ಅಗಲಕಿರಿದಾದ ಹೊಳೆಯಿಂದ ನರುಬಿಸಿಲಲ್ಲಿ ಹೊರಟಿದ್ದ ನಮಗೆ ಸರಸ್ಸಿನ ವಿಸ್ತಾರದಲ್ಲಿ ಹೊಕ್ಕಾಗ ಮತ್ತು ಈ ಬಿರುಗಾಳಿಯ ಉತ್ಪಾತ ಎದ್ದಾಗ ಹೊಸತೊಂದು ಅನುಭವ ಪ್ರತೀತವಾಯಿತು.

ಈ ವರೆಗೆ ನಮ್ಮ ನಾವೆ ನಮ್ಮ ಪಾಲಿಗೆ ನದಿಗುಂಟ ನಮ್ಮನ್ನು ಸಾಗಿಸುವ ವಾಹನ ಮಾತ್ರವಾಗಿತ್ತು; ಈಗ ಅದೇ ನಮ್ಮ ಜೀವದ ಏಕಮಾತ್ರ ಆಶಾಬಿಂದುವಾಯಿತು.

ನಮ್ಮ ನಾವೆಯ ಹುಟ್ಟು ಮೊದಲು ನಮ್ಮ ವಾಹನವನ್ನು ಮುಂದೊತ್ತುವ ಸಾಧನ ಮಾತ್ರವಾಗಿದ್ದುದು ಈಗ ತೆರೆಗಳ ಉತ್ತುಂಗ ಆಘಾತಗಳಿಂದ ನಾವೆಯನ್ನು ತಪ್ಪಿಸಿ ನಮ್ಮ ಜೀವ ಉಳಿಸಿಕೊಳ್ಳುವ ಏಕಮಾತ್ರ ಸಾಧನವಾಯಿತು. ಎಲ್ಲವೂ ಈ ಒಂದು ಸಾಧನದ ಸರಿಯಾದ ಉಪಯೋಗವನ್ನೇ ಅವಲಂಬಿಸಿತ್ತು.

"ಆಖಾತದಲ್ಲಿ ಸಾಗುವಾಗ ನಾಲ್ಕು ತಾಸು ಅವಧಿಯಲ್ಲಿ ಒಂದು ಸಾವಿರಕ್ಕಿಂತ ಹೆಚ್ಚು ತೆರೆಗಳು ಅಪ್ಪಳಿಸುವವು. ಅವುಗಳಲ್ಲಿ ಒಂದರಂತೆ ಒಂದಿರುವುದಿಲ್ಲ. ಸರಿಯಾಗಿ ಎದುರಿಸದಿದ್ದರೆ ಯಾವ ಒಂದು ಒಂದು ತೆರೆಯೂ ನಿಮ್ಮನ್ನು ಕಬಳಿಸಿಬಿಡಬಹುದು" ಎಂದು ಸ್ಟುವಾರ್ಟ ವೈಟರು ತಮ್ಮ ಪುಸ್ತಕದಲ್ಲಿ ಹೇಳಿ, ಎಂಥೆಂಥ ತೆರೆಗಳನ್ನು ಹೇಗೆ ಹೇಗೆ ಎದುರಿಸಬೇಕೆಂದು ವಿವರಿಸಿದ್ದರ ನೆನಪಾಯಿತು.

"ನೀವು ತಕ್ಷಣ ಸುಧಾರಿಸಿಕೊಳ್ಳಬೇಕು. ಒಂದು ಕ್ಷಣ ಹೆಚ್ಚು ತಡೆದರೂ ಸಾಕು, ನೀರು-ಪಾಲಾಗುವಿರಿ," ಎಂದು ಅವರು ಎಚ್ಚರಿಸಿದ್ದಾರೆ.

ಪ್ರತಿಕ್ಷಣದಲ್ಲಿಯೂ ಸರ್ವಸ್ವವೂ ನಿಮ್ಮ ಏಕಾಗ್ರ ಚಿತ್ತ, ಧೈರ್ಯ ಮತ್ತು ಚುರುಕುತನವನ್ನೇ ಅವಲಂಬಿಸಿದೆ. ಎಳ್ಳಷ್ಟು ಆಲಸ್ಯ ತೋರಿಸಿದರೆ ನೀವು ಮುಳುಗುವಿರಿ. ಆದರೆ ಈ ಹೋರಾಟಕ್ಕೂ ಪ್ರತಿಫಲವಿದೆ. "ಇದಕ್ಕಿಂತ ಹೆಚ್ಚಾಗಿ ನಿಮ್ಮ ದೈಹಿಕ ಮಾನಸಿಕ ಸತ್ವಗಳನ್ನು ಸಂಪೂರ್ಣವಾಗಿ ಜಾಗೃತಗೊಳಿಸುವ ಪರಿಸ್ಥಿತಿ ಬೇರಾವುದೂ ಇರಲಾರದು. ನಿಮ್ಮಲ್ಲಿ ಒಂದು ಅಪೂರ್ವ ಉತ್ಸಾಹ ತುಂಬುವುದು. ಒಂದು ತೆರೆಯ ಸಮಸ್ಯೆ ತೀರುತ್ತಲೇ ಮುಂದಿನ ತೆರೆಯ ಪ್ರಶ್ನೆಯತ್ತ ನಿಮ್ಮ ಮನಸ್ಸು ಜಗಿಯುವುದು. ಅದೊಂದು ಪ್ರಚಂಡ ಉನ್ಮಾದ. ಪ್ರತಿಯೊಂದು ತೆರೆಯೂ ನಿಮ್ಮ ಒಬ್ಬ ಜೀವಂತ ಶತ್ರುವಿನಂತೆ ಭಾಸವಾಗುವುದು. ನಿಮ್ಮ ಜೀವವೆಲ್ಲ ತೆರೆಗಳನ್ನು ಕೊಲ್ಲುವುದರಲ್ಲಿ ಮಗ್ನವಾಗಿರುವುದರಿಂದ ನೀವು ಎಷ್ಟು ವೇಗದಿಂದ ಸಾಗುತ್ತಿದ್ದೀರೆಂಬ ವಿಚಾರಕ್ಕೆ ಕೂಡ ಸಮಯವಿಲ್ಲ. ಗುರಿಗೆ ಐವತ್ತು ಮಾರುಗಳಷ್ಟು ಹತ್ತಿರ ಬರುವ ವರೆಗೂ ನಿಮಗೆ ಮೆಲ್ಲಮೆಲ್ಲನೆ ಗುರಿಯನ್ನು ಸಮೀಪಿಸುತ್ತಿರುವ ಸಂಗತಿಯ ಕಡೆಗೂ ಧ್ಯಾನ ಹರಿಯುವುದಿಲ್ಲ. ಆಗ ಕೂಡ ನೀವು ನಿಮ್ಮ ಯತ್ನದಲ್ಲಿ ಶೈಥಿಲ್ಯ ತೋರುವಂತಿಲ್ಲ. ಯಾಕಂದರೆ ಕೊನೆಯ ಐವತ್ತು ಮಾರುಗಳಲ್ಲಿ ನಿಮ್ಮನ್ನು ಎದುರಿಸಲಿರುವ ತೆರೆಗಳು ಹಿಂದಿನ ನಾಲ್ಕು ಮೈಲುಗಳಲ್ಲಿ ಎರಿಬಂದ ತೆರೆಗಳಷ್ಟೇ ಅಪಾಯಕರವಾಗಿವೆ."

ಹೌದು–ಉದ್ಯಮಶೀಲ ಜೀವನದ ಪರಿಯೂ ಇದೇ ಬಗೆಯಾಗಿದೆ !

# ಕಸ್ತೂರಿ

" ಕಸ್ತೂರೀ ತಿಲಕ "



ನ ಹಿ ಕಸ್ತೂರಿಕಾಮೋದಃ
ಶಪಥೇನ ನಿವಾರ್ಯತೇ

ಎಂಬೊಂದು ಸುಭಾಷಿತ ಸಂಸ್ಕೃತದಲ್ಲಿದೆ. ಗುಣಗಳಿದ್ದಲ್ಲಿ ಅವು ಬೆಳಕಿಗೆ ಬಂದೇತೀರುವವು ಎಂಬ ಸತ್ಯಕ್ಕೆ ನಿದರ್ಶನವಾಗಿ ಸುಭಾಷಿತಕಾರನು, " ಕಸ್ತೂರಿಯ ಕಂಪು [ ಇಲ್ಲವೆಂದು ] ಆಣೆ ಹಾಕಿದರೂ ಹೋಗದು " ಎಂದು ಹೇಳುತ್ತಾನೆ. ಭಾರತೀಯರು ನೂರಾರು ತರದ ಸಸ್ಯಜ, ಪ್ರಾಣಿಜ, ಧಾತುಜ ಸುಗಂಧ ಪದಾರ್ಥಗಳನ್ನು ಉಪಯೋಗಿಸಿ ಬಲ್ಲರು. ಆದರೆ ಕಸ್ತೂರಿಗಿಂತ ಮಿಗಿಲಾದ ಸುಗಂಧ ಅವರಿಗೆ ಸಿಗಲಿಲ್ಲ. ಕಸ್ತೂರಿಯು ಸುಗಂಧಗಳಲ್ಲಿ ಪರಾಕಾಷ್ಠೆ; ಚಕ್ರವರ್ತಿ.

ನಮ್ಮ ಸಾಹಿತ್ಯದಲ್ಲಿ ಕಸ್ತೂರಿಯ ಕಂಪು ಎಲ್ಲೆಲ್ಲಿಯೂ ಇಡುಗಿದೆ. ಕಾಳಿದಾಸನ ಋತುಸಂಹಾರ, ಕುಮಾರ ಸಂಭವ, ರಘುವಂಶ ಕಾವ್ಯಗಳಲ್ಲಿ ಅವರ ಉಲ್ಲೇಖಗಳು ಬಂದಿವೆ. ವಸಂತಕಾಲದಲ್ಲಿ ರಮಣಿಯರು ಮೃಗನಾಭಿ (ಕಸ್ತೂರಿ) ಬೆರತ ಚಂದನವನ್ನು ತೊಡೆದುಕೊಳ್ಳುತ್ತಿದ್ದರು; ಶ್ರೀರಾಮಚಂದ್ರನನ್ನು ಪಟ್ಟಾಭಿಷೇಕಕ್ಕಾಗಿ ಅಲಂಕರಿಸುವಾಗ ಕಸ್ತೂರಿಯುಕ್ತ ಚಂದನವನ್ನು ತೊಡೆದು ಮೇಲೆ ಗೋರೋಚನದಿಂದ ಚಿತ್ತಾರಗಳನ್ನು ರಚಿಸಿದರು—ಎಂದು ಅವನು ಬಣ್ಣಿಸಿದ್ದಾನೆ.

ಕನ್ನಡದ ಪುನರುತ್ಥಾನದ ಹರಿಕಾರನಾದ ಮುದ್ದಣ ಕವಿಗೆ ಕನ್ನಡ ನುಡಿಯ ಸೊಬಗನ್ನು ಬಣ್ಣಿಸಬೇಕೆಂದಾಗ ಮೊದಲು ಹೊಳೆಯುವುದು ಕಸ್ತೂರಿಯ ಹೆಸರು. "ಕನ್ನಡಂ ಕತ್ತುರಿಯಲ್ತೆ!" ಎಂಬ ಅಮರವಾಕ್ಯ ಅವನ ಬಾಯಿಂದ ಉದುರುತ್ತದೆ. ಗೋವಿನ ಕಥೆಯ ಕಾಳಿಂಗ ಗೊಲ್ಲನು ದನ ಕಾಯಲು ಹೋಗುವಾಗಲೂ ಕಸ್ತೂರಿ ತಿಲಕ ಹಚ್ಚಿಕೊಳ್ಳುತ್ತಾನೆ! ಕಸ್ತೂರೀ ರಂಗನ ಹೆಸರು ಕೇಳದವರಾರು?

ಕನ್ನಡಕ್ಕೂ ಕಸ್ತೂರಿಗೂ ಇರುವ ಬಾಂಧವ್ಯ ಜನಪದ ವಾಣಿಯಲ್ಲಿ ಎಲ್ಲಕ್ಕೂ ಹಿರಿದಾಗಿ ಕಾಣಿಸುತ್ತದೆ. "ಕತ್ತೆ ಕಸ್ತೂರಿ ಹೊತ್ತ ಹಾಗೆ" ಎಂಬ ಸಾಮ್ಯ, ಕಸ್ತೂರಿ ಬೊಟ್ಟು, ಕಸ್ತೂರಿ ಕಡ್ಡಿ ಸೀರೆ, ಕಸ್ತೂರಿ ಮಾವು, ಕಸ್ತೂರಿ ಮಲ್ಲಿಗೆ, ಕಸ್ತೂರಿ ಗೊಬ್ಬಳಿ—ಮುಂತಾದ ಅನೇಕ ಶಬ್ದಗಳು ಕನ್ನಡಿಗರಿಗೆ ಕಸ್ತೂರಿಯ ಮೇಲಿರುವ ಪ್ರೀತಿಯ ಕುರುಹುಗಳಾಗಿವೆ.

ಕಸ್ತೂರಿಯ ಉಪಯೋಗ ಅಂಗಶೃಂಗಾರಕ್ಕಷ್ಟೇ ಅಲ್ಲ. ಅದು ಅಮೂಲ್ಯ ಔಷಧಿ ಪದಾರ್ಥವಾಗಿದೆ. ಪ್ರಾಚೀನ ಆಯುರ್ವೇದ ಗ್ರಂಥಗಳಲ್ಲಿ ಕೂಡ ಅದರ ಹೆಸರು ಬರುತ್ತದೆ. ತೀಕ್ಷ್ಣವಾದ ಕಂಪುಳ್ಳ ಈ ಪದಾರ್ಥವು ಉತ್ತೇಜಕ ಗುಣವುಳ್ಳದ್ದು. ಅದರ ಪರಿಣಾಮ ಶರೀರದ ಮೇಲೆ ತತ್‌ಕ್ಷಣ ಆಗುತ್ತದೆ. ಸನ್ನಿಪಾತ, ಕಿಲಾಸ ಕುಷ್ಠ, ಶ್ವೇತಕುಷ್ಠ, ಮುಖರೋಗ, ಕಫ, ಶೀತ, ವಾತಾದಿ ಅನೇಕ ರೋಗಗಳಲ್ಲಿ ಇದನ್ನು ಪ್ರಯೋಗಿಸಲಾಗುತ್ತದೆ.

ಆಯುರ್ವೇದ ಗ್ರಂಥಗಳ ಪ್ರಕಾರ ಕಸ್ತೂರಿಯಲ್ಲಿ ಕಪಿಲ, ಪಿಂಗಲ, ಕೃಷ್ಣವೆಂದು ಮೂರು ಜಾತಿಯಿದ್ದು ಕೊನೆಯದು ಅತ್ಯುತ್ಕೃಷ್ಟವಾದುದು. ಕೃಷ್ಣ ಕಸ್ತೂರಿಯು ಕಾಮರೂಪ (ಆಸಾಮ)ದಲ್ಲಿಯೂ ಪಿಂಗಲ ವರ್ಣದ್ದು ನೇಪಾಲದಲ್ಲಿಯೂ ಕಪಿಲ ವರ್ಣದ್ದು ಕಾಶ್ಮೀರದಲ್ಲಿಯೂ ಸಿಗುತ್ತವೆಂದು ಹೇಳಲಾಗಿದೆ.

ಈ ಉಲ್ಲೇಖಗಳಿಂದ ಹಿಂದಿನ ಕಾಲದಲ್ಲಿ ಆಸಾಮ, ನೇಪಾಲ ಮತ್ತು ಕಾಶ್ಮೀರಗಳಲ್ಲಿ ಕಸ್ತೂರೀ ಮೃಗಗಳಿರುತ್ತಿದ್ದವೆಂದು ಅರ್ಥವಾಗುತ್ತದೆ. ಆದರೆ ಇಂದು ಕಸ್ತೂರಿ ಮೃಗಗಳ ಆವಾಸಸ್ಥಾನ-ಮುಖ್ಯವಾಗಿ ತಿಬೇಟ ಮತ್ತು ನೇಪಾಲ ದೇಶಗಳಾಗಿವೆ. ಅಂತೂ ಹಿಮಾಲಯವೇ ಕಸ್ತೂರೀ ಮೃಗಗಳ ಏಕಮಾತ್ರ ಆಶ್ರಯವೆಂಬುದು ಖಂಡಿತ.

ಅಮೂಲ್ಯ ಸುಗಂಧಿತ ಪದಾರ್ಥಗಳನ್ನು ಸ್ರವಿಸುವ ಪ್ರಾಣಿಗಳಲ್ಲೆಲ್ಲ ಕಸ್ತೂರೀ ಮೃಗವು ಸುಂದರವೂ ದುರ್ದೈವಿಯೂ ಆಗಿದೆ. ಯಾಕೆಂದರೆ ಅದರ ಸಂಪತ್ತೇ ಅದರ ಮೃತ್ಯು. ಕಸ್ತೂರಿಯಂತೆ ಸುಗಂಧಿತವೂ ಬೆಲೆಬಾಳುವವೂ ಆದ ಗೋರೋಚನ ಮತ್ತು ಪುನುಗುಗಳು ಅವುಗಳನ್ನು ಕೊಡುವ ಪ್ರಾಣಿಗಳಿಗೆ ಸಾವು ತರುವುದಿಲ್ಲ. ಪುನುಗನ್ನು ಜೀವಂತ ಪ್ರಾಣಿಯಿಂದಲೇ ಸಂಗ್ರಹಿಸುತ್ತಾರೆ. ಗೋರೋಚನವನ್ನು ಸತ್ತ ದನದ ತಲೆಯೊಡೆದು ತೆಗೆಯುತ್ತಾರೆ. ಆದರೆ ಕಸ್ತೂರೀಮೃಗವನ್ನು ಕೊಂದೇ ಅದರ ಕಸ್ತೂರೀಕೋಶದಿಂದ ಕಸ್ತೂರಿಯನ್ನು ಅಪಹರಿಸಬೇಕಾಗುತ್ತದೆ.

ಕಸ್ತೂರೀಮೃಗವು ಚಿಗರೆ ಜಾತಿಯದೇ. ಆದರೆ ಇದಕ್ಕೆ ಕೋಡುಗಳಿಲ್ಲ. ಅದು ಚಿಗರೆ ಕುಲದ ಪ್ರಾಣಿಗಳಲ್ಲೆಲ್ಲ ಅತಿ ಸಣ್ಣದು.

ಹಿಮಾಲಯ ಪರ್ವತದಲ್ಲಿ ೭,೦೦೦ ದಿಂದ ೯,೦೦೦ ಫೂಟೆತ್ತರದ ಅರಣ್ಯ ಗಿರಿ ಕಂದರಗಳಲ್ಲಿ ಕಸ್ತೂರೀ ಮೃಗವನ್ನು ಕಾಣಬಹುದು. ಅದನ್ನು ಕಾಣುವುದಾಗಲಿ ಹೊಡೆಯುವುದಾಗಲಿ ಅತಿ ಕಠಿಣವಲ್ಲ. ಆದರೆ ತೀರ ಹತ್ತರ ಹೋದ ಹೊರತು ಗಂಡು ಹೆಣ್ಣುಗಳ ಭೇದ ತಿಳಿಯುವದಿಲ್ಲ.

ನಿಮಗೆ ಕಸ್ತೂರಿ ಬೇಕಾದರೆ ಗಂಡು-ಹೆಣ್ಣುಗಳ ಭೇದವನ್ನು ಗುರುತಿಸಲೇಬೇಕು. ಯಾಕೆಂದರೆ ಕಸ್ತೂರಿಯ ಚೀಲವನ್ನು ಧರಿಸಿರುವುದು ಗಂಡು ಮಾತ್ರ. ಗಂಡನ್ನು ಗುರುತಿಸಲು ಅದಕ್ಕಿರುವ ಚಿಕ್ಕ ದಾಡೆಗಳೇ ಆಧಾರ. ದಾಡೆಗಳು

ಮೇಲೊಸಡಿಯಿಂದ ವಕ್ರವಾಗಿ ಕೆಳಗೆ ಹೊರಗೆ ನೀಡಿರುತ್ತವೆ.

ಕಸ್ತೂರೀ ಮೃಗವು ಸಾಮಾನ್ಯವಾಗಿ ಬೂದಿ ಬಣ್ಣ ಮಿಶ್ರವಾದ ಕಂದು ಹಂಡ-ಬಂಡ ಬಣ್ಣದ್ದಾಗಿದ್ದು ಹೊಟ್ಟೆಯ ಭಾಗ ಶುಭ್ರವಾಗಿರುವುದು. ಗಂಡು ಸುಮಾರು ಮೂರು ಫೂಟುದ್ದ ಎರಡು ಫೂಟೆತ್ತರವಾಗಿರುತ್ತದೆ. ಅದರ ಕಿಬ್ಬೊಟ್ಟೆಯಲ್ಲಿ ಸುಮಾರು ಒಂದೂವರೆ ಇಂಚಿನಷ್ಟು ವ್ಯಾಸದ ಗೋಲಾಕಾರವಾದ ಕಸ್ತೂರೀ ಕೋಶವಿರುವುದು. ತಾಜಾ ಇರುವಾಗ ಮೆತ್ತಗಿರುವ ಈ ಸುಗಂಧಿತ ಕೃಷ್ಣ ಪದಾರ್ಥದ ಅಲ್ಪ ಸಂಗ್ರಹವು ಕಸ್ತೂರೀ ಮೃಗವನ್ನು ಬೇಟೆಗಾರರ ಗುಂಡಿಗೆ ಬಲಿಯಾಗಿ ಮಾಡುತ್ತದೆ. ಅದರ ಮಾಂಸವೂ ಅತಿ ರುಚಿಕರವೆಂದು ಹೇಳಲಾಗಿದೆ.

ಕಸ್ತೂರೀ ಮೃಗಕ್ಕೆ ಅಡವಿಗಳೆಂದರೆ ಪ್ರೀತಿ. ಅದು ಒಂದು ರೀತಿಯಲ್ಲಿ ಅವಧೂತ. ಯಾಕೆಂದರೆ, ಅದು ಏಕಾಂಗಿಯಾಗಿ ಮಲೆಗಳಲ್ಲಿಯೂ ತಪ್ಪಲ ಹುಲ್ಲುಗಾವಲುಗಳಲ್ಲಿಯೂ ಸಂಚರಿಸುತ್ತಿರುವುದೇ ಹೆಚ್ಚು. ಅಪರೂಪವಾಗಿ ಅದು ತನ್ನ ಜತೆಗಾತಿಯೊಡನೆ ಹೊರಟಿರುವುದುಂಟು.

ನೀಳವಾದ ಕಾಲುಗಳುಳ್ಳ ಕಸ್ತೂರೀ ಮೃಗದ ಚಲನೆ ಒಂದು ವಿಚಿತ್ರ ಭಂಗಿಯಲ್ಲಿ ಸಾಗುತ್ತದೆ. ಆದರೆ ಅದರ ಹೆಜ್ಜೆ ಬಲು ದೃಢವಾಗಿರುತ್ತದೆ. ಹೆದರಿದಾಗ ಅದೊಂದು ಬಗೆಯ ಫೂತ್ಕಾರ ಮಾಡುತ್ತ ಅಕ್ಷರಶಃ ನಾಗಾಲೋಟದಿಂದ ಜಿಗಿಜಿಗಿದು ಪಲಾಯನ ಮಾಡುತ್ತದೆ.

ಗಂಡು ಕಸ್ತೂರೀ ಮೃಗದ ನಾಭಿಯಲ್ಲಿ ಕಸ್ತೂರಿಯ ಚೀಲವಲ್ಲದೇ ಅದರ ಬಾಲದಲ್ಲಿರುವ ಒಂದು ಗ್ರಂಥಿಯೂ ವಾಸನೆಯುಳ್ಳ ರಸವನ್ನು ಸ್ರವಿಸುತ್ತದೆ. ಇದು ಅದರ ಕೂದಲುಗಳನ್ನು ಚರ್ಮಕ್ಕೆ ಬಲವಾಗಿ ಅಂಟಿಸುತ್ತದೆ. ಅದರ ಮೈಗೆ ದಟ್ಟವಾದ ಕೂದಲ ಹೊದಿಕೆ ಇರುವುದರಿಂದ ಕಸ್ತೂರೀ ಮೃಗವು ಚಳಿಗೆ ಅಂಜುವದಿಲ್ಲ. ಆದ್ದರಿಂದ ಪರ್ವತಗಳ ಹಿಮ ಪ್ರಾಂತದ ವರೆಗೂ ಅದರ ಸಂಚಾರವಿರುವುದು.

ಕಸ್ತೂರೀ ಮೃಗಗಳು ಚಳಿಗಾಲದಲ್ಲಿ ಬೆದೆಗೆ ಬರುತ್ತವೆ. ಹೆಣ್ಣು ಮೃಗವು ಒಮ್ಮೆಗೆ ಒಂದೆರಡು ಮರಿಗಳನ್ನು ಈಯುತ್ತದೆ. ಚಿಕ್ಕಂದಿನಲ್ಲಿ ಅವುಗಳ ಮೈಮೇಲೆ ಬಿಳಿ ಚುಕ್ಕೆಗಳಿರುತ್ತವೆ. ಮರಿಗಳು ಆರು ವಾರಗಳಲ್ಲಿ ತಮ್ಮ ತಮ್ಮ ಪಾಡು ನೋಡಿಕೊಳ್ಳಲು ಕಲಿಯುತ್ತವೆ.

ಹುಲ್ಲು, ಎಲೆ, ಹೂಗಳು ಕಸ್ತೂರೀಮೃಗದ ಆಹಾರ. ಆದರೆ ಅದು ಹಾವುಗಳನ್ನೂ ತಿನ್ನುತ್ತದೆಂಬ ಲೋಕವಾರ್ತೆಯೊಂದು ಪ್ರಚಲಿತವಾಗಿದೆ. ಇದಕ್ಕೆ ನಿಸ್ಸಂಶಯವಾದ ಪುರಾವೆಯಿಲ್ಲೆಂದು ಈ. ಪಿ. ಸ್ಟೆಬಿಂಗನೆಂಬ ಲೇಖಕನು ಹೇಳುತ್ತಾನೆ.

ಕಸ್ತೂರೀ ಮೃಗವು ಸಾಧು ಪ್ರಾಣಿಯಾಗಿದ್ದರೂ ಅದರ ಮೈಬಣ್ಣವು ಅದರ ಜೀವವುಳಿಸಲು ತುಂಬ ನೆರವಾಗಿದೆ. ಅರಣ್ಯದ ಪರಿಸರಕ್ಕೆ ಹೊಂದಿಕೊಳ್ಳುವ ಬಣ್ಣವಿರುವುದರಿಂದ ಅದು ಥಕ್ಕನೆ ಬೇಟೆಗಾರರ ಲಕ್ಷ್ಯಕ್ಕೆ ಬರುವುದಿಲ್ಲ.





**ಅದು ಎಷ್ಟು ಬೇಗ ಬರುವುದೋ ಅಷ್ಟು ಬೇಗ ಮಾಯವಾಗುತ್ತದೆ !**

# ಆ ನೆಹರೂ ಕೋಪ !

ಪಂಡಿತ್ ನೆಹರೂ ಅವರಿಗೆ ಸಿಟ್ಟು ಬಂದರೆ ಅದು ಭಯಾನಕ ದೃಶ್ಯ. ಅದು ಮೇಲಿಂದ ಮೇಲೆ ಬರುವದೆಂಬ ಕಾರಣದಿಂದ ಸುತ್ತಮುತ್ತಲಿನವರನ್ನು ಕಡಿಮೆ ತತ್ತರಗೊಳಿಸುವದಿಲ್ಲ. ಅದು ಅನಿರೀಕ್ಷಿತ ಸ್ಥಳಗಳಲ್ಲಿ ಅನಿರೀಕ್ಷಿತ ಕಾಲದಲ್ಲಿ ಪುಟಿದೇಳಬಹುದು ಮತ್ತು ಅಷ್ಟೇ ಅನಿರೀಕ್ಷಿತವಾಗಿ ತಣಿದು ಹೋಗುವುದೂ ಖಂಡಿತ. ಅದರ ಪರಿಣಾಮವಾಗಿ ಪುಸ್ತಕ, ಮೇಜು ಮೊದಲಾದ ಜಡ ಪದಾರ್ಥಗಳಿಗಷ್ಟೇ ಹಿಂಸೆಯಾಗುವದು. ಆದರೆ ಅದು ಕುದಿಯುತ್ತಿದ್ದಷ್ಟು ಕಾಲ ನಿಜವಾದ ಜ್ವಾಲಾಮುಖಿಯಂತೆಯೇ ಕಾಣುವುದು.

ಇನ್ನೂ ಒಂದು ವರ್ಷವಾಗಿಲ್ಲ, ಅವರ ಕೋಪ ಒಮ್ಮೆ ಆಕಾಶ ಮಾರ್ಗದಲ್ಲಿ ಕೆರಳಿತ್ತು! ಅದು ನಡೆದದ್ದು ಹೀಗೆ: ಅವರು ದಕ್ಷಿಣ ಭಾರತದ ಪಾಂಡಿಚೇರಿ, ಮದ್ರಾಸ್ ಮೊದಲಾದ ಪ್ರದೇಶಗಳ ಸಂಚಾರಕ್ಕಾಗಿ ವಿಶೇಷ ವಿಮಾನದಲ್ಲಿ ದಿಲ್ಲಿಯ ಪಾಲಮ ನಿಲ್ದಾಣದಿಂದ ಹೊರಟಿದ್ದರು. ವಿಮಾನ ನಾಗಪುರದಲ್ಲಿ ಸ್ವಲ್ಪ ತಂಗಿ ಮುಂದೆ ಹೋಗುವದಿತ್ತು.

ವಿಮಾನ ನಾಗಪುರದಲ್ಲಿ ಇಳಿಯುವ ಅರ್ಧ ತಾಸು ಮುಂಚೆ ಯಾವದೋ ಪುಸ್ತಕ ಓದುತ್ತಿದ್ದ ಜವಾಹರರು ಒಮ್ಮೆಲೇ ಅದನ್ನು ಕೆಳಗಿಟ್ಟು ವೈಮಾನಿಕನ ಸಂಗಡ ಮಾತಾಡಲು ಕ್ಯಾಬಿನ್ನಿನೊಳಗೆ ಹೋದರು. ತುಸು ಹೊತ್ತಿನ ನಂತರ ಮರಳಿ ತಮ್ಮ ಆಸನದಲ್ಲಿ ಕುಳಿತು ಕೆಳಗಿನ ಭೂಪ್ರದೇಶದ ಚಲಂತ ದೃಶ್ಯದ ಸೌಂದರ್ಯ

ವನ್ನು ಅವಲೋಕಿಸಿ ಅನುಭವಿಸಿದರು.

ಹಠಾತ್ತಾಗಿ ಪ್ರಧಾನಮಂತ್ರಿಗಳಿಗೆ ತಾವು ಅವಲೋಕಿಸುತ್ತಿದ್ದ ಪುಸ್ತಕದ ಜ್ಞಾಪಕವಾಗಿ ಅವರ ಕಡೆ ದೃಷ್ಟಿ ಹೊರಳಿತು. ಆದರೆ ಪುಸ್ತಕ ಕಣ್ಣಿಗೆ ಬೀಳಲಿಲ್ಲ. ಅವರ ತಲೆ ಬಿಸಿಯೇರಲು ಅಷ್ಟೇ ಸಾಕಾಯಿತು. ಅವರು ಹತ್ತಿರವಿದ್ದ ವರ್ತಮಾನ ಪತ್ರವನ್ನು ತೆಗೆದು ಕೆಳಗೊಗೆದರು. ಪುಸ್ತಕಗಳ ರಾಶಿಯನ್ನು ಬುಡಮೇಲು ಮಾಡಿದರು. ಇಲ್ಲ; ಪುಸ್ತಕವಿಲ್ಲ. ಈಗ ಅವರು ಕೆಂಡವೇ ಆದರು. ಅವರು ಗಟ್ಟಿಯಾಗಿ ಬಡಬಡಿಸುತ್ತ ವಿಮಾನದ ಗಾಜಿನ ಕಿಡಕಿಯನ್ನು ಅಪ್ಪಳಿಸ ತೊಡಗಿದರು.

ಈ ಕೋಲಾಹಲದಿಂದ ಅವರ ಮುಂದೆಯೇ ಕುಳಿತಿದ್ದ ಮಗಳು ಶ್ರೀಮತಿ ಇಂದಿರಾ ಗಾಂಧಿ ಮತ್ತು ರೇಲ್ವೆ ಮಂತ್ರಿ ಲಾಲಬಹಾದೂರ ಶಾಸ್ತ್ರಿಗಳು ಚಕಿತರಾದರು. ಪರಿವಾರವೆಲ್ಲವೂ ಸ್ಥಳ ಬಿಟ್ಟಿದ್ದು, ಕೆಂಜಿಗ ಮುಖ ಮಾಡಿಕೊಂಡು ಹಾರಾಡುತ್ತಿದ್ದ ಅವರನ್ನು ನೋಡಿ ಗಾಬರಿಯಾಯಿತು.

ಇಂದಿರಾ ಸೌಮ್ಯವಾಗಿ, "ಏನಾಯಿತು?" ಎಂದು ವಿಚಾರಿಸಿದರು. ಆದರೆ ತಂದೆಗೆ ಅದು ಕೇಳಿಸಿದ್ದರೆ ತಾನೇ? ಲಾಲ ಬಹಾದೂರರು ತಾವೊಮ್ಮೆ ಧೈರ್ಯಮಾಡಿ ಕೇಳಿದರು. ಪ್ರಧಾನ ಮಂತ್ರಿಗಳು ಪುಸ್ತಕಗಳನ್ನು ಚ ಲ್ಲಾ ಪಿ ಲ್ಲಿ ಮಾಡುತ್ತ, "ಇದೇ ಕ್ಯಾಬಿನ್ನಿಗೆ ಹೋಗುವ ಮೊದಲು ಇಲ್ಲೇ ಪುಸ್ತಕ ಇಟ್ಟು ಹೋಗಿದ್ದೆ, ಈಗ ಕಾಣೆಯಾಗಿದೆ. ಒಳ್ಳೇ ತಮಾಷೆ ಆಯಿತಲ್ಲ!" ಎಂದು ಗರ್ಜಿಸಿದರು.

ಕೋಪದ ಕಾರಣವನ್ನರಿತು ಎ ಲ್ಲ ರೂ ಪುಸ್ತಕ ಹುಡುಕಲು ಪ್ರಾರಂಭಿಸಿದರು. ಪ್ರಧಾನ ಮಂತ್ರಿಗಳು ತಮ್ಮ ಆಸನದ ಮೇಲೆ ಬುಸುಗುಟ್ಟುತ್ತ ಕುಳಿತರು. ಆದರೆ ಪುಸ್ತಕ ಯಾವುದೆಂದು ಗೊತ್ತಿಲ್ಲದೇ ಅವರ ಶೋಧ ಸಾಗಿದ್ದರಿಂದ ಯಶ ಸಿಗುವ ಆಸೆಯಿರಲಿಲ್ಲ. ಪುಸ್ತಕ ಯಾವುದೆಂದು ಕೇಳುವ ಧೈರ್ಯವಂತೂ ಯಾರಿಗೂ ಇದ್ದಿಲ್ಲ.

ಇಂದಿರಾ ಗಾಂಧಿಯವರಿಗೆ ತಟ್ಟನೆ ಏನು ಹೊಳೆಯಿತೋ ಅವರು ತಂದೆಯನ್ನು ಕೂತಲ್ಲಿಂದ ಏಳಲು ಹೇಳಿದರು. ಅವರು ಎದ್ದೊಡನೆ ಆಸನದ ತಳ ಭಾಗ ಹಿಂದೆ ಸರಿಯಿತು. ವಿಮಾನಗಳಲ್ಲಿ ಕುಳಿತವರಿಗೆ ಆರಾಮವಾಗಿ ಒರಗಲಾಗುವಂತೆ ಕುರ್ಚಿಯ ತಳಗಳನ್ನು ಹಿಂದೆ ಮುಂದೆ ಸರಿಸಲು ವ್ಯವಸ್ಥೆಯಿರುತ್ತದೆ. ಇಂದಿರಾ ಕೈಯಾಡಿಸಿದಾಗ ಏನೋ ಪುಸ್ತಕದಂಥ ವಸ್ತು ಕೈಗೆ ಹತ್ತಿತು. ಅವರು ಕುರ್ಚಿಯನ್ನು ಮುಂದೆಳೆದದ್ದೇ ತಡ, ಪುಸ್ತಕವೊಂದು ಪ್ರತ್ಯಕ್ಷವಾಯಿತು. ಕ್ಯಾಬಿನ್ನಿಗೆ ಹೋಗುವ ಮುನ್ನ ಜವಾಹರರು ಎದ್ದಾಗ ಕುರ್ಚಿಯ ಸರಿದಾಟದಲ್ಲಿ ಪ್ರಧಾನ ಮಂತ್ರಿಗಳ ಪುಸ್ತಕ ಅದರೊಳಗೆ ಸೇರಿಬಿಟ್ಟಿತ್ತು.

ಪುಸ್ತಕವನ್ನು ಅವರ ಕೈಯಲ್ಲಿಟ್ಟಾಗ ಜವಾಹರರು "ಇದೇ ನೋಡು ಪುಸ್ತಕ, ಎಲ್ಲಿತ್ತು?" ಎಂದು ಹುಬ್ಬುಗಂಟಿಕ್ಕಿದರು.

"ಇಲ್ಲಿ."

ಅವರ ಕೋಪ ಒಮ್ಮೆಲೇ ತಣ್ಣಗಾಯಿತು. ಅವರು ಮತ್ತೆ ಪುಸ್ತಕ ಓದುವದರಲ್ಲಿ ಮಗ್ನರಾದರು. ಆ ಪುಸ್ತಕ "ರಾಜ್ಯ ಪುನರ್ಘಟನಾ ಆಯೋಗದ ವರದಿ" ಯಾಗಿತ್ತು.

ನೆಹರೂ ಸ್ವಭಾವದಲ್ಲಿ ಇದು ಒಂದು ಮುಖ ಮಾತ್ರ. ಇನ್ನೊಂದು ಮುಖ ಇದಕ್ಕಿಂತ ಕಡಿಮೆ ಸುರಸವಾಗಿಲ್ಲ. ಅದೂ ಕೆಲವೇ ನಿಮಿಷಗಳಲ್ಲಿ ಕಾಣಿಸಿಕೊಂಡಿತು. ನಾಗಪುರದಲ್ಲಿ ವಿಮಾನ ಇಳಿದಾಗ ಪ್ರಧಾನ ಮಂತ್ರಿಗಳು ಅದೇ ಪುಸ್ತಕವನ್ನು ಮಧ್ಯಪ್ರದೇಶದ ಮುಖ್ಯಮಂತ್ರಿಗಳಿಗೆ ಕಾಣಿಕೆ ಕೊಟ್ಟರು. ಆಗ ಅವರಿಗೆ ತಡೆಯಲಾರದ ನಗೆ ಬಂತು. ಇಂದಿರಾ ಮತ್ತು ಶಾಸ್ತ್ರಿ ಇಬ್ಬರಿಗೇ ಆ ನಗುವಿನ ಗೂಢ ಗೊತ್ತು.

ಇದು ನಡೆದದ್ದು ಕಳೆದ ಅಕ್ಟೋಬರದಲ್ಲಿ.

*

ಕೆಲವೇಳೆ ಅವರ ಭರಾಟೆಯಲ್ಲಿ ಕಳೆದು ಹೋದ ಪದಾರ್ಥ ತಾನಾಗಿಯೇ ಪ್ರಕಟವಾಗುವುದುಂಟು. ಉದಾಹರಣೆಗೆ ಕಲ್ಯಾಣಿ ಕಾಂಗ್ರೆಸ್ಸಿನ ಕಾಲಕ್ಕೆ ಕಳೆದುಹೋದ ಅವರ ಕನ್ನಡಕ.

ಪಾರ್ಲಿಮೆಂಟರಿ ಬೋರ್ಡಿನ ಸಭೆ ನಡೆದಿತ್ತು. ನೆಹರೂ ಅಧ್ಯಕ್ಷೀಯ ಆಸನದಿಂದೆದ್ದು ಹೋಗಿ ಬೇರೆ ಬೇರೆ ಸದಸ್ಯರೊಡನೆ ಮಾತಾಡಿ ತಿರುಗಿ ಬಂದು ಕುಳಿತರು. ಅನಂತರ ತಮ್ಮ ಮುಂದಿದ್ದ ಕಾಗದ ಪತ್ರಗಳ ರಾಶಿಯನ್ನು ಪರಿಶೀಲಿಸಬೇಕೆಂದಾಗ ಕನ್ನಡಕದ ನೆನಪು ಅವರಿಗೆ ಬಂತು. ಕನ್ನಡಕದ ಗೂಡು ತೆಗೆದು ನೋಡಿದರೆ ಅದರಲ್ಲಿ ಕನ್ನಡಕವಿಲ್ಲ. ಗೂಡನ್ನು ಒಗೆದು ಅವರು ಫೈಲುಗಳನ್ನು ಮೇಲೆಕೆಳಗೆ ಮಾಡಿದರು. ಊಹೂಂ.

ಸರಿ, ಬಂತು ಸಿಟ್ಟು . . . . ಹತ್ತಿರ ಕುಳಿತವರನ್ನು ವಿಚಾರಿಸಿದರು. ಯಾರೂ ನೋಡಿರಲಿಲ್ಲ. ಆಗಂತೂ ಅವರ ಸಿಟ್ಟು ಕುದಿಯುವ ಬಿಂದುವಿಗೇರಿತು. ಅವರು ಎದ್ದು ಉಗ್ರ ಮುಖಮುದ್ರೆ ಮಾಡಿಕೊಂಡು ಅತ್ತಿಂದಿತ್ತ ತಿರುಗಹತ್ತಿದರು. ಏನೆಂದು ಕೇಳುವ ಧೈರ್ಯ ಯಾರಿಗೆ? ಲಾಲಬಹಾದೂರರೇ ಆ ಸಲವೂ ಆ ಮುಕ್ಕಣ್ಣನ ಕೋಪದ ಕಾರಣ ಕೇಳಿದರು. ಅವರಿಗೆ ನೆಹರೂ ತಮ್ಮ ಕೋಪದ ಕಾರಣವನ್ನು ಹೇಳಿದರು. ಆದರೆ ಕನ್ನಡಕ ಹುಡುಕಿ ಕೊಡುವುದು ಅವರಿಂದಾಗಲಿಲ್ಲ. ನೆಹರೂ ರುದ್ರಾವತಾರ ತಾಳಿ ವೇದಿಕೆಯ ಮೇಲಿದ್ದ ದಿಂಬುಗಳನ್ನು ಕಿತ್ತು ಕಿತ್ತು ಅಪ್ಪಳಿಸಿದರು. ತಲೆ ತಪ್ಪಿಸಿಕೊಂಡಿದ್ದ ಕನ್ನಡಕ ಆಗ ಹೊರಬಿತ್ತು. ನೆರೆಯ ಧುರೀಣರೊಡನೆ ಮಾತಾಡುತ್ತ ತಮ್ಮ ಹಿಂದಿನ ದಿಂಬುಗಳ ಎಡೆಯಲ್ಲಿ ಅವನ್ನು ಸಿಗಿಸಿ ಇಟ್ಟಿದ್ದವರು ಅವರೇ.

*

ಕೆಲ ವೇಳೆ ಈ ಶೀಘ್ರಕೋಪ ಪ್ರಧಾನ ಮಂತ್ರಿಗಳನ್ನು ಪೇಚಿನ ಪ್ರಸಂಗಕ್ಕೆ ಗುರಿ ಮಾಡುವುದುಂಟು. ಇನ್ನೊಂದು ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಸಭೆಯಲ್ಲಿ ಚುನಾವಣೆಯ ಹುರಿಯಾಳುಗಳ ಬಗ್ಗೆ ಚರ್ಚೆ ನಡೆದಾಗ ಯಾವದೋ ಫೈಲಿನೊಳಗಿನ ಕಾಗದ ಪತ್ರಗಳ ನ್ನೋದುತ್ತ ಕುಳಿತಿದ್ದಾಗ ಅದರೊಳಗಿನ ಯಾವುದೋ ಸಂಗತಿಯಿಂದ ಅವರಿಗೆ ಅಗಾಧ ರೋಷವುಂಟಾಯಿತು. ಅವರು ಫೈಲನ್ನು ತೆಗೆದು ಅಪ್ಪಳಿಸಿದರು. ಹತ್ತಿರವೇ ಅವರು ಅರ್ಧ ಕುಡಿದು ಇಟ್ಟಿದ್ದ ಚಹಾದ ಕಪ್ಪು ಆ ಹೊಡತಕ್ಕೆ ಮುಗುಚಿಬಿದ್ದು ಮೌಲಾನಾ ಆಜಾದರ ಮಡಿ ಮಡಿ ಕೋಟು ಪಾಯಜಾಮಾಗಳು ಚಹಾಸ್ನಾನ ಮಾಡಿದವು. ಅದನ್ನು ನೋಡಿದ್ದೇ, ಪ್ರಧಾನ ಮಂತ್ರಿಗಳು "ಅರೇ" ಎಂದು ಉದ್ಗಾರವೆತ್ತಿದರು. ಅವರಿಗೆ ತುಂಬ ಸಂಕೋಚವಾಯಿತು. ಅವರು ಮೌಲಾನಾ ಸಾಹೇಬರನ್ನು

ಶೀಘ್ರಕೋಪ ನೆಹರೂ ಮನೆತನದ ಪಾರಂಪರ್ಯದ ಆಸ್ತಿಯಿದ್ದಂತೆ. ಮೋತೀಲಾಲರ ಕ್ರೋಧದ ಬಗ್ಗೆ ಜವಾಹರರು ಬರೆಯುವದನ್ನು ನೋಡಿರಿ :

"ನೌಕರರ ಮೇಲೂ ಇತರರ ಮೇಲೂ ಅವರ ಕೋಪಾವೇಶವನ್ನು ನಾನು ನೋಡಿದ್ದೆ. ಆಗ ಅವರು ಭಯಂಕರರಾಗಿ ಕಾಣುತ್ತಿದ್ದರು. ನನಗೆ ಅಂಜಿಕೆಯಿಂದ ನಡುಕವುಂಟಾಗುತ್ತಿತ್ತು. ಅವರ ಕೋಪ ನಿಜಕ್ಕೂ ಭೀಷಣವಾಗಿತ್ತು. ಮುಂದೆ ಕೂಡ ಅದಕ್ಕೆ ಸರಿದೂಗತಕ್ಕದ್ದನ್ನು ನಾನು ಬೇರೆ ಯಾರಲ್ಲಿಯೂ ಕಂಡಿಲ್ಲ..."

ಅವರ ತಂಗಿ ಕೃಷ್ಣಾ ಹೀಗೆನ್ನುತ್ತಾರೆ :

"...ನನ್ನ ಹುಚ್ಚು ಸಿಟ್ಟು ಎಷ್ಟೋ ವೇಳೆ ಅಂಕೆ ಮೀರಿ ಹೋಗುತ್ತಿತ್ತು. ಅದು ಎಷ್ಟು ಬೇಗ ಬರುವದೋ ಅಷ್ಟೇ ಕ್ಷಣಿಕವಾಗಿದೆ. ಅದು ಬಹುಕಾಲ ಉಳಿಯುವದು ಅಪೂರ್ವ .... ಆದರೆ ಎಷ್ಟೋ ವೇಳೆ ನನ್ನನ್ನು ಅನವಶ್ಯಕ ಕಷ್ಟಕ್ಕೆ ಗುರಿಮಾಡಿದೆ.... ನಾನು ನನ್ನ ತಂದೆಯುದಷ್ಟೇ ಅಲ್ಲ, ದೀರ್ಘ ವಂಶ ಪಾರಂಪರ್ಯದಿಂದ ಬಂದ ಹಟಮಾರಿತನವನ್ನು ಪಡೆದುಕೊಂಡು ಬಂದಿದ್ದೇನೆ."

ಸಪಶ್ಚಾತ್ತಾಪ ಮುಖಮುದ್ರೆಯಿಂದ ಕೈ ಹಿಡಿದೆಬ್ಬಿಸಿ ತಮ್ಮ ಕಾರಿನಲ್ಲಿ ಕುಳ್ಳಿರಿಸಿಕೊಂಡು ಹೊರಟುಹೋದರು.

*

ದಿಲ್ಲಿಯ ಜಂತರ ಮಂತರ ಬೀದಿಯ ಕಾಂಗ್ರೆಸ್ ಕಚೇರಿಯಲ್ಲಿ ಕಳೆದುಹೋದ ಅವರ ಟೊಪ್ಪಿಗೆಯ ಮಾತಾದರೂ ಹೀಗೇ ಇತ್ತು. ಚುನಾವಣೆ ಸಮೀಪಿಸುತ್ತಿದ್ದಾಗ ಕಡುಬೇಸಗೆಯಲ್ಲಿ ಸೇರಿದ್ದ ಕಾರ್ಯಕಾರಿ ಸಮಿತಿಯ ಸಭೆಯ ಕೊನೆಗೆ ನೆಹರೂ ಅವರು ಹೊರಟಿದ್ದು ತಲೆಯ ಮೇಲೆ ಕೈಯಾಡಿಸಿದಾಗ ಟೊಪ್ಪಿಗೆ ಅಲ್ಲಿ ಇದ್ದಿಲ್ಲ. ಅದು ಥಕ್ಕನೆ ಸಿಗಲಿಲ್ಲ. ಅವರೊಳಗೆ ಇದ್ದ ವಿಶ್ವಾಮಿತ್ರ ಕೂಡಲೆ ತಲೆಯೆತ್ತಿದ. ಅವರು ಕಣ್ಣು ಕೆಕ್ಕರಿಸಿ "ನನ್ನ ಟೊಪ್ಪಿಗೆ ಎಲ್ಲಿ?" ಎಂದು ಇತರ ಸದಸ್ಯರನ್ನು ಕೇಳಿದರು. ಅವರಿಗೇನು ಗೊತ್ತು ಪಾಪ! ನೆಹರೂ ಅವರ ತಾಂಡವ ಪ್ರಾರಂಭವಾಗುವುದಕ್ಕೂ ಎ. ಐ. ಸಿ. ಸಿ. ಕಾರಕೂನನೊಬ್ಬನು ಫೈಲುಗಳನ್ನು ತೆಗೆದಿಡುವಾಗ ಅವನಿಗೆ ಒಂದರಲ್ಲಿ ಏನೋ ದಟ್ಟವಾದ ಪದಾರ್ಥ ಕೈಗೆ ತಗಲುವುದಕ್ಕೂ ಕೂಡಿ ಬಂತು. ಅದು ಮತ್ತೇನೂ ಆಗಿರದೆ ನೆಹರೂ ಅವರ ಟೊಪ್ಪಿಗೆಯಾಗಿತ್ತು. ಟೊಪ್ಪಿಗೆ ಶೋಧದಲ್ಲಿ ಬೆವರು ಸುರಿಸುತ್ತಿದ್ದ ನಾಯಕರಿಗೆ ಜೀವ ಬಂತು.

ಒಡನೆ ಆ ಇನ್ನೊಬ್ಬ ನೆಹರು ಪ್ರಕಟವಾದ. "ಎಂಥ ಹುಚ್ಚನಪ್ಪಾ ನಾನು!" ಎಂಬ ಉದ್ಗಾರ ಅವರ ಬಾಯಿಂದ ಹೊರಬಿತ್ತು.

ಹಗಲೆಲ್ಲ ಶಾಂತಿ ಪಾಠ ಮಾಡುವ ನೆಹರೂ ಅವರ ಈ ಸುಲಭಕೋಪ ಚೋದ್ಯಕರವಾದದ್ದು. ತಮ್ಮ ಕೋಪದ ಅರಿವೇ ಅವರನ್ನು ಶಾಂತಿಗಾಗಿ ಹಂಬಲಿಸುವಂತೆ ಮಾಡಿದೆಯೇನೋ. ತಮ್ಮ ಸಿಟ್ಟು ಯಾವಾಗಲೂ ಹಿಡಿತದಲ್ಲಿ ಉಳಿದೀತೆಂಬ ವಿಶ್ವಾಸ ಅವರಿಗಿಲ್ಲೆಂದು ತೋರುತ್ತದೆ. ಹಿಂದೆ ಚಳವಳಿ ಕಾಲದಲ್ಲಿ ತಮ್ಮ ತಾಯಿಗೆ ಪೋಲೀಸರ ಲಾಠಿಪ್ರಹಾರ ಬಿದ್ದ ವಾರ್ತೆ ಕೇಳಿದಾಗ ತಮ್ಮಲ್ಲಿ ಉಂಟಾದ ಉದ್ವೇಗವನ್ನು ಅವರು ತಮ್ಮ ಆತ್ಮಚರಿತ್ರೆಯಲ್ಲಿ ಹೀಗೆ ಉಲ್ಲೇಖಿಸಿದ್ದಾರೆ: "ಆಗ ನಾನು ಅಲ್ಲಿದ್ದಿದ್ದರೆ ಏನು ಮಾಡುತ್ತಿದ್ದೆನೋ. ನನ್ನ ಅಹಿಂಸೆ ಎಷ್ಟು ಮಟ್ಟಿಗೆ ತಾಳುತ್ತಿತ್ತೋ. ತಾಳುತ್ತಿರಲಿಲ್ಲೆಂದೇ ತೋರುತ್ತದೆ: ಆ ದೃಶ್ಯವು ನನ್ನ ಮೈಮರೆಸಿಬಿಡಬಹುದಿತ್ತು. ನಾನು ಆಗ ನನ್ನ ಮೇಲಾಗಲಿ ದೇಶದ ಮೇಲಾಗಲಿ ಆಗಬಹುದಾದ ಪರಿಣಾಮಗಳನ್ನು ಸ್ವಲ್ಪವೂ ಲೆಕ್ಕಿಸುತ್ತಿರಲಿಲ್ಲ."



## ಜೀವನ ವಿಜಯ

ಸಾವಿರ ವರ್ಷಗಳ ಹಿಂದೆ ನನ್ನೊಬ್ಬ ನೆರೆಯುವನು ನನಗಂದಿದ್ದ: "ನನಗೆ ಜೀವನದ ಮೇಲೆ ಜುಗುಪ್ಸೆ ಬಂದಿದೆ. ಜೀವನದಲ್ಲಿ ದುಃಖ ಹೊರತು ಬೇರೇನೂ ಇಲ್ಲ."

ನಿನ್ನೆ ನಾನು ಸ್ಮಶಾನದ ಬಳಿ ಹೋಗುತ್ತಿದ್ದಾಗ ಅವನ ಗೋರಿಯ ಮೇಲೆ ಜೀವನ ಕುಣಿಯುತ್ತಿದ್ದುದನ್ನು ಕಂಡೆ.

— ಕಾಕಾ ಕಾಲೇಲಕರರ "ಮೃಗಜಲಕೇ ಮೋತಿ"

# ನಿಮ್ಮ ವ್ಯಕ್ತಿತ್ವ ಆಕರ್ಷಕವಾಗಿದೆಯೆ?

ಕೆಲವರು ಯಶಸ್ವಿಗಳಾಗುವುದನ್ನು ಕಂಡು ನಿಮಗೆ ಎಂದಾದರೂ ಮನಸಿನಲ್ಲೇ ಈರ್ಷೆಯಾಗಿದ್ದುಂಟೆ? ನಿಜ ಹೇಳಿರಿ. "ಈ ಮನುಷ್ಯ ಎಲ್ಲದರಲ್ಲಿಯೂ ಗೆಲವು ಹೊಂದುತ್ತಾನೆ. ಎಲ್ಲರೂ ಅವನಿಂದ ಪ್ರಭಾವಿತರಾಗುತ್ತಾರಲ್ಲ! ಅವನಲ್ಲಿ ಅಂಥ ಗುಣ ಏನಿದ್ದೀತು ?" ಎಂದು ನೀವು ಸೋಜಿಗಪಟ್ಟಿದ್ದಿಲ್ಲವೆ?

ಇದಕ್ಕೆ ಉತ್ತರ ವ್ಯಕ್ತಿತ್ವದ ಆಕರ್ಷಕತೆ. ನಿಮಗೂ ಅವರಂತೆ ವ್ಯಕ್ತಿತ್ವ ಸಂಪಾದಿಸಿ ಯಶಸ್ವಿಗಳಾಗುವ ಇಚ್ಛೆ ಇಲ್ಲವೆ? ಇದ್ದರೆ ನಿಮ್ಮ ಇಂದಿನ ಸ್ಥಿತಿಯ ಅರಿವು ನಿಮಗೆ ಮೊದಲು ಆಗಬೇಕು.

ನಿಮ್ಮ ವ್ಯಕ್ತಿತ್ವದ ಆಕರ್ಷಕತೆ ಅನಾಕರ್ಷತೆಗಳನ್ನೂ ನಿಮ್ಮಲ್ಲಿರುವ ಯಶಃಸಾಧಕ ಗುಣ ಅವಗುಣಗಳನ್ನೂ ನೀವು ಈ ಕೆಳಗಿನ ೧೦ ಪ್ರಶ್ನೆಗಳಿಗೆ ಕೊಡುವ 'ಹೌದು', 'ಅಲ್ಲ' ಉತ್ತರಗಳಿಂದ ನಿರ್ಧರಿಸಬಹುದು. ಇದರಲ್ಲಿ ನಿಮಗೆಷ್ಟು ನಂಬರು ಬರುತ್ತದೋ ನೋಡಿರಿ—

೧. ಇತರರು ನಿಮಗೆ ತಮ್ಮ ಯೋಜನೆಗಳ ಬಗ್ಗೆ ಹೇಳುತ್ತಿರುತ್ತಾರೆಯೆ ?

೨. ನಿಮಗೆ ಸಾಮಾಜಿಕ ಕೆಲಸ, ಉತ್ಸವಗಳಲ್ಲಿ ಭಾಗಿಗಳಾಗಲು ಉತ್ಸಾಹವಿರುತ್ತದೆಯೆ?

೩. ನಿಮಗೆ ಎಂದಾದರೂ ಕೆಲಸದಲ್ಲಿ ಮನಸು ಇಲ್ಲದಿದ್ದರೂ ಕಾರ್ಯಕ್ರಮದಂತೆ ಕೆಲಸ ಮಾಡಿಯೇ ತೀರುವಿರಾ ?

೪. ನೀವು ಮೊದಲು ಕೇಳಿದ್ದ ಯಾವುದೊಂದು ಸುದ್ದಿಯನ್ನು ಯಾರಾದರೂ ನಿಮಗೆ ಪುನಃ ಹೇಳತೊಡಗುತ್ತಾರೆ. ಆಗ ನೀವು ಅದನ್ನು ಇದೇ ಮೊದಲ ಸಲ ಕೇಳುವವರಂತೆ ಆಮೂಲಾಗ್ರವಾಗಿ ಆಲಿಸುತ್ತೀರಾ ?

೫. ಒಂದು ಸಭೆಯಲ್ಲಿ ನಿಮಗೆ ಸರಿಯಾಗಿ ಗೊತ್ತಿರುವ ಸಂಗತಿಯ ಚರ್ಚೆ ನಡೆದಿರುತ್ತದೆ. ಆದರೂ ನೀವು ಸುಮ್ಮನೆ ಕುಳಿತಿರುತ್ತೀರಾ ?

೬. ನೀವು ಕ್ಯೂನಲ್ಲಿ ನಿಂತಿರುವಾಗ ಯಾರಾದರೊಬ್ಬರು ನುಗ್ಗಿ ನಿಮಗಿಂತ ಮುಂದೆ ಹೋಗಲು ಹವಣಿಸಿದರೆ ನೀವು ವಿರೋಧಿಸುತ್ತೀರಾ ?

೭. ನೀವೂ ನಿಮ್ಮ ಗೆಳೆಯನೂ ಎಲ್ಲಿಗೋ ಹೊರಡಲಿದ್ದೀರಿ. ಮಿತ್ರ ಸಕಾಲದಲ್ಲಿ ಬರುವುದಿಲ್ಲ. ಆಗ ನೀವು ಸಿಟ್ಟಿಗೇಳುವ ಬದಲು ಮಿತ್ರನ ಬಗ್ಗೆ ಚಿಂತಿತರಾಗುವಿರಾ ?

೮. ನೀವು ಅಯಶಸ್ವಿಯಾದಾಗ ನಿರಾಶರಾಗುವ ಬದಲು ಅದರ ಕಾರಣ ಕಂಡುಹಿಡಿಯಲು ಯತ್ನಿಸುತ್ತೀರಾ ?

೯. ಹೊಸತಾಗಿ ಪರಿಚಿತರಾದವರ ಮುಂದೂ ಸಂಕೋಚವಿಲ್ಲದೆ ಒಳ್ಳೇ ಕೌಶಲದಿಂದ ನಗೆ ಮಾತು ಆಡಿ ನಗಿಸುವ ಶಕ್ತಿ ನಿಮ್ಮಲ್ಲಿದೆಯೆ ?

೧೦. ವಿರೋಧಿಗಳ ಮುಂದೆ ಸ್ಪಷ್ಟವಾಗಿ ನಿಮ್ಮ ದೃಷ್ಟಿಕೋನವನ್ನು ಮಂಡಿಸಲು ನೀವು ಸಮರ್ಥರಿದ್ದೀರಾ ?

ಇವಕ್ಕೆ ನಿಮ್ಮ ಉತ್ತರಗಳಲ್ಲಿ "ಹೌದು" ಎಷ್ಟು "ಇಲ್ಲ" ಎಷ್ಟೆಂದು ಎಂಗಡಿಸಿರಿ. ಪ್ರತಿ "ಹೌದು" ಗೆ ೫ ರಂತೆ ಎಣಿಸಿದರೆ ನಿಮಗೆ ಒಟ್ಟು ಎಷ್ಟು ಗುಣ ಬೀಳುತ್ತದೋ ನೋಡಿರಿ. ಕನಿಷ್ಠ ೩೦ ಗುಣವಾದರೂ ಬಿದ್ದರೆ ನಿಮ್ಮ ವ್ಯಕ್ತಿತ್ವ ಸಂತೋಷಜನಕವಾದದ್ದು. ೪೦ಕ್ಕಿಂತ ಹೆಚ್ಚು ಗುಣ ಬಿದ್ದರೆ ನಿಮ್ಮ ವ್ಯಕ್ತಿತ್ವ ತುಂಬಾ ವಿಕಸಿತವಾದದ್ದು. ೨೦ ಗುಣ ಬಿದ್ದರೆ, ನಿಮ್ಮ ವ್ಯಕ್ತಿತ್ವ ಸಂತೋಷಕರವಾಗಿಲ್ಲ. ಪ್ರಯತ್ನಪೂರ್ವಕ ಅಂಥವರು ವ್ಯಕ್ತಿತ್ವ ಬೆಳಸಿಕೊಳ್ಳುವುದು ಅಗತ್ಯ.

**ಇದನ್ನು ಕೇಳಿದ್ದೀರಾ?— ರಾಮನು ರಾವಣನ ಕಕ್ಕನ ಮಗ; ಸೀತೆ ರಾವಣನ ಮಗಳು; ಹನುಮಂತನು ಬ್ರಹ್ಮಚಾರಿಯಲ್ಲ; ರಾಮ-ರಾವಣರು ಇಂಡೋಚೀನದವರು... ಆದರೆ ವಿವಿಧ ಪರದೇಶಗಳಲ್ಲಿರುವ ರಾಮಕಥೆಗಳಲ್ಲಿ ಈ ವಿಚಿತ್ರ ರೂಪಾಂತರಗಳಿವೆ.**

# ರಾಮಾಯಣದ ವಿವಿಧ ಅವತಾರಗಳು

ಹಿಂದೀ 'ಸಿದ್ಧಾಂತ'ದ ಆಧಾರದಿಂದ

ರಾಮನು ಭಾರತೀಯರ ಆದರ್ಶ— ಆತನು ಆದರ್ಶ ಪುತ್ರ, ಆದರ್ಶ ಭ್ರಾತ, ಆದರ್ಶ ಮಿತ್ರ, ಆದರ್ಶ ಪತಿ, ಆದರ್ಶ ರಾಜ—ಆದರ್ಶ ಶತ್ರು ಕೂಡ. ಅವನು ಪುರುಷೋತ್ತಮನು. ಅವನ ಕಥೆಯನ್ನು ಕಾವ್ಯವಾಗಿ ಬರೆದ ಬೇಡ ವಾಲ್ಮೀಕಿ ಋಷಿಯಾದ, ಆದಿಕವಿಯಾದ. ವಾಲ್ಮೀಕಿಯಿಂದ ಅಮರೀಕೃತವಾದ ರಾಮಾಯಣ ಕಥೆಯ ಅನುವಾದವಿಲ್ಲದ ಭಾರತೀಯ ಭಾಷೆಯೇ ಇಲ್ಲ. ಅದು ಜಾನಪದ ಚಿತ್ರ, ಶಿಲ್ಪ, ನಾಟ್ಯ, ಕಾವ್ಯ ಎಲ್ಲವುಗಳಿಗೂ ಸ್ಫೂರ್ತಿಯಿತ್ತು ಜನಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದೆ.

ವಾಲ್ಮೀಕಿ ರಾಮಾಯಣ ತನ್ನ ಪ್ರಭಾವವನ್ನು ಭಾರತದಲ್ಲಿ ಮಾತ್ರ ಬೀರಿಲ್ಲ. ಜಗತ್ತಿನ ಇತರ ದೇಶಗಳಲ್ಲೂ ಅದರ ಪ್ರಭಾವ ಬಿದ್ದಿದೆ. ಬೇರೆ ಬೇರೆ ದೇಶಗಳಲ್ಲಿ ರಾಮಾಯಣದ ಕಥೆ ಯಾವ ರೀತಿಯಲ್ಲಿ ಪ್ರಚಲಿತವಿದೆ ಎಂಬುದನ್ನು ಅರಿಯುವದು ಮನೋರಂಜಕವಾಗಿರುವದು ಮಾತ್ರವಲ್ಲ, ಅದರಿಂದ ಭಾರತೀಯ ಸಂಸ್ಕೃತಿಯು ರಾಮಾಯಣದ ಮುಖಾಂತರ ಜಗತ್ತಿನಲ್ಲಿ ಹೇಗೆ ಪ್ರಚುರವಾಗಿತ್ತು ಎಂಬುದರ ಜ್ಞಾನವೂ ಆಗುವದು. ರಾಮನ ಕಥೆ ಬೇರೆ ಬೇರೆ ದೇಶಗಳಲ್ಲಿ; ಬೇರೆ ಬೇರೆ ಭಾಷೆಗಳಲ್ಲಿ ಹೇಳಲ್ಪಡುವಾಗ ಆ ಆ ದೇಶದ ಪರಿಸ್ಥಿತಿಗನುಗುಣವಾಗಿ ಕಥೆಯಲ್ಲಿ ಬದಲಾವಣೆಯಾದದ್ದು ಕಂಡುಬರುವದು.



ಏಶಿಯದ ದೇಶಗಳಲ್ಲಿ ಪ್ರಚಲಿತವಿರುವ ರಾಮಾಯಣದ ವಿಚಾರವನ್ನು ನಾವು ಮೊದಲಿಗೆ ಪರಿಶೀಲಿಸೋಣ.

**ಚೀನ.** ಮೂರನೆಯ ಶತಮಾನದಲ್ಲಿ ಬೌದ್ಧ ರಾಮ ಕಥೆ "ಅನಾಮಕಂ ಜಾತಕಂ" ಮತ್ತು ಐದನೆಯ ಶತಮಾನದಲ್ಲಿ "ದಶರಥ ಕಥಾನಕಂ" ಚೀನೀ ಭಾಷೆಯಲ್ಲಿ ಭಾಷಾಂತರಿಸಲ್ಪಟ್ಟವು. ಮೊದಲನೆಯ ಗ್ರಂಥದಲ್ಲಿ ರಾಮಾಯಣದಲ್ಲಿಯ ಪಾತ್ರಗಳ ಉಲ್ಲೇಖವಿರದಿದ್ದರೂ ಅದರಲ್ಲಿ ಸೀತಾಹರಣ, ವಾಲಿ-ಸುಗ್ರೀವ ಯುದ್ಧ, ಸೀತೆಯ ಅಗ್ನಿಶುದ್ಧಿ ಪ್ರಸಂಗಗಳು ಸಮಾವೇಶವಾಗಿವೆ. "ದಶರಥ ಕಥಾನಕಂ" ದಲ್ಲಿ ದಶರಥನ ಮಕ್ಕಳು ಅನುಭವಿಸಿದ ವನವಾಸದ ವರ್ಣನೆ ಇದೆ. ಆದರೆ ಸೀತೆ ಮತ್ತು ಅವಳ ಮೂಲಕ ಉದ್ಭವಿಸಿದ ರಾಮ-ರಾವಣ ಯುದ್ಧದ ಕಥೆ ಅದರಲ್ಲಿಲ್ಲ. ಏಳನೆಯ ಶತಮಾನದಲ್ಲಿ ಚೀನೀ ಭಾಷೆಯಲ್ಲಿ ಭಾಷಾಂತರಿಸಲ್ಪಟ್ಟ "ಜ್ಞಾನ ಪ್ರಸ್ಥಾನ" ಗ್ರಂಥದಲ್ಲಿ ರಾಮಾಯಣದ ಕೆಲ ಘಟನೆಗಳ ಉಲ್ಲೇಖ ದೊರೆಯುತ್ತದೆ. ಈ ಮೂರೂ ಗ್ರಂಥಗಳಿಂದ ಚೀನದಲ್ಲಿ ರಾಮಚರಿತ್ರೆಯ ವಿಚಾರ ತುಸು ಬದಲಾವಣೆಯೊಂದಿಗೆ ಪರಿಚಿತವಿತ್ತು ಎಂಬದು ಕಂಡುಬರುತ್ತದೆ.

**ತಿಬೇಟ.** ತಿಬೇಟದಲ್ಲಿ ರಾಮ ಚರಿತ್ರೆಯ ಹಸ್ತಲಿಖಿತ ಪ್ರತಿಗಳು ಸಿಕ್ಕಿವೆಯೆಂದು ಎಫ್. ಡಬ್ಲ್ಯು. ಥಾಮಸ್ ಎಂಬವರು "ಏ ರಾಮಾಯಣ ಸ್ಟೋರಿ ಇನ್ ತಿಬ್ಬತನ್" ಎಂಬ ಪುಸ್ತಕದಲ್ಲಿ ಹೇಳಿದ್ದಾರೆ. ಇದರಲ್ಲಿ ರಾಮನು ಸೀತೆಯಿಂದ ಅಗಲಿದಂದಿನಿಂದ ಪುನಃ ಅವನು ಅವಳನ್ನು ಸ್ವೀಕರಿಸುವ ವರೆಗಿನ ಕಥೆಯಿದೆ. ಈ ಕಥೆಯಲ್ಲಿ ಗುಣಭದ್ರ ವಿರಚಿತ "ಉತ್ತರ ಪುರಾಣ"ದ ಪ್ರಭಾವ ಕಂಡುಬರುತ್ತದೆ.



ಉಪಲಬ್ಧವಿರುವ ಹಸ್ತಪ್ರತಿಯಲ್ಲಿ ಸೀತೆಯ ಹೆಸರು "ಜೀತಾ" ಎಂದಿದೆ. ವಾಲಿ ಸುಗ್ರೀವರ ಯುದ್ಧದಲ್ಲಿ ಸುಗ್ರೀವನ ಕೊರಳಿನಲ್ಲಿ ಪುಷ್ಪಮಾಲೆಯಿತ್ತು ಎಂದು ರಾಮಾಯಣದಲ್ಲಿ ಹೇಳಿದ್ದರೆ ತಿಬೇಟದ ರಾಮಾಯಣದಲ್ಲಿ ಸುಗ್ರೀವನ ಬಾಲಕ್ಕೆ ಕನ್ನಡಿಯು ಕಟ್ಟಲ್ಪಟ್ಟಿತ್ತು ಎಂದು ಹೇಳಿದೆ.

ನಮ್ಮ ರಾಮಾಯಣ ಮತ್ತು ತಿಬೇಟದ ರಾಮಾಯಣದಲ್ಲಿ ಇನ್ನೂ ಒಂದು ಮಹತ್ವದ ಭೇದವಿದೆ. ರಾಮ - ಸೀತೆಯರ ವಿವಾಹ ವಿಚಾರವಾಗಿ ತಿಬೇಟದ ರಾಮಾಯಣದಲ್ಲಿ ಹೀಗೆ ಹೇಳಿದೆ: ರಾಜ್ಯ ಸಿಗಲಿಲ್ಲವೆಂದು ರಾಮನು ತಪಸ್ಸಿಗಾಗಿ ಅರಣ್ಯಕ್ಕೆ ಹೋಗುತ್ತಾನೆ. ಅಲ್ಲಿ ರಾವಣನ ಮಗಳಾದ ಸೀತೆ ದನ ಕಾಯುತ್ತಿದ್ದಾಗ ಅವಳ ಭೆಟ್ಟಿ ಅವನಿಗಾಗುತ್ತದೆ. ಪ್ರೇಮ ಕೂಡಿ ಅವರೀರ್ವರು ವಿವಾಹಬದ್ಧರಾಗುತ್ತಾರೆ.

ತಿಬೇಟ ರಾಮಾಯಣದ ಉತ್ತರ ಕಾಂಡವನ್ನು ಓದುವಾಗ ನಮ್ಮಲ್ಲಿಯ ಕಥಾಸರಿತ್ಸಾಗರವನ್ನು ನಾವು ಓದುತ್ತಿದ್ದೇವೆಯೆ ಎಂದು ಭಾಸವಾಗುವದು.

**ಪೂರ್ವ-ತುರ್ಕಸ್ಥಾನ.** ಪೂರ್ವ ತುರ್ಕ-ಸ್ಥಾನದಲ್ಲಿಯ "ಖೋತಾನಿ" ರಾಮಾಯಣದಲ್ಲಿಯ ಕಥೆ ತಿಬೇಟ ರಾಮಾಯಣದ ಕಥೆಯಂತೆಯೆ ಕಾಣುತ್ತದೆ. ಆದರೆ ತಿಬೇಟ ರಾಮಾ-ಯಣದಲ್ಲಿಯ "ಉತ್ತರ ರಾಮಚರಿತೆ"ಯ

ಕಥೆ "ಖೋತಾನಿ ರಾಮಾಯಣ"ದಲ್ಲಿಲ್ಲ. ಈ ರಾಮಾಯಣದ ಮೇಲೆ ಬೌದ್ಧ ತತ್ವಜ್ಞಾನದ ಪ್ರಭಾವ ಬಿದ್ದಿದೆ. ಮುಖ್ಯವಾಗಿ "ಖೋತಾನಿ ರಾಮಾಯಣ"ದಲ್ಲಿ ಅವತಾರವಾದವನ್ನು ಮನ್ನಿಸಿಲ್ಲ. "ಬುಲೆಟಿನ್ ಸ್ಕೂಲ ಆಫ್ ಓರಿಯಂಟಲ್"ದ ಹತ್ತನೆಯ ಭಾಗದ ೫೪೫ನೆಯ ಪುಟದಲ್ಲಿ ಈ ರಾಮಾಯಣದ ವಿಷಯಗಳಿವೆ. ಈ ರಾಮಾಯಣದ ಕಥಾಸಾರಾಂಶ ಈ ರೀತಿ ಇದೆ:

ರಾಮನು ಪರಶುರಾಮನ ವಧೆ ಮಾಡುತ್ತಾನೆ. ಸೀತೆ ರಾವಣನ ಮಗಳು. ಜನ್ಮಕಾಲದ ಅನಿಷ್ಟ ಗ್ರಹಗಳ ಮೂಲಕ ಅವಳು ತಂದೆಗೆ ಮಾರಕಳಾಗುವಳು ಎಂದು ಜ್ಯೋತಿಷಿಗಳು ಹೇಳುತ್ತಾರೆ. ಆದ್ದರಿಂದ ರಾವಣನು ಅವಳನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಬಾಗಿಲು ಹಾಕಿ ಪೆಟ್ಟಿಗೆಯನ್ನು ನದಿಯಲ್ಲಿ ಚೆಲ್ಲಿಕೊಡುತ್ತಾನೆ. ಲಕ್ಷ್ಮಣನಿಗೆ ರಾಜ್ಯಭಾರವನ್ನೊಪ್ಪಿಸಿ ರಾಮನು ವನವಾಸಕ್ಕೆ ಹೋಗುತ್ತಾನೆ. ಅಲ್ಲಿ ಅವನಿಗೆ ನದಿಯಲ್ಲಿ ತೇಲಿ ಬಂದ ಪೆಟ್ಟಿಗೆ ಸಿಗುತ್ತದೆ. ಅದರಲ್ಲಿದ್ದ ಸೀತೆಯೊಡನೆ ರಾಮ - ಲಕ್ಷ್ಮಣರಿಬ್ಬರ ವಿವಾಹವೂ ಜರಗುತ್ತದೆ.

**ಇಂಡೋನೇಶಿಯ.** ಇಂಡೋನೇಶಿಯದ ಜನರು ತಮ್ಮ ಧಾರ್ಮಿಕ ಜೀವನದಲ್ಲಿ ರಾಮಾಯಣ ಕಥೆಗೆ ಅಗ್ರಸ್ಥಾನವನ್ನೀಯುತ್ತಾರೆ. ಅಲ್ಲಿ ಪ್ರಾಚೀನ ಹಾಗೂ ಅರ್ವಾಚೀನವೆಂಬ ಎರಡು ಬಗೆಯ ರಾಮಾಯಣಗಳು ಅಸ್ತಿತ್ವದಲ್ಲಿವೆ. ಪ್ರಾಚೀನ ರಾಮಾಯಣದ ಹೆಸರು "ರಾಮಾಯಣ ಕಾಕವಿನ" ಎಂದಿದ್ದು ಯೋಗೀಶ್ವರ ಸಂಬಾತನು ೧೨ನೆಯ ಶತಮಾತನದ ಸುಮಾರಿಗೆ ಇದನ್ನು ಬರೆದಿದ್ದಾನೆ. ಡಚ್ ಭಾಷೆಯಲ್ಲಿ ಅದರ ಭಾಷಾಂತರವಾಗಿದೆ. ಈ ಭಾಷಾಂತರದಲ್ಲಿ "ಭಟ್ಟಿ ಕಾವ್ಯ"ವನ್ನೋದಿ ಯೋಗೀಶ್ವರನಿಗೆ ಈ ರಾಮಾಯಣ ಬರೆಯುವ ಸ್ಫೂರ್ತಿಯುಂಟಾಯಿತೆಂಬ ಉಲ್ಲೇಖವಿದೆ. ಇದರಲ್ಲಿ "ಭಟ್ಟಿ ಕಾವ್ಯ"ದಲ್ಲಿ ಹೇಳಿರುವಂತೆಯೆ ಸ್ವರ್ಗದ ವರ್ಣನೆ ಕಂಡು ಬಂದಿದೆ. ಆದರೆ "ಉತ್ತರ ಪುರಾಣ"ದಂಥ ಕಥಾಭಾಗವೂ ಇದರಲ್ಲಿದೆ. ಸೀತೆ ಹನುಮಂತನಿಗೆ ಚೂಡಾಮಣಿಯ ಜೊತೆಗೆ ಪತ್ರವನ್ನೂ ಕೊಡುತ್ತಾಳೆ ಎಂದು ಈ ರಾಮಾಯಣದಲ್ಲಿದೆ. ಈ ರಾಮಾಯಣದಲ್ಲಿ ಶಬರಿಯ ಬಗ್ಗೆ ಹೇಳಿರುವ ಮಾತುಗಳು ಮೋಜಿನವಾಗಿವೆ. "ವಿಷ್ಣುವು ವರಾಹ ಅವತಾರ ತಾಳಿದಾಗ ನನ್ನ ಹಾರವನ್ನು ನುಂಗಿದನು. ಅದರಿಂದ ಆತನ ಮರಣ ಸಂಭವಿಸಿತು. ಆ ಮೃತದೇಹವನ್ನು ನಾನು ತಿಂದೆ. ಅದರಿಂದ ನನ್ನ ಮುಖ ಕಪ್ಪಾಗಿ ಹೋಯಿತು. ಶ್ರೀ ರಾಮಾ, ನನ್ನ ಮುಖದ ಈ ಕಲಂಕವನ್ನು ನೀನು ತೊಳೆದು ಹಾಕು" ಎಂದು "ಕಾಕವಿನ ರಾಮಾಯಣ"ದ ಶಬರಿ ತನ್ನ ಪರಿಚಯವನ್ನು ರಾಮನಿಗೆ ಮಾಡಿಕೊಡುವಾಗ ಹೇಳುತ್ತಾಳೆ. ಇಂಡೋನೇಶಿಯದಲ್ಲಿ ಅರ್ವಾಚೀನ ರಾಮಾಯಣವು ಜನಪ್ರಿಯವಾಗಿದ್ದು ಅಲ್ಲಿ ಅದರ ಆಧಾರದಿಂದ ನಾಟಕ ಪ್ರಯೋಗಗಳು ನಡೆಯುತ್ತವೆ.

**ಬಾಲಿ.** ರಾಮಾಯಣದ ವಾಲಿಯಿಂದಲೆ "ಬಾಲಿ" ಎಂಬ ಹೆಸರು ಈ ನಡುಗಡ್ಡೆಗೆ ಬಂದಿದೆ. ವಾಲಿಯು ಬಾಲಿ ನಡುಗಡ್ಡೆಯವನು ಎಂದು ಕೆಲವರು ಒಪ್ಪುತ್ತಾರೆ. ಇದರ ಸತ್ಯಾಂಶ ಏನೇ ಇರಲಿ, ಬಾಲಿ ಮತ್ತು ಜಾವಾ ನಡುಗಡ್ಡೆಗಳಲ್ಲಿ ಜನರು ರಾಮಕಥೆಯ ಪಾರಾಯಣವನ್ನು ಭಕ್ತಿಭಾವದಿಂದ ಮಾಡುತ್ತಾರೆಂಬುದು ನಿಜ. ಬಾಲಿ ನಡುಗಡ್ಡೆಯ ರಾಮಾಯಣ ಕಥೆಯನ್ನು ಬರೆದವನು ವಾಲ್ಮೀಕಿಯೇ ಎಂದು ಈ ಜನ ನಂಬುತ್ತದೆ. ರಾಮನು ತನ್ನ ವೃದ್ಧಾಪ್ಯದಲ್ಲಿ ವಾನಪ್ರಸ್ಥಾಶ್ರಮ ಸ್ವೀಕರಿಸಿದನು ಎಂದು ಈ ರಾಮಾಯಣದಲ್ಲಿ ಹೇಳಿದೆ. ಇಲ್ಲಿಯ ಜನರು ಸೂತ್ರದ ಗೊಂಬೆಗಳನ್ನು ಕುಣಿಸಿ ರಾಮಕಥೆಯ ಪ್ರಯೋಗಗಳನ್ನು ತೋರಿಸುತ್ತಾರೆ. ಇವರ ನೃತ್ಯಗಳಿಗೆ ರಾಮಾಯಣದ ಕಥೆಯ ವಿಷಯಗಳೆ

ಬಹುತರವಾಗಿ ಆಧಾರಗಳಾಗಿವೆ.

**ಜಾವಾ.** ಜಾವಾದಲ್ಲಿ ಎರಡು ರಾಮಾಯಣಗಳಿವೆ. ಒಂದರಲ್ಲಿ ಉತ್ತರಕಾಂಡವು ಗದ್ಯದಲ್ಲಿ ಬರೆಯಲ್ಪಟ್ಟಿದೆ. "ಗಾಯಕವಾಡ ಓರಿಯಂಟಲ್ ಸಿರೀಜ್" ದಲ್ಲಿ "ಸಂಸ್ಕೃತ ಟೆಕ್ಸ್ಟ ಫ್ರಾಮ್ ಬಾಲಿ" ಎಂಬ ಪ್ರಕರಣದಲ್ಲಿ "ಚರಿತ ರಾಮಾಯಣ"ದ ಉಲ್ಲೇಖವಿದೆ. ಅದರಲ್ಲಿ ಮೊದಲನೆ ರಾಮಾಯಣದ ಆರು ಕಾಂಡಗಳನ್ನು ವ್ಯಾಕರಣ ಟಿಪ್ಪಣಿಯೊಂದಿಗೆ ಕೊಟ್ಟಿದ್ದು ಮುಂದೆ ೧೦೦ ಶ್ಲೋಕಗಳಲ್ಲಿ ಇಡೀ ರಾಮಾಯಣದ ಕಥೆಯನ್ನು ಹೇಳಿದೆ. ಮಧ್ಯಜಾವಾದಲ್ಲಿ ೧೩ನೆಯ ಶತಮಾನದಲ್ಲಿ ಕಟ್ಟಿದ ಶಿವ ಮಂದಿರದ ಗೋಡೆಯ ಮೇಲೆ ರಾಮಾಯಣದ ಚಿತ್ರಗಳು ಕೊರೆಯಲ್ಪಟ್ಟಿವೆ. ೧೬ನೆಯ ಶತಮಾನದ ರಾಮಾಯಣದಲ್ಲಿ "ರಾಮಲಿಂಗ" ಮತ್ತು "ಸರೇತ ಕಾಂಡ"ಗಳಿಗೆ ಹೆಚ್ಚಿನ ಮಹತ್ವವಿದೆ.

**ಇಂಡೋಚೀನ.** ಇಂಡೋಚೀನದ ರಾಮಕಥೆಯ ಪ್ರಾರಂಭದ ಕಾಲ ಯೇಸುಕ್ರಿಸ್ತನ ಜನ್ಮಕಾಲಕ್ಕೆ ಸಮೀಪದ ಕಾಲವಾಗಿದೆ. ಕ್ರಿ. ಶ. ೬೫೩ ರಿಂದ ೬೭೮ ರ ವರೆಗಿನ ಕಾಲದಲ್ಲಿ ಅಲ್ಲಿ ಆಳುತ್ತಿದ್ದ ಪ್ರಕಾಶವರ್ಮನ್ ಎಂಬ ರಾಜನಿಗೆ ವಾಲ್ಮೀಕಿಯ ಮೂರ್ತಿಯಿದ್ದ ಒಂದು ಮಂದಿರ ಕಂಡುಬರುತ್ತದೆ. ಈ ಮಂದಿರದ ಗೋಡೆಯ ಮೇಲೆ ವಾಲ್ಮೀಕಿಯು ವಿಷ್ಣುವಿನ ಅವತಾರವೆಂಬ ಅರ್ಥ ಬರುವ ಶ್ಲೋಕವು ಬರೆಯಲ್ಪಟ್ಟಿದೆ. "ಜರ್ನಲ್ ಆಫ್ ಓರಿಯಂಟಲ್ ರಿಸರ್ಚ"ದಲ್ಲಿ ಈ ಶ್ಲೋಕ ಕೊಟ್ಟಿದ್ದು, ಅದು ಈ ರೀತಿ ಇದೆ:

ಯಸ್ಯ ಶೋಕಾತ್ ಸಮುತ್ಪನ್ನಂ
ಶ್ಲೋಕಂ ಬ್ರಹ್ಮಾಭಿಪೂಜತಿ
ವಿಷ್ಣೋಃ ಪುಂಸಃ ಪುರಾಣಸ್ಯ
ಮಾನುಷಸ್ಯಾತ್ಮರೂಪಿಣಂ

"ಬುಲೆಟಿನ್ ಎಕೋಲಾ ಫ್ರಾಂಸೆಸ್, ಎಕ್ಸ್ಟೇಮ್ ಓರಿಯನ್"ದಲ್ಲಿ ಹದಿನೆಂಟನೆಯ ಶತಮಾನದಲ್ಲಿ ಚಂಪಾ ನಗರಿಯಲ್ಲಿ ರಾಮಾಯಣ ಕಥೆ ಬರೆಯಲ್ಪಟ್ಟಿತು ಎಂದು ಉಲ್ಲೇಖವಿದೆ. ವಾಲ್ಮೀಕಿ ರಾಮಾಯಣದಂತೆಯೆ ಈ ರಾಮಾಯಣವಿದ್ದರೂ ಇದರಲ್ಲಿ ತುಸು ವಿಚಿತ್ರ ಕಥಾಭಾಗವೂ ಇದ್ದು ಅದು ಈ ಮುಂದಿನಂತಿದೆ:

ರಾವಣನ ರಾಜ್ಯವು ಚಂಪಾ ನಗರದ (ಅನಾಮಾ) ದಕ್ಷಿಣ ಭಾಗದಲ್ಲಿತ್ತು. ದಶರಥನ ರಾಜ್ಯವು ಉತ್ತರ ಭಾಗದಲ್ಲಿತ್ತು. ರಾವಣನು ದಶರಥನ ರಾಜ್ಯದ ಮೇಲೆ ದಾಳಿ ಮಾಡಿ ಸೀತೆಯನ್ನು ಅಪಹರಿಸಿದನು.

ತಮ್ಮ ರಾಮಚರಿತ್ರೆಯಲ್ಲಿಯ ಎಲ್ಲ ಘಟನೆಗಳು ತಮ್ಮ ದೇಶಲ್ಲಿಯೇ ಪ್ರತ್ಯಕ್ಷ ಘಟಿಸಿದವು ಎಂದು ಇಲ್ಲಿಯ ಜನರ ನಂಬಿಗೆ ಇದೆ. ಇಷ್ಟು ಮಾತ್ರವಲ್ಲ, ತಾವು ರಾಮನ ವಂಶಜರು ಎಂದು ಈ ಜನ ತಿಳಿಯುತ್ತಾರೆ. ಇಂಡೋಚೀನದ ಪ್ರಾಚೀನ ರಾಜಧಾನಿ "ಅಂಗಕೋರವಾಟ"ದಲ್ಲಿತ್ತು. ಅಲ್ಲಿಯ ಒಂದು ದೊಡ್ಡ ದೇವಾಲಯದಲ್ಲಿ ರಾಮಾಯಣದ ಚಿತ್ರಗಳು ಕೊರೆಯಲ್ಪಟ್ಟಿವೆ. ಇಲ್ಲಿಯ ಖೇಮರ ಭಾಷೆಯಲ್ಲಿ "ರೇಆಮ ಕೇರ" (ರಾಮಕೀರ್ತಿ) ಎಂಬ ಹೆಸರಿನಲ್ಲಿ ರಾಮಾಯಣ ಗ್ರಂಥ ಬರೆಯಲ್ಪಟ್ಟಿದೆ. ಇಂಡೋನೇಶಿಯದ ''ಸೇರಿರಾಮ''ದ ಪ್ರಭಾವ ಈ ರಾಮಾಯಣದ ಮೇಲೆ ಬಿದ್ದಂತಿದೆ. ಆದರೆ "ಸೇರಿರಾಮ"ದಲ್ಲಿ ಕೈಕೇಯಿಯ ಹೆಸರೇ ಇರುವದಿಲ್ಲ. ಶೂರ್ಪಣಖೆಯ ಪುತ್ರನನ್ನು ಲಕ್ಷ್ಮಣನು ಕೊಂದನು ಎಂದು ಹೇಳಿದೆ.

"ರೇಆಮಕೇರ"ದ ರಾಮಕಥೆಯು ವಿಶ್ವಾಮಿತ್ರನ ಯಜ್ಞದಿಂದ ಪ್ರಾರಂಭವಾಗುತ್ತದೆ. ಜನಕರಾಜನಿಗೆ ನದಿಯಲ್ಲಿ ಒಂದು ದೋಣಿಯ ಮೇಲಿರುವ ಸೀತೆಯು ಕಣ್ಣಿಗೆ ಬೀಳುತ್ತಾಳೆ.

ಅವನು ಅವಳನ್ನು ತನ್ನ ಮಗಳೆಂದು ಸ್ವೀಕರಿಸುತ್ತಾನೆ. ಉಪಲಬ್ಧವಿರುವ "ರೇಆಮಕೇರ"ದ ಹಸ್ತಪ್ರತಿಗಳಲ್ಲಿ ರಾವಣನ ಚಿತ್ರದ ಮೂಲಕವೆ ಸೀತಾತ್ಯಾಗವಾಯಿತು ಎಂಬ ಉಲ್ಲೇಖವಿದೆ. "ಸೀತೆಯು ರಾವಣನ ಚಿತ್ರವನ್ನು ಸೆರಗಿನಲ್ಲಿ ಮುಚ್ಚಿಕೊಂಡು ತಂದಿದ್ದಳು. ಅಲ್ಲದೆ ಸೀತೆಗೆ 'ಇನ್ನು ಅಯೋಧ್ಯೆಗೆ ಹೊರಡಿ' ಎಂದು ರಾಮನ ದೂತರು ಹೇಳಿದಾಗ ಅವಳು 'ರಾಮನ ಅಂತ್ಯಕಾಲಕ್ಕೆ ಬರುವೆನು' ಎಂದು ಹೇಳುತ್ತಾಳೆ. ನಂತರ ರಾಮನು ತಾನು ಸತ್ತೆನೆಂಬ ವಾರ್ತೆಯನ್ನು ಹನುಮಂತನ ಮುಖಾಂತರ ಸೀತೆಗೆ ತಲುಪಿಸುತ್ತಾನೆ. ಆಗ ಸೀತೆ ಅಯೋಧ್ಯೆಗೆ ಬರುತ್ತಾಳೆ. ಅಲ್ಲಿ ರಾಮನ ಕೃತಕ ಚಿತೆಯ ಎದುರು ಕುಳಿತು ಸೀತೆ ಶೋಕಿಸುತ್ತಾಳೆ. ಅಡಗಿ ಕುಳಿತಿದ್ದ ರಾಮನು ಮುಂದೆ ಬಂದು ಸೀತೆಯನ್ನು ತೊಡೆಯ ಮೇಲೆ ಕೂಡ್ರಿಸಿಕೊಂಡು ಅವಳ ಕಣ್ಣೀರನ್ನು ಒರೆಸುತ್ತಾನೆ. ಸೀತೆ ಮೂರ್ಛೆಹೋಗಿ ಪುನಃ ಎಚ್ಚರಾಗುತ್ತಾಳೆ. ರಾಮನ ಕಪಟ ನಾಟಕಕ್ಕಾಗಿ ಅವನನ್ನು ಜರೆದು ನಾಗರಾಜ ವರುಣನಿಗೆ ಶರಣು ಹೋಗುತ್ತಾಳೆ." ಎಂಬ ಕಥೆ "ರೇಆಮಕೇರ" ದಲ್ಲಿದೆ.

**ಸಯಾಮು.** ಸಯಾಮ ಈಗಲೂ ಬೌದ್ಧ ಧರ್ಮೀಯ ದೇಶವಾಗಿದೆ. ಆದರೆ ಇಲ್ಲಿಯೂ ರಾಮಾಯಣದ ಪ್ರಸಾರವಿದೆ. ಇಲ್ಲಿಯ ರಾಮಾಯಣಕ್ಕೆ "ರಾಮಕಿಯೇನ" ಎಂಬ ಹೆಸರಿದೆ. ಬಾಂಕಾಂಗದಲ್ಲಿಯ "ಬಿಲಿ ಓರಿಯಂಟಲ್ ಸೀರಿಜ"ದವರು "ರಾಮಕೀರ್ತಿ" ಎಂದು ಇದರ ಭಾಷಾಂತರವನ್ನು ಪ್ರಸಿದ್ಧಿಸಿದ್ದಾರೆ. "ರೇಆಮಕೇರ"ದ ಪ್ರಭಾವವು "ರಾಮಕಿಯೇನ"ದ ಮೇಲೆ ಬಿದ್ದಿದೆಯೆಂದು ಎಸ್. ಕಾರ್ಪಲೇಜ ಎಂಬವರು ಅಭಿಪ್ರಾಯಪಟ್ಟಿದ್ದಾರೆ. "ರಾಮಕಿಯೇನ" ದಲ್ಲಿಯ ಹನುಮಂತನು ಬ್ರಹ್ಮಚಾರಿಯಲ್ಲ. ಆತ ಅನೇಕ ಸ್ತ್ರೀಯರೊಡನೆ ಪ್ರಣಯಲೀಲೆ ನಡೆಸಿದ್ದ



ನೆಂದು "ಹನುಮಾನಜಿ ಪ್ರಭಾ" (ಅಧ್ಯಾಯ ೨೩), "ಬೇಂಜಕಾಯಾ" (ಅಧ್ಯಾಯ ೨೫), "ನಾಗಕನ್ಯಾ ಸುವರ್ಣಮತ್ಸ್ಯ" (ಅಧ್ಯಾಯ ೨೬) ಗಳಲ್ಲಿಯ ಘಟನೆಗಳಿಂದ ಕಂಡುಬರುತ್ತದೆ. ೩೫ನೆಯ ಅಧ್ಯಾಯದಲ್ಲಿ ಸಂಜೀವನ ಯಾಗದ ಸಮಯದಲ್ಲಿ ಹನುಮಂತನು ರಾವಣನ ವೇಷ ಧರಿಸಿ ಮಂಡೋದರಿಯೊಡನೆ ಕ್ರೀಡಿಸಿದನೆಂಬ ಉಲ್ಲೇಖವಿದೆ. ಲಕ್ಷ್ಮಣನು ಶೂರ್ಪಣಖೆಯ ಮಗನನ್ನು ಕೊಂದನು, ಲಕ್ಷ್ಮಣನು ಹನುಮಂತನೊಡನೆ ಯುದ್ಧ ಮಾಡುತ್ತಾನೆ, ಸೇತುವೆಯನ್ನು ಕಟ್ಟುವ ಕಾಲಕ್ಕೆ ರಾವಣನು ಸಾಧುವೇಷ ತಾಳಿ ಯುದ್ಧ ಮಾಡಬಾರದೆಂದು ರಾಮನಿಗೆ ಉಪದೇಶ ಮಾಡುತ್ತಾನೆ ಎಂದು ಈ ರಾಮಾಯಣದಲ್ಲಿ ಹೇಳಿದೆ.

ಸೂತ್ರದ ಗೊಂಬೆಗಳ ಮೂಲಕ ಸಯಾಮದಲ್ಲಿ ರಾಮಾಯಣದ ಕಥೆಗಳನ್ನು ಆಡಿ ತೋರಿಸುತ್ತಾರೆ. ಇಲ್ಲಿಯ ಜಾನಪದ ಕಥೆಗಳಲ್ಲಿ ರಾಮಾಯಣದ ಘಟನೆಗಳ ಸಂದರ್ಭಗಳು ಕಂಡು ಬರುತ್ತವೆ. ಇಲ್ಲಿಯ ಅನೇಕ ಅರಸರು ರಾಮಭಕ್ತರಾಗಿದ್ದಾರೆ. ಇವರು ತಮ್ಮ ಹೆಸರಿನ ಹಿಂದೆ ಮತ್ತು ಮುಂದೆ "ರಾಮ" ಎಂಬ ಶಬ್ದ

ವನ್ನು ಹಚ್ಚುತ್ತಾರೆ. ಸುಖದೇವ ರಾಮ, ರಾಮ ಖಮೇಂಗ, ಮಹಾಮಂತಕ ರಾಮ ಎಂಬಿತ್ಯಾದಿ ಹೆಸರುಗಳು ಇಲ್ಲಿವೆ.

**ಲಾವೊ.** ಸಯಾಮದ ಈಶಾನ್ಯ ಭಾಗದಲ್ಲಿ ಲಾವೊ ಭಾಷೆಯಲ್ಲಿ ಪ್ರಸಿದ್ಧವಾಗಿರುವ "ಪಂಚ ತಂತ್ರ"ದಲ್ಲಿ ದಶರಥನು ಅಂಧ ಋಷಿಯ ಮಗ ನನ್ನು ಕೊಂದ ಘಟನೆಯ ವರ್ಣನೆಯಿದ್ದು ರಾಮ ನಿಗೆ ವಿಭೀಷಣನು ಶರಣುಬಂದ ಸಂಗತಿಯ ಉಲ್ಲೇಖವಿದೆ. ಲಾವೊ ಭಾಷೆಯಲ್ಲಿರುವ ರಾಮಾಯಣದ ಹೆಸರು ''ರಾಮ ಜಾತಕ'' ಎಂದಿದೆ. ಅದರಲ್ಲಿ ರಾಮನು ರಾವಣನ ಕಕ್ಕನ ಮಗ ಎಂದು ಹೇಳಿದೆ! ಜಾತಕ ಗ್ರಂಥಗಳ ಪದ್ಧತಿಯಂತೆ ''ರಾಮ ಜಾತಕ''ದಲ್ಲಿ ರಾಮ ಅಂದರೆ ಬುದ್ಧ, ರಾವಣ ಅಂದರೆ ದೇವದತ್ತ, ದಶರಥನೆಂದರೆ ಶುದ್ಧೋಧನ, ಲಕ್ಷ್ಮಣನೆಂದರೆ ಆನಂದ, ಸೀತೆಯೆಂದರೆ ಉಪಲವಣ್ಣಾ ಎಂಬ ಸಾಮ್ಯವನ್ನು ಸಿದ್ಧಮಾಡಿ ಕೊಡಲಾಗಿದೆ.

**ಬ್ರಹ್ಮದೇಶ.** ಬ್ರಹ್ಮದೇಶದಲ್ಲಿ ರಾಮಾಯ ಣದ ಕಥೆ ಪ್ರಚುರವಾದದ್ದು ೧೮೦೦ ರಲ್ಲಿ. ಅದರ ಹೆಸರು ''ರಾಮಾಯಾಗನ'' ಎಂದಿದೆ. ಉತೊ ಎಂಬ ಪ್ರಸಿದ್ಧ ಕವಿ ಇದನ್ನು ರಚಿಸಿದ್ದಾನೆ. "ರಾಮಾಯಾಗನ"ದಲ್ಲಿ ಶೂರ್ಪಣಖೆಯೇ ಮೃಗ ರೂಪಧರಿಸಿ ರಾಮನ ಬಳಿ ಬರುತ್ತಾಳೆ. ರಾಮನ ಬಾಣದಿಂದ ಗಾಯಗೊಂಡ ಬಳಿಕ ತನ್ನ ರಾಕ್ಷಸೀ ರೂಪವನ್ನು ಪ್ರಕಟಿಸುತ್ತಾಳೆ ಎಂದು ಹೇಳಿದೆ.

**ಯುರೋಪ.** ರಾಮಾಯಣದ ಪ್ರಸಾರ ಯುರೋಪದಲ್ಲಿ ಹೇಗಿದೆಯೆಂಬುದನ್ನು ಇನ್ನು ನೋಡೋಣ. ಕ್ರಿ. ಶ. ೧೬೦೯ ರಲ್ಲಿ ಓರ್ವ ಜೆಸು-ಯಿಟ್ ಪಾದ್ರಿಯು "ಲಿಬ್ರೊ ಡಾ ಸೈಠಾ" ಎಂಬ ಗ್ರಂಥವನ್ನು ಬರೆದನು. ಅದರಲ್ಲಿ ದಶಾವತಾರಗಳ ವಿಷಯವನ್ನು ಹೇಳುವಾಗ ಆ ಸಮಯದಲ್ಲಿ ದಕ್ಷಿಣ ಭಾರತದಲ್ಲಿ ಪ್ರಚಲಿತವಿದ್ದ ರಾಮಾಯ ಣದ ಕಥೆಯನ್ನು ಹೇಳಿದ್ದಾನೆ. ಡಚ್ ಈಸ್ಟ ಇಂಡಿಯಾ ಕಂಪನಿಯಲ್ಲಿ ನೌಕರನಾಗಿದ್ದ ಎ. ರೋಜೇರಿಯುಸ್ ಎಂಬಾತನು ಬರೆದಿರುವ "ದಿ ಓಪೇನದಾರೀ" ಎಂಬ ರಾಮಾಯಣ ಕಥೆಯು ೧೬೫೧ರಲ್ಲಿ ಪ್ರಕಟವಾಗಿತ್ತು. ೧೬೫೮ ರಿಂದ ಮುಂದೆ ಆರು ವರ್ಷಗಳ ವರೆಗೆ ಬಲಡೆಯೂಸ್ ಎಂಬಾತನು ದಕ್ಷಿಣ ಭಾರತ ಮತ್ತು ಸಿಂಹಳಗ ಳಲ್ಲಿ ಪ್ರವಾಸ ಮಾಡಿದನು. ಆತನು ೧೬೭೨ ರಲ್ಲಿ ರಾಮಾಯಣ ಕಥೆಯ ಒಂದು ಗ್ರಂಥವನ್ನು ಪ್ರಕಟಿಸಿದನು. ಇವೆರಡೂ ಹಾಲಂಡದಲ್ಲಿ ಪ್ರಕ ಟವಾದವು. ಡಿ. ಫರಿಯಾ ಎಂಬಾತನು ಸ್ಪಾನಿಶ್ ಭಾಷೆಯಲ್ಲಿ ಬರೆದ ರಾಮಾಯಣ "ಆಸಿಯಾ ಪೋರ್ತುಗೀಸಾ" ೧೬೭೪ ರಲ್ಲಿ ಪ್ರಕಟವಾ ಯಿತು. ೧೬೮೮ರಲ್ಲಿ ಡಿ. ಸೋಬುಲ್‌ನು "ರಲಾಸಿ ಓ ಡೆಸ್ ಎರಪರ" ಎಂಬ ಸಂಕ್ಷಿಪ್ತ ರಾಮ ಕಥೆಯನ್ನು ಪ್ರಕಟಿಸಿದನು. ಡಾ. ರೌಲಂಡರು ರಾಮಾಯಣದ ಆಧಾರದಿಂದ ಪೋರ್ತುಗೀಜ ಭಾಷೆಯಲ್ಲಿ ಮೂರು ಗ್ರಂಥಗಳನ್ನು ಬರೆದಿದ್ದಾರೆ. ಅವುಗಳ ಡಚ್ ಭಾಷಾಂತರವನ್ನು ಯುರೋಪ ದಲ್ಲೆಲ್ಲ ಓದುತ್ತಾರೆ. ಪ್ರಸಿದ್ಧ ಪ್ರವಾಸಿ ಜೆ. ಬಿ. ಟವನಿಯರನು ತನ್ನ ಭಾರತ ಪ್ರವಾಸ ವರ್ಣನೆಯಲ್ಲಿ "ರಾಮಕಥೆ"ಯನ್ನು ಹೇಳಿದ್ದಾನೆ. ಪ್ಯಾರಿಸದಲ್ಲೂ ರಾಮಾಯಣದ ಆಧಾರದಿಂದ ಬರೆದ ಕೆಲವು ಪುಸ್ತಕಗಳು ಪ್ರಕಟವಾಗಿವೆ.

ರಶಿಯದಲ್ಲಿ ಭಾರತದ ಅನೇಕ ಮಹಾಗ್ರಂಥ ಗಳ ಭಾಷಾಂತರ ಕಾರ್ಯ ನಡೆದಿದ್ದು ಅದರಲ್ಲಿ ರಾಮಾಯಣವೂ ಇದೆ.

ಈ ರೀತಿಯಲ್ಲಿ ಪುರುಷೋತ್ತಮನಾದ ರಾಮನು ತನ್ನ ಪ್ರಭಾವವನ್ನು ಜಗತ್ತಿನ ನಾನಾ ಭಾಗಗಳಲ್ಲಿ ನಾನಾ ಬಗೆಗಳಲ್ಲಿ ಬೀರುತ್ತಿದ್ದಾನೆ.

ತನ್ನ ಬಡಾಯಿಗಳು ಸತ್ಯದಂತೆ ಕಾಣಿಸಬೇಕೆಂದು ಕೂಡ ಅವನು ಯತ್ನಿಸಲಿಲ್ಲ

# ಸುಳ್ಳಿನ ಶಿಖಾಮಣಿ ಬ್ಯಾರನ್ ಮುಂಚೋಸೆನ್

ಸುಳ್ಳು ಹೇಳುವ ಕಲೆಯನ್ನು ಕೈವಶ ಪಡಿಸಿಕೊಂಡವರನ್ನು ನಾವು ಒಮ್ಮೊಮ್ಮೆ ಕಾಣುತ್ತೇವೆ. ಸುಳ್ಳನ್ನು ಸತ್ಯವೇ ಅನಿಸುವಂತೆ ಅವರು ಮಾತಾಡುತ್ತಾರೆ. ಆದರೆ ಜಗತ್ತಿನ ಅದ್ವಿತೀಯ ಸುಳ್ಳುಗಾರನೆಂದು ಹೆಸರಾದ ಬ್ಯಾರನ್ ಮುಂಚೋಸೇನನ ವೈಶಿಷ್ಟ್ಯ ಬೇರೆಯೇ ಆಗಿತ್ತು.

೧೮ ನೇ ಶತಮಾನದ ಕೊನೆಯಲ್ಲಿದ್ದ ಬ್ಯಾರನ್ ಮುಂಚೋಸೇನನು ಎಂಥ ಅದ್ಭುತ ಸುಳ್ಳುಗಳನ್ನು ಹೇಳುತ್ತಿದ್ದನೆಂದರೆ ಅವನು ತಮ್ಮವನೆಂದು ಜರ್ಮನ್ನರು ಇಂದಿಗೂ ಅಭಿಮಾನದಿಂದ ಹೇಳಿಕೊಳ್ಳುತ್ತಾರೆ.

ಮುಂಚೋಸೇನನ ಹಿರಿಮೆಯಿರುವುದು ಅವನ ಸುಳ್ಳುಗಳ ದಿಟ್ಟತನದಲ್ಲಿ. ತನ್ನ ಹೇಳಿಕೆಗಳನ್ನು ಜನರು ನಂಬಬಹುದೇ ಎಂದು ಅವನು ಕ್ಷಣ ಮಾತ್ರವೂ ಚಿಂತಿಸದೆ ಬುರುಡೆಗಳನ್ನು ನಿರ್ಭೀತಿಯಿಂದ ಬಿಡುತ್ತಿದ್ದನು.

ಬ್ಯಾರನ್ ಮುಂಚೋಸೇನನು ಜರ್ಮನ್ ಸೈನ್ಯದೊಡನೆ ಯುರೋಪಿನಲ್ಲೆಲ್ಲ ತಿರುಗಿ ನಿವೃತ್ತನಾದ ಸೈನಿಕ ಅಧಿಕಾರಿಯಾಗಿದ್ದನು. ಹೆನೋವರದಲ್ಲಿದ್ದ ತನ್ನ ದೇಸಗತಿಯಲ್ಲಿ ವಿರಾಮವಾಗಿ ಜೀವಿಸುತ್ತ ಅವನು ಸಂಜೆಯ ವೇಳೆಯಲ್ಲಿ ಮನೋರಂಜನೆಗಾಗಿ ತನ್ನ ಪೌರುಷದ ಕಥೆಗಳನ್ನು ಬಿಚ್ಚುತ್ತಿದ್ದನು. ಅವುಗಳನ್ನು ಸಂತೋಷದಿಂದ ಆಲಿಸುವವರಿಗೇನೂ ಕೊರತೆಯಿರಲಿಲ್ಲ.

ಇಲ್ಲಿವೆ ಅವನ ಚುಟಕಗಳಲ್ಲಿ ಕೆಲವು:

ಒಂದು ಸಲ ನಾನು ಪೋಲಂಡಿನಲ್ಲಿ ಕುದುರೆಯೇರಿ ಸಾಗುತ್ತಿದ್ದೆ. ಆಗ ಚಳಿಗಾಲ. ಎಲ್ಲೆಲ್ಲಿಯೂ ಹಿಮ ಬಿದ್ದಿತ್ತು. ನಾನು ಒಂದು ಹಿಮ ಬಿರುಗಾಳಿಯಲ್ಲಿ ಶಿಲುಕಿದೆನು. ಕುದುರೆಯಿಂದ ಇಳಿದು ಗಿಡದ ಬೊಡ್ಡೆ (ಗುತ್ತಿ) ಯ ಹಾಗೆ ಕಂಡ ಒಂದು ಪದಾರ್ಥಕ್ಕೆ ಆ ಪ್ರಾಣಿಯನ್ನು ಕಟ್ಟಿಹಾಕಿ ಹಿಮದ ರಾಶಿಯ ಮೇಲೇ ಮಲಗಿ ನಿದ್ದೆಹೋದೆನು.

ಮರುದಿನ ಬೆಳಿಗ್ಗೆ ಎದ್ದು ಏನು ನೋಡುತ್ತೇನೆ,—ನಾನು ಒಂದು ಚರ್ಚಿನ ಅಂಗಳದಲ್ಲಿದ್ದೇನೆ ಮತ್ತು ನನ್ನ ಕುದುರೆ ಚರ್ಚಿನ ಶಿಖರದ ತುದಿಯ ಸಲಾಕೆಯಿಂದ ತೂಗಾಡುತ್ತಿದೆ! ರಾತ್ರಿ ನಾನು ನಿದ್ದೆಯಲ್ಲಿದ್ದಾಗ ಹಿಮವು ಸಾವಕಾಶವಾಗಿ ಕರಗಿರಬೇಕು ಮತ್ತು ಅದರೊಡನೆ ನಾನು ಮೆಲ್ಲಮೆಲ್ಲಗೆ ಕೆಳಗೆ ಸರಿದು ಚರ್ಚಿನ ಅಂಗಳದ ನೆಲ ಮುಟ್ಟಿರಬೇಕು. ನಾನು ಗಿಡದ ಬೊಡ್ಡೆಯೆಂದು ಬಗೆದು ಕುದುರೆಯನ್ನು ಬಿಗಿದದ್ದು ನಿಜವಾಗಿ ಹಿಮದಿಂದ ಮುಚ್ಚಿಹೋಗಿದ್ದ ಇಗರ್ಜಿಯ ಶಿಖರದ ಸಲಾಕೆಯಾಗಿತ್ತು. ಆದ್ದರಿಂದಲೇ ನನ್ನ ಕುದುರೆ ಬೆಳಿಗ್ಗೆ ಶಿಖರದಿಂದ ತೂಗಾಡುತ್ತಿತ್ತು!

*

ಇನ್ನೊಂದು ಬಾರಿ ಪ್ರಶಿಯದ ಸೈನ್ಯ ಯಾವುದೋ ಪಟ್ಟಣಕ್ಕೆ ಮುತ್ತಿಗೆ ಹಾಕಿತ್ತು. ನಾನೂ ಅದರಲ್ಲಿದ್ದೆ. ಆ ಪಟ್ಟಣದಲ್ಲಿ ಏನೇನು ನಡೆದಿದೆಯೆಂದು ನೋಡುವ ಹಂಬಲ ಒಮ್ಮೆಲೇ ನನ್ನಲ್ಲಿ ಉಂಟಾಯಿತು. ಅದಕ್ಕಾಗಿ ನನ್ನ

ಸೈನ್ಯದ ತೋಫುಖಾನೆಯವರು ಹಾರಿಸಿದ ಒಂದು ದೊಡ್ಡ ಗುಂಡಿನ ಮೇಲೆ ದಿಗ್ಗನೆ ಜಿಗಿದು ಕುಳಿತೆ. ಗುಂಡು ನನ್ನನ್ನು ಹೊತ್ತು ವೇಗವಾಗಿ ಆಕಾಶ ದಲ್ಲಿ ಸಾಗತೊಡಗಿತು. ಆದರೆ ಅರ್ಧ ದಾರಿ ಯಲ್ಲಿ ನನಗೊಂದು ವಿಚಾರ ಹೊಳೆಯಿತು. ನಾನು ಈ ಗುಂಡಿನ ಸಂಗಡ ಶತ್ರುಗಳ ಪಟ್ಟಣ ದಲ್ಲಿ ಹೋಗಿ ಇಳಿದದ್ದಾದರೆ ಅಲ್ಲಿ ಗೂಢಚಾರ ನೆಂದು ನನ್ನನ್ನು ಗುಂಡಿನ ಬಾಯಿಗೆ ಕೊಡದಿರು ವರೆ? ನನಗೇನೂ ಜೀವ ಭಾರವಾಗಿರಲಿಲ್ಲ. ಅಷ್ಟು ಹೊತ್ತಿಗೆ ನಾವು ಮುತ್ತಿದ್ದ ಪಟ್ಟಣದಿಂದ ನಮ್ಮ ಸೈನ್ಯದ ಕಡೆ ಹಾರುತ್ತಿರುವ ಇನ್ನೊಂದು ತೋಫಿನ ಗುಂಡು ನನ್ನ ಕಣ್ಣಿಗೆ ಬಿತ್ತು. ನಾನು ತಟ್ಟನೆ ಆ ಗುಂಡಿನ ಮೇಲೆ ಹಾರಿ ಕುಳಿತು ಮರಳಿ ಬಂದುಬಿಟ್ಟೆ.

*

ಮತ್ತೊಂದು ಸಂದರ್ಭದಲ್ಲಿ ನಾನು ಬೇಟೆ ಯಾಡುವಾಗ ಒಂದು ನರಿಯನ್ನು ಬರಿಗೈಯಿಂದ ಹಿಡಿದೆ. ನನಗೆ ಅದರ ಅಖಂಡ ಚರ್ಮ ಬೇಕಾ ಗಿತ್ತು. ಆದರೆ ಅದನ್ನು ಗುಂಡಿಕ್ಕಿ ಕೊಂದರೆ ಚರ್ಮ ತೂತಾಗಿ ಕೆಟ್ಟುಹೋಗುವದು. ಆದ್ದ ರಿಂದ ನಾನು ನರಿಯನ್ನು ಒಂದು ಕಂಬಕ್ಕೆ ಕಟ್ಟಿ ಹಾಕಿ ಚಾಟಿಯಿಂದ ಚೆನ್ನಾಗಿ ಥಳಿಸಿದೆ. ಬಡ ಪ್ರಾಣಿಯು ಹೊಡೆತ ತಾಳಲಾರದೆ ತನ್ನ ಚರ್ಮ ದಿಂದ ಹೊರಗೆ ನೆಗೆದು ಓಡಿ ಹೋಯಿತು. ಈ ಉಪಾಯದಿಂದ ನನಗೆ ರಂಧ್ರವಿಲ್ಲದ ಇಡೀ ನರಿ ಚರ್ಮ ಇದ್ದಕ್ಕಿದ್ದಂತೆ ಸಿಕ್ಕಿತು.

*

ಒಂದು ಸಲ ನಾನು ಪಕ್ಷಿ ಬೇಟೆಗೆ ಹೋಗಿದ್ದೆ. ಒಂದು ಜಲಾಶಯದಲ್ಲಿ ನೂರಾರು ಬಾತುಕೋಳಿ ಗಳಿದ್ದವು. ಬಾತುಕೋಳಿಗಳನ್ನು ನಾನು ಹೊಡೆ ಯಲಿಲ್ಲ. ಅವುಗಳನ್ನು ಹಿಡಿಯಲು ಒಂದು ಉದ್ದನ್ನ ದಾರದ ತುದಿಗೆ ಮಾಂಸದ ತುಣುಕು ಕಟ್ಟಿ ಒಂದು ಗಾಳ ತಯಾರಿಸಿದೆನು. ಮೊದ ಲನೇ ಬಾತು ಅದನ್ನು ಆತುರದಿಂದ ನುಂಗಿತು. ಅದು ಇಡೀ ದಾರ ಸಹಿತ ಬಾತಿನ ಹೊಟ್ಟೆಯೊಳ ಗಿಂದ ಪಾರಾಗಿ ಹೊರಗೆ ಬಂತು. ಅದನ್ನು ಇನ್ನೊಂದು ಬಾತು ನುಂಗಿತು. ಹೀಗೇ ಅನೇಕ ಬಾತುಗಳು ಆ ದಾರಕ್ಕೆ ಪೋಣಿಸಲ್ಪಟ್ಟು ಬಾತು ಗಳ ಒಂದು ಸರವೇ ತಯಾರಾಯಿತು. ಅವನ್ನೆಲ್ಲ ಎಳೆದುಕೊಂಡು ನಾನು ಮನೆಗೆ ಹೊರಟೆ. ಆದರೆ ಅರ್ಧ ದಾರಿಯಲ್ಲಿ ಬಾತುಗಳಿಗೆ ಹಠಾತ್ತಾಗಿ ಏನು ಹುರುಪು ಬಂತೋ, ಅವು ಎದ್ದು ಆಕಾಶಕ್ಕೆ ಹಾರಿದವು. ದಾರದ ತುದಿಯನ್ನು ಹಿಡಿದಿದ್ದ ನಾನೂ ಮೇಲೆತ್ತಲ್ಪಟ್ಟೆ. ಇದೂ ಒಳಿತೇ ಆಯಿ ತೆಂದು ನನಗನಿಸಿತು. ನನ್ನ ಕೋಟಿನ ಪಕ್ಕ ಗಳನ್ನು ದೋಣಿಯ ಚುಕ್ಕಾಣಿಯಂತೆ ಗಾಳಿ ಯಲ್ಲಿ ತಿರುಗಿಸುತ್ತ ನೆಟ್ಟಗೆ ಹಕ್ಕಿಗಳೊಡನೆ ನನ್ನ ಮನೆಯ ಕಡೆ ಆಕಾಶಮಾರ್ಗವಾಗಿಯೇ ಸಾಗಿ ದೆನು. ಇದರಿಂದ ನನಗೆ ಎಷ್ಟೋ ವೇಳೆಯೂ ಶ್ರಮವೂ ಉಳಿಯಿತು.

*

ಸೆಂಟ ಪಿಟರ್ಸಬರ್ಗಿನಲ್ಲಿದ್ದಾಗ ಒಮ್ಮೆ ಒಂದು ಹುಚ್ಚುನಾಯಿ ನನ್ನನ್ನು ಅಟ್ಟಿಕೊಂಡು ಬಂತು. ಪಲಾಯನವೇ ಉಪಾಯ ಎಂದುಕೊಂಡು ಓಟಕ್ಕೆ ತಡೆಮಾಡುತ್ತಿದ್ದ ನನ್ನ ಕೋಟನ್ನು ನಾಯಿಯ ಕಡೆ ಕಳಚಿ ಒಗೆದು ಮನೆಯೊಳಗೆ ಧಾವಿಸಿದೆ. ಹಿಂದುಗಡೆ ನನ್ನ ಆಳನ್ನು ಕಳಿಸಿ ಆ ಕೋಟನ್ನು ತರಿಸಿ ಪೋಷಾಕಿನ ಕೋಣೆ ಯಲ್ಲಿರಿಸಿದೆನು. ಮರುದಿನ ಆಳು ಕೋಟು ತರಲು ಕೋಣೆಗೆ ಹೋಗಿ ನೋಡುತ್ತಾನೆ, ಅಲ್ಲಿದ್ದ ಬಟ್ಟೆಬರೆಯೆಲ್ಲ ಛಿದ್ರಛಿದ್ರವಾಗಿದ್ದವಲ್ಲದೆ ಕೋಟು ಜೀವಂತ ಪ್ರಾಣಿಯಂತೆ ಹುಚ್ಚೆದ್ದು ಆಳಿನ ಮೇಲೆ ಹಾರಿತು. ಅಷ್ಟರಲ್ಲಿ ನಾನು ಅಲ್ಲಿಗೆ ಬಂದೆ. ಸಂದರ್ಭವನ್ನು ನೋಡಿ ನಾನು ಅಲ್ಲೇ ಬಿದ್ದಿದ್ದ ಒಂದು ಪಕ್ಕಡವನ್ನು ಎತ್ತಿ ಕೊಂಡು ಕೋಟನ್ನು ಬಡಿದೆನು. ಕೋಟಿನಲ್ಲಿದ್ದ ಹುಚ್ಚುನಾಯಿ ನಿಶ್ಶೇಷ್ಟವಾಗಿ ಕೆಳಗೆ ಬಿತ್ತು!



# ವೆಂಕಟಾಧ್ವರಿ ಕಂಡ ದಕ್ಷಿಣ ಭಾರತ



ಲೇಖಕ: ಪಿ. ವೆಂಕಟರಮಣಾಚಾರ್ಯ



" ಊರಿಗೂರಿಗು ತೋಟ, ತೋಟ
ತೋಟಕೆ ಕಂಗು,
ಕಂಗುಕಂಗಿಗು ಅಲ್ಲಿ ಸಿಂಗಾರ ಹೂ,
ಹೂವು ಹೂವಿಗು ತೊಟ್ಟಿಕ್ಕುವ ಮಕರಂದ,
ಮಕರಂದ ಬಿಂದುಬಿಂದುಗೆ ಭ್ರಮರ,
ಭ್ರಮರದ ಭ್ರಮರದ ಗುಂಜರ ಗಾಯನ,
ಗಾನಗಾನಕೆ ನಲ್ಲೆಯರ ವಿಭ್ರಮ,
ವಿಭ್ರಮವಿಭ್ರಮದಿಂದಲುಕ್ಕುವ
ಕಾಮ,—
ಕಣ್ಣಿಗೆ ಹಬ್ಬವು ಕರ್ನಾಟಕ. "

ಕನ್ನಡ ನಾಡಸಿರಿಯ ಈ " ಸರಪಳಿವರ್ಣನೆ " ಯನ್ನು ಮಾಡಿದವನು ಯಾವ ಕನ್ನಡ ಕವಿಯೂ ಆಗಿರಲು ಸಾಧ್ಯವಿದೆ. ಕನ್ನಡ ನಾಡು ನುಡಿಗಳ ಮೇಲೆ ಅಪಾರ ಅಭಿಮಾನವುಳ್ಳ ಆಂಡಯ್ಯ ಇದನ್ನು ಮಾಡಿರಬಹುದೆ? ಪರನಾಡಿನ ರಾಜಾಸ್ಥಾನಗಳಲ್ಲಿ " ಕವಿ ಗಮಕಿ ವಾದಿ ವಾಗ್ಮಿ " ಎಂದು ಪೂಜಿತನಾದರೂ ತನ್ನ ಮಲೆನಾಡನ್ನು ಮರೆಯದೆ " ನೆನೆವುದೆನ್ನ ಮನಂ ಬನವಾಸಿ ದೇಶಮಂ " ಎಂದು ಅರ್ಜುನಮುಖೇನ ಹಂಬಲಿಸಿದ ಆದಿ ಕವಿ ಪಂಪ ಈ ತಾತ್ಪರ್ಯದ ಪದ್ಯವೊಂದನ್ನು ಹಾಡಿರಬಹುದೆ?

ಅಲ್ಲ—ಅದನ್ನು ಹಾಡಿದಾತನು ದೂರದ ಕಾಂಚೀಪುರದ ಅಗ್ರಹಾರವೊಂದರಲ್ಲಿ ವಾಸಿಸಿದ್ದ ವೆಂಕಟಾಧ್ವರಿ. ಅವನು ತಮಿಳ; ಬರೆದದ್ದು

ಸಂಸ್ಕೃತದಲ್ಲಿ.( ಮೇಲಿನ ಪದ್ಯ ಅದರ ಕನ್ನಡ ರೂಪಾಂತರ). ವರ್ಣನೆ ಬರುವುದು, ಅವನ '' ವಿಶ್ವಗುಣಾದರ್ಶ ಚಂಪೂ '' ಕಾವ್ಯದಲ್ಲಿ. ಯಾವ ಕನ್ನಡ ಕವಿಯೂ ಹೆಮ್ಮೆಯಿಂದ ವರ್ಣಿಸಬಹುದಾದಂತೆ ಬರೆದ ಈ ಮೂರು ಪದ್ಯಗಳು ಆ ಕವಿಯ ದೇಶವರ್ಣನೆಗಳಲ್ಲೆಲ್ಲ ಮಧುರವಾಗಿವೆ. "[ಈ ವರೆಗೆ] ಕಿವಿಗಿಂಪಾಗಿದ್ದ ಈ ನಾಡು [ ಈಗ ] ಕಣ್ಣಿಗೆಷ್ಟು ಸೊಂಪಾಗಿದೆ" ಎಂದು ವೆಂಕಟಾಧ್ವರಿ ನಿರ್ಮಾತ್ಸರ್ಯದಿಂದ ಹೊಗಳಿದ್ದಾನೆ.

"ವಿಶ್ವಗುಣಾದರ್ಶ ಚಂಪೂ" ಕಾವ್ಯವು ಸಂಸ್ಕೃತದ ವೈವಿಧ್ಯಮಯ ಕಾವ್ಯರಾಶಿಯಲ್ಲಿಯೂ ಅಪರೂಪ ಗ್ರಂಥವೆಂದು ಹೇಳಬೇಕು. ಅದಕ್ಕೆ ಪ್ರವಾಸಗ್ರಂಥವೆಂದು, ತೀರ್ಥಾಟನದ ವರದಿಯೆಂದು ತಲೆಪಟ್ಟಿ ಹಚ್ಚಲು ಸಾಧ್ಯವಿದೆ. ಆದರೆ ಅದು ಈ ವರ್ಗೀಕರಣವನ್ನು ಮೀರಿ ಹತ್ತಂಗುಲ ಹೊರಚಾಚಿದ ಕಾವ್ಯ. ಅದರಲ್ಲಿ ಖಂಡಿತವಾಗಿಯೂ ದೇಶವರ್ಣನೆಯಿದೆ, ತೀರ್ಥವರ್ಣನೆಯಿದೆ, ನಾನಾ ದೇವತೆಗಳ ಮತಾಚಾರ್ಯರ ವರ್ಣನೆಯಿದೆ, ಜಾತಿಗಳ, ವೃತ್ತಿಗಳ ವರ್ಣನೆಯಿದೆ.

ಆದರೆ ಇದೆಲ್ಲಕ್ಕಿಂತ ಮಿಗಿಲಾದ್ದೊಂದು ವೈಶಿಷ್ಟ್ಯ "ವಿಶ್ವಗುಣಾದರ್ಶ"ವನ್ನು ಪ್ರತ್ಯೇಕ ವರ್ಗದ್ದಾಗಿ ಮಾಡಿದೆ. ಅದು ವಾಸ್ತವಿಕವಾಗಿ ವಿಶ್ವ (ಎಲ್ಲ) ಗುಣಾದರ್ಶ-(ಗುಣಗಳಿಗೆ ಹಿಡಿದ ಕನ್ನಡಿ) ವೇ ಆಗಿದೆ. ಆ ಕನ್ನಡಿಯಲ್ಲಿ ವಿಷಯಗಳ ಮುಖದ ನಯನಾಜೂಕುಗಳಷ್ಟೇ ಅಲ್ಲ, ಅದರ ಕಲೆ ಕಸರುಗಳೂ ಪ್ರತಿಬಿಂಬಿತವಾಗಿವೆ. ಮತ್ತು ಕೆಲವೇಳೆ ವೆಂಕಟಾಧ್ವರಿಯ ತೀಕ್ಷ್ಣವಾಗ್ಬಾಣಗಳು ಅವನು ಬಣ್ಣಿಸಿದ ವಿಷಯಗಳಲ್ಲಿನ ಗುಣಗಳಿಗಿಂತಲೂ ದೋಷಗಳನ್ನೇ ದೊಡ್ಡದು ಮಾಡಿ ತೋರಿಸುತ್ತವೆ.

ಹೊಗಳಿಕೆ ತೆಗಳಿಕೆಗಳನ್ನು ಬೆರಸುವ ಈ ಇಮ್ಮಡಿ — ಮತ್ತು ವಿರೋಧಾಭಾಸಿಕ — ಉದ್ದೇಶವನ್ನು ಸಾಧಿಸಲು ಅವನು ಒಂದು ಸುಲಭ ಹಂಚಿಕೆ ತೆಗದಿದ್ದಾನೆ. ವಿಶ್ವಾವಸು ಮತ್ತು ಕೃಶಾನು ಎಂಬಿಬರು ಗಂಧರ್ವರು ಒಮ್ಮೆ ವಿಮಾನದಲ್ಲಿ ಕುಳಿತು ದೇಶ ನೋಡಲು ಹೊರಡುತ್ತಾರೆಂದು ಅವನು ಕಲ್ಪಿಸಿಕೊಂಡಿದ್ದಾನೆ. ದಾರಿಯಲ್ಲಿ ಎದುರಿಗೆ ಕಂಡ ವಿಷಯಗಳನ್ನು ವಿಶ್ವಾವಸು ಪ್ರಶಂಸಿಸುತ್ತಾನೆ. ಆದರೆ ಅವನ ಮಿತ್ರ ಕೃಶಾನು ಈ ಭೋಳೇ ಪ್ರಶಂಸೆಯನ್ನು ಮೆಚ್ಚುವವನಲ್ಲ. ಅವನು ಆ ಪದಾರ್ಥಗಳಲ್ಲಿರುವ ದೋಷಗಳನ್ನು ಕೆದರಿ ಕ್ರೂರವಾಗಿ ದೂಷಿಸುತ್ತಾನೆ. ವಿಶ್ವಾವಸು ಅದಕ್ಕೆ ಮತ್ತೆ ಸಮಾಧಾನ ಹೇಳುತ್ತಾನೆ. ಇಡೀ ಕಾವ್ಯವೇ ಇಂಥ ಸಂವಾದಗಳಿಂದ ತುಂಬಿದೆ.

ವೆಂಕಟಾಧ್ವರಿಯ ಕಾವ್ಯ ಸುಮಾರು ಕ್ರಿಸ್ತಶಕ ೧೬೪೦ ರಲ್ಲಿ, ವಿಜಯನಗರದ ಪತನವಾದ ನಂತರ ದಕ್ಷಿಣದಲ್ಲಿ ಮೆರೆದ ಮುಸ್ಲಿಮ ಹಾಗು ಮರಾಠರ ಕಾಲದಲ್ಲಿ ಬರೆದದ್ದು. ಇಂಗ್ಲೀಷರು ಆಗಲೇ ಇಲ್ಲಿ ಕಾಲೂರಿದ್ದರು. ಎಲ್ಲೆಲ್ಲಿಯೂ ವೈದಿಕ ಕರ್ಮಾನುಷ್ಠಾನಗಳು ಜೀರ್ಣವಾಗಿದ್ದ ಸಮಯವದು. ಕಡು ಕರ್ಮಠನಾದ ವೆಂಕಟಾಧ್ವರಿ ಇದರಿಂದ ತುಂಬ ಕೆರಳಿದ್ದನು. ಅವನು ಕೃಶಾನುವಿನ ಬಾಯಲ್ಲಿ ಹಾಕಿದ ಮಾತುಗಳು ಖಂಡಿತವಾಗಿಯೂ ಕವಿಯ ಮನಸ್ಸಿನ ಕ್ಲೇಶವನ್ನು ತೋರಿಸುತ್ತವೆ.

ಶ್ರೀವೈಷ್ಣವ ಮತದಲ್ಲಿ ಹೆಚ್ಚು ಕರ್ಮಠಪಂಥವಾದ "ವಡಗಲೆ" (ಉತ್ತರಾದಿ) ಯ ಅನುಯಾಯಿಯಾದ ವೆಂಕಟಾಧ್ವರಿಗೆ (ಅರ್ಥಾತ್ ಅವನು ಕಲ್ಪಿಸಿದ ಗಂಧರ್ವ ಕೃಶಾನುವಿಗೆ) ವೈಷ್ಣವವಲ್ಲದ್ದು, ಅದರಲ್ಲಿಯೂ ಕರ್ಮಠವಲ್ಲದ್ದು ಎಳ್ಳಷ್ಟೂ ಸೇರುವುದಿಲ್ಲ. ಅಭಿಪ್ರಾಯಗಳ ವಿಷಯದಲ್ಲಿ ಅವನ ಅನೌದಾರ್ಯವೂ ಛಿದ್ರಾನ್ವೇಷಣೆಯಲ್ಲಿ ಅವನ ಗೃಧ್ರದೃಷ್ಟಿಯೂ ಖಂಡನೆಯಲ್ಲಿ ಅವನ ನಿರ್ದಾಕ್ಷಿಣ್ಯವೂ ಇಂಗ್ಲಿಷ್ ವಿದ್ವತ್‌ಕವಿ ಡಾ. ಜಾನ್‌ಸನ್ನನಿಗಿಂತ ಗುಂಜಿ ತೂಕ ಕಡಿಮೆಯವಲ್ಲ. ಅವನು ಅತ್ಯಂತ ಪ್ರತಿಗಾಮಿಯೇ ಸೈ; ಆದರೆ ಮೋಜಿನ ಪ್ರತಿಗಾಮಿ.

ಒಟ್ಟು ೫೦ ವಿಷಯಗಳು "ವಿಶ್ವಗುಣಾದರ್ಶ"ದ ಸ್ತುತಿ ನಿಂದೆಗಳಿಗೆ ಪಾತ್ರವಾಗಿವೆ. ಅವನ ಮೊದಲನೇ ಆರೋಪಿ ಸೂರ್ಯದೇವನೇ.

"ಛಾಂದಸಜ್ಯೋತಿ"— ಅಂದರೆ ವೇದಪ್ರತಿಪಾದ್ಯ ಬ್ರಹ್ಮರೂಪಿ ತೇಜಸ್ಸೆಂದು ವಿಶ್ವಾವಸುವು ಸೂರ್ಯನನ್ನು ಸ್ತುತಿಸಿದ್ದೇ ತಡ, "ಯಾಕೋ? ಲೋಕವನ್ನೆಲ್ಲ ಶೋಷಿಸುವ ಈ ಕ್ರೂರನನ್ನು ಏನು ದೊಡ್ಡ ದೇವರೆಂದು ಹೊಗಳುತ್ತಿ?" ಎಂದು ಕೃಶಾನು ತೆಗಳುತ್ತಾನೆ. (ಈ ಸೂರ್ಯನಿಂದೆಯ ಪಾಪದಿಂದ ಕವಿಗೆ ಕುಷ್ಠರೋಗ ಉಂಟಾಯಿತೆಂದೂ ಅದನ್ನು ಅವನು ಸೂರ್ಯಾರಾಧನೆಯಿಂದ ಪರಿಹರಿಸಿಕೊಳ್ಳಬೇಕಾಯಿತೆಂದೂ ದಂತಕಥೆಯಿದೆ.)

ಗಂಧರ್ವದ್ವಯವು ಸಂಚಾರದಲ್ಲಿ ಕಂಡ ದೇಶಗಳಲ್ಲಿ ಕರ್ನಾಟಕವೂ ಒಂದು. ಈ ಲೇಖದ ಪ್ರಾರಂಭದಲ್ಲಿ ಕೊಟ್ಟ ವರ್ಣನೆ ಕರ್ನಾಟಕಕ್ಕೆ ಬಂದೊಡನೆ ವಿಶ್ವಾವಸುವಿನ ಮುಖದಿಂದ ಬಂದದ್ದು. ಮೂರು ಶತಮಾನಗಳ ಹಿಂದೆ ಕನ್ನಡ ನಾಡಿಗೆ ಬಂದ ಯಾತ್ರಿಕನಿಗೆ ಮೊದಲು ಕಣ್ಣು ಸೆಳೆಯುತ್ತಿದ್ದದ್ದು ಮಲೆನಾಡು—ಪಂಪನ ಬನವಾಸಿ ದೇಶ ಎಂದು ಲಕ್ಷಿಸಬೇಕು.

ಆದರೆ ಕರ್ನಾಟಕದಲ್ಲಿ ಹುಳುಕು ತೆಗೆಯಲು ಕೃಶಾನುವಿಗೇನೂ ಕಷ್ಟವಾಗುವುದಿಲ್ಲ. ವೀರ ವೈಷ್ಣವಪಂಥಿಯಾದ ಅವನ ಕೊಡಲಿಗೆ ಕರ್ನಾಟಕದ ವೀರಶೈವರು ಸಹಜವಾಗಿ ಮೊದಲನೇ ಆಹುತಿಯಾಗುತ್ತಾರೆ. ಎರಡು ಶ್ಲೋಕಗಳಲ್ಲಿ ಅವನು "ವೇದವೈದಿಕವಿದ್ವೇಷದೂಷಿತರು", "ಭಸ್ಮರೂಷಿತರು" "ಪಾಖಂಡರು", "ಚಂದ್ರಕಿರಣಾಮೃತದಿಂದ ಅಭಿಷಿಕ್ತನಾದ ಶಿವನಿಗೆ ತಮ್ಮ ಕಾಲು ತೊಳೆದ ನೀರನ್ನು ಅಭಿಷೇಕ ಮಾಡುವವರು" ಮೊದಲಾದ ಚುನಾಯಿಸಿದ ಬೈಗಳನ್ನು ಲಿಂಗವಂತರ ಮೇಲೆ ಹೊರಿಸಿ ಇಂಥವರಿರುವ ಈ ನಾಡು ನಿಂದ್ಯವಾಗಿದೆಯೆಂದು ಹೀಗಳೆಯುತ್ತಾನೆ.

ಇದಕ್ಕೆ ವಿಶ್ವಾವಸುವಿನ ಉತ್ತರ: "ಇಲ್ಲಿ ವೈಷ್ಣವರೂ ಇದ್ದಾರೆ, ವಿಷ್ಣು ಕ್ಷೇತ್ರಗಳೂ ಇವೆ" —ಎಂದು. ಅವನು ಯದುಗಿರಿ ಮತ್ತು ರಜತಪೀಠಪುರ(ಉಡುಪಿ)ಗಳನ್ನು ಉಲ್ಲೇಖಿಸಿ ಅವುಗಳನ್ನು ಹೊಗಳುತ್ತಾನೆ. "ಸದ್ಬ್ರಾಹ್ಮಣಪೂಜಿತರಾದಂಥ ಆನಂದತೀರ್ಥ ಮುನಿಗಳು (ಮಧ್ವಾಚಾರ್ಯರು) ಈ ನಾಡಿನಲ್ಲೇ ಅವತರಿಸಿ ತಮ್ಮ ಹೆಸರನ್ನು ಅನ್ವರ್ಥಗೊಳಿಸಿದರು," ಎಂದೂ ಅವನು ಸ್ಮರಿಸುತ್ತಾನೆ. (ಮಧ್ವಾಚಾರ್ಯರು ಶ್ರೀವೈಷ್ಣವರಿರಲಿಕ್ಕಿಲ್ಲ—ಆದರೆ ವೈಷ್ಣವರು ತಾನೆ! ವೈಷ್ಣವರೇ ಇಲ್ಲದಿರುವುದಕ್ಕಿಂತ ಮಾಧ್ವವೈಷ್ಣವರಾದರೂ ಲೇಸಲ್ಲವೆ!) ವೆಂಕಟಾಧ್ವರಿಯ ಕಾಲದಲ್ಲಿ ಕೂಡ ತುಳು ನಾಡು ಕರ್ನಾಟಕದ ಭಾಗವೇ ಎಂದು ಪ್ರಸಿದ್ಧವಾಗಿತ್ತಲ್ಲದೆ ಮಲೆಯಾಳಿಗಳು ಹೇಳುವಂತೆ ಕೇರಳದ್ದಾಗಿರಲಿಲ್ಲ.

ಈ ಸಮರ್ಥನೆ ಕರ್ನಾಟಕವನ್ನು ಪಾರು ಮಾಡಲು ಸಮರ್ಥವಾಗಲಿಲ್ಲ; ಪ್ರತಿಯಾಗಿ ಕೃಶಾನುವಿನ ಫಿರಂಗಿ ಬಡ ಮಾಧ್ವರ ಮತ್ತು ಪರ್ಯಾಯವಾಗಿ ಕರ್ನಾಟಕದ ಎಲ್ಲ ಬ್ರಾಹ್ಮಣರ ಕಡೆಗೆ ಹೊರಳಿತು. ಅವನು ಆ ಕಾಲದ ಬ್ರಾಹ್ಮಣರ ಆಚಾರಭ್ರಷ್ಟತೆಯ ಹೊಟ್ಟನ್ನೆಲ್ಲ ಹಾರಿಸಿಬಿಡುತ್ತಾನೆ:

"ಇವರು ಶಾಸ್ತ್ರಜ್ಞರಾಗಿದ್ದರೂ ಪ್ರಾತಃಕಾಲ ಮಾಡಬೇಕಾಗಿದ್ದ ಸಂಧ್ಯಾವಂದನೆಯನ್ನು ಹೊತ್ತೇರಿದ ಮೇಲೆ ಆಚರಿಸುತ್ತಾರೆ.... ಅನ್ಯಮತದವರು ಗುಣವಂತರಿದ್ದರೂ ಅವರನ್ನು ಎಂದೂ ಮನ್ನಿಸದ ಶುಂಠರು..... ಇವರ ಸ್ವಾಮಿಗಳು ಶಿಖಾ, ಯಜ್ಞೋಪವೀತ, ಗಾಯತ್ರಿಗಳನ್ನು ತ್ಯಜಿಸಿ ಸಂನ್ಯಾಸಿಗಳಾಗಿ ವಿರಕ್ತವೇಷ ಹಾಕಿದರೂ ಶಾಸ್ತ್ರವಿರುದ್ಧವಾಗಿ ಮೇನೆಯಲ್ಲಿ ಕುಳಿತು (ಸಂನ್ಯಾಸಿ ವಾಹನವನ್ನೇರಿದರೆ ಅವನನ್ನು ಕಂಡವರು ಸಚೇಲಸ್ನಾನ ಮಾಡಬೇಕೆಂದು ಶಾಸ್ತ್ರವಿದೆ) ದೇಶದೇಶಗಳಲ್ಲಿ ತಿರುಗಿ ಹಣ ಕೂಡಿಸುವ ದಾಂಭಿಕರು.... ಗೃಹಸ್ಥರು ಬರಿಗಾಲಲ್ಲಿ ಚರಿಸಿ ಮುರುಕು ಮನೆಯಲ್ಲಿ ವಾಸಿಸುತ್ತಿರುವಾಗ ಇಲ್ಲಿ ಸಂನ್ಯಾಸಿಗಳು ಕಲ್ಲಿನಿಂದ ಕಟ್ಟಿದ ಮಠಗಳಲ್ಲಿ ಸುಖಜೀವನ ನಡೆಸುತ್ತಾರೆ..... ವೇದಗಳನ್ನು ಅಲಕ್ಷಿಸಿ ಶಾಸ್ತ್ರವನ್ನೋದುತ್ತಾರೆ..." ಕೃಶಾನುವಿನ ಆರೋಪಗಳ ಯಾದಿ ಇನ್ನೂ ಉದ್ದವಿದೆ. ಮೇಲಿನವು ಮಾದರಿಗಳು ಮಾತ್ರ. ಸ್ಮಾರ್ತರು ತಾವು ಬದ

ಕಿದೆವೆಂದು ಸಮಾಧಾನಪಡಬೇಕಾಗಿಲ್ಲ. ಇತರ ಮತೀಯ ಬ್ರಾಹ್ಮಣರೂ ಹೀಗೇ ಇದ್ದಾರೆಂದು ಅವನು "ಮರೆತಮಾತು" ಸೇರಿಸಲು ಮರೆತಿಲ್ಲ.

ವಿಶ್ವಾವಸುವು ಕನ್ನಡ ಕುಲವನ್ನು ಸಮರ್ಥಿಸದೆ ಬಿಡುವುದಿಲ್ಲ. ಆದರೆ ಅವನ ವಕಾಲತ್ತು ತುಸು ದುರ್ಬಲವಾಗಿಯೇ ಕಾಣುತ್ತದೆ: "ಆಚಾರದಲ್ಲಿ ಅಷ್ಟಿಷ್ಟು ತಪ್ಪಿದರೇನು? ಇವರು ಹರಿಭಕ್ತರು. ಏಕಾದಶಿ ಉಪವಾಸವನ್ನು ಮಕ್ಕಳು ಮರಿ ಸಹಿತ ಆಚರಿಸುವರು; ಭಾಗವತ ಜನರಲ್ಲಿ ಆದರ, ಧರ್ಮದಲ್ಲಿ ದೃಢಶ್ರದ್ಧೆ ಇವರಲ್ಲಿ ತುಂಬಿದೆ. ಅಲ್ಲದೆ ಸಕಾಲದಲ್ಲಿ ಸಂಧ್ಯಾವಂದನೆ ಮಾಡುವವರೂ ಇಲ್ಲದೆ ಇಲ್ಲ!"

ಕೊನೆಗೆ ಕೃಶಾನು ಕನ್ನಡಿಗರ ಮೇಲೆ ಕೊಡುವ ತೀರ್ಪು ಇದು: ಇವರು ಸಂಸ್ಕಾರಹೀನರಾದ ದಡ್ಡ ಜನ; ಇವರಿಗೆ ಹಿಟ್ಟು-ಬೂದಿ ಒಂದೇ—ಎಂದು. "ಬೆಳದಿಂಗಳು-ಕತ್ತಲೆಗಳಲ್ಲಿ, ಕೇಸರದ ಗಿಡ-ವಿಷವೃಕ್ಷಗಳಲ್ಲಿ, ನಾಗರ-ಇತ್ತಲೆ ಹಾವುಗಳಲ್ಲಿ, ತಾವರೆ-ಉಮ್ಮತ್ತ ಹೂವುಗಳಲ್ಲಿ ಕಾಗೆ-ಕೋಗಿಲೆಗಳಲ್ಲಿ, ಹಾಲುಗಡಲು-ಹಾಳುಭಾವಿಗಳಲ್ಲಿ, ಪಂಡಿತ-ಮೂರ್ಖರಲ್ಲಿ ಭೇದವರಿಯದ ಮೂಢರ ನಾಡು ಇದು."

ಅನ್ಯಾಯ — ಆದರೆ ಕನ್ನಡಿಗರು, —ಲಿಂಗಾಯತರು ಕೂಡ — ವಿಶ್ವಗುಣಾದರ್ಶಕಾರನ ಮೇಲೆ ಅತಿ ಸಿಟ್ಟಾಗಬೇಕಿಲ್ಲ. ಅವನು ತನ್ನ ಸ್ವಂತ ಪಂಥವಾದ ಶ್ರೀವೈಷ್ಣವದಲ್ಲಿ ಕೂಡ ಅಸಮಾಧಾನಕರ ಸಂಗತಿಗಳನ್ನು ಕಂಡಿದ್ದಾನೆ. ರಾಮಾನುಜ ಪಂಥದ "ತೆಂಗಲೆ" (ದಾಕ್ಷಿಣಾತ್ಯ) ಪಂಗಡದವರನ್ನು ಅವನು ದೂಷಿಸುವುದನ್ನು ನೋಡಿರಿ: "ಇವರು ಬ್ರಹ್ಮಹತ್ಯಾದಿ ಪಾತಕ ಮಾಡುವ ಕಳ್ಳರಿಗೆ, ಜಾರ ಚೋರ ಕಿರಾತರಿಗೆ, ಪ್ರಜಾಪೀಡಕ ರಾಜರಿಗೆ ಮುದ್ರೆಯೊತ್ತಿ ಮಂತ್ರೋಪದೇಶ ಕೊಟ್ಟು ಶಿಷ್ಯರಾಗಿ ಮಾಡಿಕೊಳ್ಳುತ್ತಾರೆ, ಅವರೊಡನೆ ಊಟಕೂಟಗಳಲ್ಲಿ ಬೆರೆಯುತ್ತಾರೆ. . . . . ವೇದಶಾಸ್ತ್ರಾದಿಗಳ ಗಂಧವಿಲ್ಲದ ಮೂಢರನ್ನು ಕೇವಲ ತಮ್ಮ ಪೂರ್ವಗುರುಗಳ ವಂಶೋದ್ಭವರೆಂಬೊಂದೇ ಕಾರಣದಿಂದ ಗುರುವೆಂದು ಪೂಜಿಸುತ್ತಾರೆ. . . . ಇವರ ಆಚಾರ್ಯರು ಆಚಾರಹೀನರೂ ಧನಪಿಶಾಚಿಗಳೂ ಕಾಮುಕರೂ ಆಗಿರುತ್ತಾರೆ. . . ." ಇತ್ಯಾದಿ.

ಸಾರಾಂಶವಿಷ್ಟೇ: ವೆಂಕಟಾಧ್ವರಿ ವರ್ಣಾಶ್ರಮ ಪದ್ಧತಿಯ ಕಡುಭಕ್ತ. ಅವನಿಗೆ ಆಚಾರವೇ ಮುಖ್ಯ, ಭಕ್ತಿ ಗೌಣ.

ವೆಂಕಟಾಧ್ವರಿ ಕಂಡ ಮಹಾರಾಷ್ಟ್ರ, ಪೇಶವಾಯಿ ದೌಲತ್ತಿಗಿಂತ ಹಿಂದೆ, ಉದಯೋನ್ಮುಖವಾಗಿ ಮುಸ್ಲಿಮ ರಾಜ್ಯದಲ್ಲಿ ಪ್ರತಿಷ್ಠೆ ಗಳಿಸಿದ, ಮಹಾರಾಷ್ಟ್ರ. ಬ್ರಾಹ್ಮಣರು ರಾಜ್ಯಾದಿ ಲೌಕಿಕದಲ್ಲಿ ಮುಳುಗೇಳುತ್ತ ವೈದಿಕ ಕರ್ಮಗಳಲ್ಲಿ ಅನಾಸ್ಥೆ ತಳೆದಿದ್ದ ಆ ಕಾಲದ ಮಹಾರಾಷ್ಟ್ರದ ಮೇಲೆ ಅವನ ದೂರುಗಳ ಯಾದಿ ಸುದೀರ್ಘವಾಗಿದೆ. ಇಲ್ಲಿವೆ ಕೆಲ ಮುಕ್ತಾಫಲಗಳು:

ವ್ಯಾಪಾರ ವ್ಯವಹಾರದಲ್ಲಿ ಬಿದ್ದ ಇವರಿಗೆ ಆಚಾರದ ಧ್ಯಾಸವಿಲ್ಲ; ಊಟದ ಹೊತ್ತಾಗುವವರೆಗೂ ಸ್ನಾನ ಮಾಡುವುದಿಲ್ಲ; ಸಕಾಲದಲ್ಲಿ ಸಂಧ್ಯಾವಂದನೆ ನಾಸ್ತಿ. . . . ಬ್ರಾಹ್ಮಣ ವೃತ್ತಿ ಬಿಟ್ಟು ಕುಲಕರ್ಣಿಕೆ ಮಾಡುತ್ತಾರೆ; ಹೊಟ್ಟೆಪಾಡಿಗಾಗಿ ತುರುಕ ರಾಜರ ಸೇವೆಗೆ ತನುವನ್ನು ಮಾರುತ್ತಾರೆ. (ಬಹುಶಃ ಆದಿಲಶಾಹಿ ಮಹಾರಾಷ್ಟ್ರದ ಪರಿಸ್ಥಿತಿಯ ವರ್ಣನೆಯಿದು). . ಲೆಕ್ಕದಲ್ಲಿ ನಿಪುಣರಾದ ಇವರು ತಗಲು ಮಾಡಿ ಸ್ವಾಮಿದ್ರೋಹಿಗಳಾಗುತ್ತಾರೆ.

ಮಹಾರಾಷ್ಟ್ರೀಯರ ಬ್ರಾಹ್ಮಣ್ಯ ಕವಿಗೆ 'ಅನುಪಮ'ವಾಗಿ ಕಾಣುತ್ತದೆ. "ಹಗಲೆಲ್ಲ ಲೌಕಿಕದ ಮಾತಾಡುವ ಇವರಿಗೆ ಮಂತ್ರೋಚ್ಚಾರ ಕಾಲಕ್ಕೆ ಮೌನವ್ರತ . . . ಮುಂಜವೆ ಮದುವೆಗಳಲ್ಲಿ ಸಂಸ್ಕಾರಕ್ಕೆ ಬದಲು ಆಡಂಬರಕ್ಕೆ ಪ್ರಾಧಾನ್ಯ. . . . ವೇದ ಕಲಿಯಬೇಕಾದ ವಯಸ್ಸಿನಲ್ಲಿ ಮ್ಲೇಚ್ಛ ಭಾಷೆ ಕಲಿಯುತ್ತಾರೆ."

ಮರಾಠಿಗರ ಪಾಂಡಿತ್ಯದ ಮೇಲಂತೂ ಅವನಿಗೆ ತೀರ ನಿಕೃಷ್ಟ ಅಭಿಪ್ರಾಯವಿದೆ:

"ವೇದವ್ಯಾಸಂ ಸ ಇಹ ದಶಯೋ
ವೇದ ವೇದಾಕ್ಷರಾಣಿ

ಶ್ಲೋಕಂ ತ್ವೇಕಂ ಪರಿಪಠತಿ ಯಃ
ಸ ಸ್ವಯಂ ಜೀವ ಏವ।
ಆಪಸ್ತಂಬಃ ಸ ಕಿಲ ಕಲಯೇತ್
ಸಮ್ಯಗೌಪಾಸನಂ ಯಃ . . .''

(ವೇದದ ಹತ್ತು ಅಕ್ಷರ ಬಂದವನೇ ಇಲ್ಲಿ ವೇದವ್ಯಾಸ; ಒಂದು ಶ್ಲೋಕ ಬಲ್ಲವನಂತೂ ಸಾಕ್ಷಾತ್ ಬೃಹಸ್ಪತಿಯೇ; ಸರಿಯಾಗಿ ಔಪಾಸನ ಮಾಡಲು ಬಂದರೆ ಅವನು ಆಪಸ್ತಂಬ ಮುನಿಯೆನಿಸುತ್ತಾನೆ. . . .) ವೈದಿಕ ವಿದ್ಯೆಯ ಅವಸ್ಥೆ ಮ್ಲೇಚ್ಛರ ಅಧೀನದಲ್ಲಿ ಎಲ್ಲಿಗೆ ಬಂದಿತ್ತೆಂಬುದರ ದ್ಯೋತಕವಿದು.

ಮಹಾರಾಷ್ಟ್ರದಲ್ಲಿ ಕವಿಯ ಕಾಲದಲ್ಲಿಯೇ "ಬುವಾಬಾಜಿ" ಸಾಕಷ್ಟು ಪ್ರಚುರವಾಗಿರಬೇಕು. ಅವನನ್ನುತ್ತಾನೆ—"ಯಾವ ಯಾವ ಜಾತಿಯವರೋ ಸೇರಿಕೊಂಡು ವರ್ಣಾಶ್ರಮ ಧರ್ಮಕ್ಕೆ ತಿಲಾಂಜಲಿಯಿತ್ತು ವಿರಕ್ತಿಯ ಸೋಗು ಹಾಕಿ ಜನರನ್ನು ಮೋಸಗೊಳಿಸುತ್ತ ಅಲೆದು ಬಿಕ್ಕೆ ಬೇಡಿ ಹೊಟ್ಟೆತುಂಬಿಕೊಳ್ಳುತ್ತಾರೆ."

ಮಹಾರಾಷ್ಟ್ರ ಸೈನ್ಯಗಳ ಹೆಸರನ್ನು ಕೆಡಿಸಿದ ಸುಲಿಗೆ ನೀತಿ ಈ ಕವಿಯ ಗಮನಕ್ಕೂ ಬಂದಿದೆ. ದೇಶದೇಶಗಳಲ್ಲಿ ಅಲೆದು ಬ್ರಾಹ್ಮಣಾದಿ ಸಕಲ ಜಾತಿಯವರನ್ನೂ ಪೀಡಿಸಿ ಸರ್ವಸ್ವವನ್ನೂ ಇವರು ಸುಲಿಗೆ ಮಾಡುತ್ತಾರೆಂದು ಅವನು ಹೇಳಿದ್ದಾನೆ.

ಆದರೆ ಮಹಾರಾಷ್ಟ್ರೀಯರ ಸಕಲಾಪರಾಧಗಳನ್ನು ಕ್ಷಮಿಸುವ ಮಾತುಗಳನ್ನೂ ಕವಿ ಆಡಿದ್ದಾನೆ. ಅಂಗ-ವಂಗ-ಕಲಿಂಗ-ಕರ್ನಾಟಾದಿ ಸಕಲ ಪ್ರಾಂತಗಳಲ್ಲಿ ಮಹಾರಾಷ್ಟ್ರದ ವೀರರ ಪರ್ಯಟನದ ಶೌರ್ಯಸಾಹಸ ಅವನ ಮೆಚ್ಚಿಗೆ ಪಡೆದಿದೆ. ಅದಕ್ಕೂ ಹೆಚ್ಚಾಗಿ ಸ್ವತಃ ಬ್ರಹ್ಮಕರ್ಮಚ್ಯುತರಾದರೂ ಇವರು ಬ್ರಾಹ್ಮಣ್ಯವನ್ನು ರಕ್ಷಿಸಿದ್ದಾರೆ. "ಸೈನ್ಯಾಧಿಪತ್ಯದಿಂದ ಹಿಡಿದು ಗ್ರಾಮಾಧಿಕಾರಿತ್ವದ ವರೆಗೆ ನಾನಾ ಅಧಿಕಾರಸ್ಥಾನಗಳಲ್ಲಿ ಸೇರಿಕೊಂಡು ಮಹಾರಾಷ್ಟ್ರದ ಬ್ರಾಹ್ಮಣರು ಒಂದುಗಳನ್ನು ರಕ್ಷಿಸಿರದಿದ್ದರೆ 'ಭವೇದ್ಯವನವೇಷ್ಟಿತಂ ಭುವನಮೇತದಬ್ರಾಹ್ಮಣಂ' ತುರುಕರಿಂದ ಸುತ್ತುವರಿಯಲ್ಪಟ್ಟ ಈ ದೇಶವೆಲ್ಲ ಎಂದೋ ಅಬ್ರಾಹ್ಮಣವಾಗಿ ಬಿಡುತ್ತಿತ್ತು." ಇದೊಂದೇ ಪುಣ್ಯಕೃತಿಯಿಂದ ಅವರು ತಮ್ಮ ಸಕಲ ಪಾಪಗಳನ್ನು ತೊಳೆದುಕೊಂಡಿದ್ದಾರೆಂದು ವೆಂಕಟಾಧ್ವರಿ ಕೃತಜ್ಞತೆಯಿಂದ ಒಪ್ಪಿದ್ದಾನೆ.

ಹಿಂದೂ ಧರ್ಮಕ್ಕೆ ಮುಸ್ಲಿಮರಿಂದ ಬಂದ ವಿಪತ್ತಿನ ತೀವ್ರ ಪ್ರಜ್ಞೆ ಅವನಿಗಿತ್ತೆಂದು ಅವನ ಕಾಶೀದೇಶ ವರ್ಣನೆಯಲ್ಲಿಯೂ ಕಾಣಿಸುತ್ತದೆ. ತುರುಕ ರಾಜರ ಸೇವೆ ಒಳ್ಳೆವೆಂದು ಸೈನ್ಯಾದಿಗಳಲ್ಲಿ ಸೇರದೆ ಈ ಕಾಶೀದೇಶದ ಕಾಯಸ್ಥರೂ ಕ್ಷತ್ರಿಯರೂ ಬ್ರಾಹ್ಮಣರೂ ಮನೆ ಹಿಡಿದು ಕುಳಿತಿದ್ದರೆ ವೈದಿಕ ಧರ್ಮ ಎಂದೋ ಮುಸ್ಲಿಮರ ಕಾಲದಲ್ಲಿ ಹಾಳುಬಿದ್ದು ಹೋಗುತ್ತಿತ್ತೆಂದು ಅವನು ವಿಶ್ವಾವಸುವಿನ ಬಾಯಲ್ಲಿ ಹೇಳಿಸಿದ್ದಾನೆ.

ವೆಂಕಟಾಧ್ವರಿಗೆ ಪ್ರಿಯವಾದ ವೈದಿಕಾಚಾರ ನಿಷ್ಠೆ ಅವನಿಗೆ ಆಂಧ್ರದಲ್ಲಿಯೂ ನೋಡಸಿಗಲಿಲ್ಲ; ಹಳ್ಳಿಹಳ್ಳಿಯಲ್ಲಿಯೂ ಬ್ರಾಹ್ಮಣರು ಶೂದ್ರ ಪ್ರಭುಗಳ ಸಂಬಳದ ಕಾರಕೂನರಾಗಿದ್ದಾರೆ; ವೇದಾಧ್ಯಯನ ಮಾಡಿದ ಬ್ರಾಹ್ಮಣರು, ಮರುಭೂಮಿಯಲ್ಲಿ ತೊರೆಯಂತೆ, ಎಲ್ಲಾದರೂ ಇದ್ದರೂ ಅವರು ಮಂದಿಯ ಮನೆಯ ಮುಸುರೆ ತಿಕ್ಕಿ ಜೀವನ ಮಾಡಬೇಕಾಗುತ್ತದೆಂದು ಅವನು ಗೋಳಾಡಿದ್ದಾನೆ.

ವಿಜಯನಗರದ ಪತನದ ನಂತರ ಆಂಧ್ರದಲ್ಲಿ ಮೊದಲನೇ ಬಾರಿ ಮುಸ್ಲಿಮರ ಪ್ರಾಬಲ್ಯ ಹೆಚ್ಚಿದ್ದನ್ನು ಅವನು ಹೀಗೆ ಉಲ್ಲೇಖಿಸಿದ್ದಾನೆ: "ಗಾಳಿಗಿಂತ ಚುರುಕಾದ ಕುದುರೆಗಳನ್ನೇರಿ ಗುಡಿ ಗುಂಡಾರಗಳನ್ನು ಧ್ವಂಸ ಮಾಡುತ್ತ ವೇದೋಕ್ತ ಕರ್ಮಗಳನ್ನು ನಾಶ ಮಾಡುವ ಪಣತೊಟ್ಟ ಭುವನಭಯಂಕರ ಯವನರು ಇಲ್ಲಿ ಎಲ್ಲೆಲ್ಲಿಯೂ ಮೆರೆಯತೊಡಗಿದ್ದಾರೆ."

ಆಂಧ್ರದಲ್ಲಿ ಕವಿಗೆ ಮೆಚ್ಚಿಕೆಯಾದ ಸಂಗತಿಗಳೆಂದರೆ ಅಲ್ಲಿಯ ಪ್ರಮದೆಯರ ಸೌಂದರ್ಯ ಮತ್ತು ಅವರನ್ನು ಉಪಭೋಗಿಸುವ ಭೋಗಿಗಳ ವೈಭವ ಹಾಗು ಅಲ್ಲಿನ ಕೊಡುಗೈ ದೊರೆಗಳ ಔದಾರ್ಯ.

ಗುಜರಾಥದ ಸಂಪತ್ತು ಆಗಲೇ ಎಲ್ಲರ ಗಮನವನ್ನೂ ಸೆಳೆದಿತ್ತು. ಕವಿ ಅದರೊಡನೆ ಅಲ್ಲಿಯ ರಮಣಿಯರ ''ಬಂಗಾರದ ಮೈ ಬಣ್ಣ, ತಾಮ್ರ ಸದೃಶವಾದ ಮೆದು ತುಟಿ, ಹವಳ ಬಣ್ಣದ ಅಂಗೈ, ಅಮೃತದಂಥ ಮಾತು, ತಾವರೆಮುಖ'' ಗಳನ್ನು ಮೆಚ್ಚಿಕೊಂಡು ''ಮನಸ್ಸನ್ನು ಮರುಳುಗೊಳಿಸದಿರುವಂಥ ಅವಯವವಾವುದಾದರೂ ಗುರ್ಜರ ನಾರಿಯಲ್ಲಿದೆಯೆ?" ಎಂದು ಕೇಳಿದ್ದಾನೆ. ನಿಜ—ಇಂದಿಗೂ ಕೂಡ!

ಆದರೆ ಏನು ಫಲ? ಗುಜರಾಥಿ ಪುರುಷರು ಆಂಧ್ರರಂತೆ ಬುದ್ಧಿವಂತರಲ್ಲ. ಮಿಂಚಿನ ಹೊಳಕಿನಂಥ ಆ ನಾರಿಯರನ್ನು ಏರುಜವ್ವನದಲ್ಲಿ ಒಲ್ಲೈಸುವುದನ್ನು ಬಿಟ್ಟು ಹಣದ ಹಪಾಟಿಯಿಂದ ಮೂಢ ಗುಜರಾಥಿ ತರುಣರು ಮಣಿ-ರತ್ನಾದಿಗಳನ್ನು ಕಟ್ಟಿಕೊಂಡು ದೇಶಾಂತರ ಅಲೆಯುತ್ತ ತಾರುಣ್ಯವನ್ನು ನಿರರ್ಥಕಗೊಳಿಸಿಕೊಳ್ಳುತ್ತಾರಲ್ಲಾ ಎಂದು ಕೃಶಾನು ಸಂಕಟಪಡುತ್ತಾನೆ. ಕೃಶಾನುವಿನ ಟೀಕೆ ನಿಜ—ಇಂದಿಗೂ ಕೂಡ.

ಕನ್ನಡದ ಬನವಾಸಿಯಂತೆ ಚೋಳ (ಮಲೆಯಾಳ) ದೇಶದ ತೆಂಗು ಕೌಂಗಿನ ನಾಗವಲ್ಲಿಯ ನಿಸರ್ಗ ಶೋಭೆ ಕವಿಯನ್ನು ಮೋಹಿಸುತ್ತದೆ. ಅಲ್ಲಿನ ಬ್ರಾಹ್ಮಣರ ಶುದ್ಧಾಚಾರಕ್ಕೂ ಅವನು ಸರ್ಟಿಫಿಕೇಟು ಕೊಟ್ಟಿದ್ದಾನೆ. (ದಕ್ಷಿಣದಲ್ಲಿ ಇನ್ನೂ ಬ್ರಾಹ್ಮಣ್ಯದ ಲೇಶ ಉಳಿದಿತ್ತೆನ್ನಿರಿ!) ಆದರೆ ಇಷ್ಟು ಮಡಿವಂತರಾದ ಈ ಬ್ರಾಹ್ಮಣರು ತೆಂಗಳನ್ನ ತಿನ್ನುತ್ತಾರಲ್ಲ, ಏನನ್ಯಾಯ! ಎಂದು ಅವನ ತಳಮಳ.

ಮಲೆಯಾಳದ ಮಹಿಳೆಯರ ಚಾಳಿ ಮಾತ್ರ ಅವನಿಗೆ ಒಪ್ಪಿತವಿಲ್ಲ. ಈ ಹೆಂಗಸರು ಕುಪ್ಪಸ ಹಾಕಿಕೊಳ್ಳದೆ "ಬಟ್ಟಕುಚ"ವನ್ನು ಬಯಲಿಗಿಟ್ಟು ಯಾಕೆ ತಿರುಗಬೇಕು? ಇಷ್ಟೇನೆ? ಹುಡುಗಿಯರಾರಾದರೂ ಮೈನರೆದರೆ ಈ ನಾಚಿಕೆಗೇಡಿ ಹೆಂಗಸರು ಅವರ ಮನೆ ಮುಂದೆ ನೂರುಗಟ್ಟಳೆಯಲ್ಲಿ ಸೇರಿ ಕೇಳಲಸದಳವಾದ ಅಶ್ಲೀಲ ಕಾಮುಕ ವಚನಗಳನ್ನು ನಿರ್ಭಯವಾಗಿ ಗಳಹುತ್ತಾರಲ್ಲ! ಕಲಿಕಾಲ!

ಕೃಶಾನುವಿನ ಈ ಆಕ್ಷೇಪಕ್ಕೆ ವಿಶ್ವಾವಸುವಿನ ಉತ್ತರ ಸ್ವಾರಸ್ಯವಾಗಿದೆ: "ಕಾಮೋಪಭೋಗ ಸಾಧನವಾದ್ದರಿಂದ ಎದೆಯನ್ನು ಮುಚ್ಚಿಕೊಳ್ಳಬೇಕೆಂದು ಕೂಗೆಬ್ಬಿಸುವ ನೀನು ಅದರ ಇನ್ನೊಂದು ಸಾಧನವಾದ ತುಟಿಗಳನ್ನೂ ಮರೆ ಮಾಡಬೇಕೆಂದು ಯಾಕೆ ಚಳವಳಿ ಹೂಡುವುದಿಲ್ಲ?"

ವಿಶ್ವಾವಸುವು ಕೃಶಾನುವನ್ನು ನಿಜವಾಗಿ ಮಾತಿನಲ್ಲಿ ಸೋಲಿಸಿದ್ದು ಇದೊಂದೇ ಸಲವೆಂದು ಹೇಳಬಹುದು!

***

ಲೌಕಿಕ ಸಾಧುಗಳ ಮಾತುಗಳು ಅರ್ಥವನ್ನು ಅನುಸರಿಸಿ ಬರುತ್ತವೆ; ಆದ್ಯರಾದ ಕವಿಗಳ ಮಾತುಗಳನ್ನು ಅರ್ಥವೇ ಬೆಂಬತ್ತುತ್ತದೆ.

—ಭವಭೂತಿ

# ಇದುವೆ ಜೀವ, ಇದು ಜೀವನ

ನಮ್ಮ ಚಾಳಿನಲ್ಲಿ ಹುಣಸೇಹಣ್ಣಿನಿಂದ ಹಿಡಿದು ನೂರು ರೂಪಾಯಿಯ ವರೆಗೆ ಎಲ್ಲ ವಸ್ತುಗಳನ್ನೂ ಕಡ ಕೇಳುತ್ತ ತಿರುಗುವ ಕೆಲ ಕುಟುಂಬಗಳಿವೆ. ನಾವು ಮೊದಲು ಅಲ್ಲಿ ಬಂದು ವಸತಿ ಹೂಡಿದಾಗ ಇಂಥವರ ಸಂಗಡ ಯಥಾ ಶಕ್ತಿ ಸಹಕರಿಸುವ ಯತ್ನ ಮಾಡಿದೆವು. ಆದರೆ ಒಯ್ದುದ್ದನ್ನು ತಿರುಗಿ ಮುಟ್ಟಿಸಲು ಮರೆಯುವ ಧೋರಣೆಯೇ ಕಂಡು ಬಂದದ್ದರಿಂದ ಮುಂದೆ "ಒಳ್ಳೇ ಮಾತಿಗೆ ಸುಳ್ಳೇ ಪ್ರಧಾನ" ಎಂಬ ಹಳೇ ಗಾದೆಯನ್ನಾಶ್ರಯಿಸಿ "ಇಲ್ಲ"ದ ವಿಸ್ತೃತ ರೂಪಗಳಾದ "ನಿನ್ನೆಯೇ ತೀರಿಹೋಯಿತು, ನೋಡಿರಿ," "ನಮ್ಮಲ್ಲಿ ಅದನ್ನು ತರುವ ಪದ್ಧತಿಯೇ ಇಲ್ಲವಲ್ಲಾ," "ನಾನೇ ಈಗ ನಿಮ್ಮ ಕಡೆ ಇದಕ್ಕಾಗಿ ಬರಬೇಕೆಂದಿದ್ದೆ," ಇತ್ಯಾದಿ ನೆವಗಳನ್ನು ಹೂಡಲು ಕಲಿತೆವು.

ಆದರೆ ಒಂದು ಸಲ ನಾನು ಅಸಾಧಾರಣ ಕುಶಲ ಬುದ್ಧಿಯೊಂದರ ಕೈಲಿ ಚಳ್ಳೇಕಾಯಿ ತಿನ್ನಬೇಕಾಯಿತು. ಹಣವನ್ನೇ— ಎಂಟಾಣೆ ಯಿಂದ ಐವತ್ತು ರೂಪಾಯಿ ವರೆಗೆ— ಕಡ ಕೇಳುವದನು ವೈಶಿಷ್ಟ್ಯವಾಗಿ ಮಾಡಿಕೊಂಡಿದ್ದ ಒಂದು ಕುಟುಂಬದ ಯಜಮಾನಿಯು ಒಂದು ದಿನ ನನ್ನ ಕಡೆ ಬಂದು, "ಒಂದೈದು ರೂಪಾಯಿಯ ಚಿಲ್ಲರೆ ಸಿಗಬಹುದೇನ್ರೀ, ನಿಮ್ಮಲ್ಲಿ?" ಎಂದು ರಾಗ ಎಳೆದಳು.

ಕಡ ಕೊಡಲಾಗದಿದ್ದರೆ ಚಿಲ್ಲರೆ ಕೊಟ್ಟಾದರೂ ಉಪಕಾರ ಮಾಡುವುದರಲ್ಲೇನು ಹಾನಿಯಿದೆ? ಎಂದುಕೊಂಡು ನಾನು "ನೋಡ್ತೇನವ್ವ" ಎಂದು ಎದ್ದು ಹೋಗಿ ಐದು ರೂಪಾಯಿಯ ಚಿಲ್ಲರೆಯನ್ನು ನಮ್ಮ ಎಲ್ಲ ಹುಡುಗರ ಸೇವಿಂಗ್ಸ ಡಬ್ಬಿ ಮುಗುಚಿ ಹಾಕಿ ತಂದು ಕೊಟ್ಟೆ.

ನಮ್ಮ ನೆರೆಯಾಕೆ ಹಣವನ್ನು ಎಣಿಸಿ ಸೆರಗಿಗೆ ಕಟ್ಟಿಕೊಂಡು "ನೋಟು ನಾಳೆ ಕಳಿಸುತ್ತೇನೆ, ಆಗದೇ?" ಎಂದು ನನ್ನ ಅಪ್ರತಿಭ ಮೌನವನ್ನು ಸಮ್ಮತಿ ಲಕ್ಷಣವೆಂದೇ ಗ್ರಹಿಸಿ ಎದ್ದು ಹೋದರು.

ಆ ನೋಟಿಗೆ ಇಂದಿಗೂ ನಮ್ಮ ಕೈ ಸೇರಲು ಪುರಸೊತ್ತು ಆಗಿಲ್ಲ.

—ಲಕ್ಷ್ಮೀಬಾಯಿ, ಹುಬ್ಬಳ್ಳಿ

ಮನೆಯಲ್ಲಿ ಮಗುವಿಗೆ ಆಟಿಗೆ ಸಾಮಾನು ಗಳನ್ನು ಕೊಳ್ಳಲೆಂದು ಒಂದು ಅಂಗಡಿಗೆ ಹೋಗಿದ್ದೆ. ನಾನು ಆಟಿಗೆಗಳನ್ನು ಆರಿಸುತ್ತಿದ್ದಾಗ ಅತ್ಯಂತ ಠೀವಿಯ ಉಡುಪು ಧರಿಸಿದ ದಂಪತಿಗಳಿಬ್ಬರು ತಮ್ಮ ಇಬ್ಬರು ಮಕ್ಕಳನ್ನು ಕರೆದುಕೊಂಡು ಅಂಗಡಿಗೆ ಬಂದರು.

"ನಮ್ಮ ಮಕ್ಕಳ ಮನರಂಜಿಸುವ ಆಟಿಗೆಗಳು ಬೇಕು. ನಾನು ಮತ್ತು ನನ್ನ ಹೆಂಡತಿ ಇಬ್ಬರೂ ನೌಕರಿ ಮಾಡುತ್ತೇನಾದ್ದರಿಂದ ನಾವು ಮನೆಯಲ್ಲಿ ಇಲ್ಲದ ಸಮಯದಲ್ಲಿ ಮಕ್ಕಳ ಮನಸ್ಸನ್ನು ಪ್ರಸನ್ನವಾಗಿಡುವಂಥ ಆಟಿಗೆಗಳು ಬೇಕು," ಎಂದು ಗಂಡ ಹೇಳಿದ.

ಅಂಗಡಿಕಾರ ನಾನಾವಿಧವಾದ ಆಟಿಗೆಗಳನ್ನು ಅವರ ಮುಂದೆ ರಾಶಿ ಹಾಕಿದ. ಒಂದರಲ್ಲಿ ಗಂಡ ದೋಷ ಕಂಡರೆ, ಇನ್ನೊಂದರಲ್ಲಿ ಹೆಂಡತಿ ದೋಷ ಕಾಣುತ್ತಿದ್ದಳು. ಒಂದೂ ಅವರ ಮನಸ್ಸಿಗೆ ಬರಲಿಲ್ಲ.

"ನಮಗೆ ನಾವು ಬಯಸುತ್ತಿರುವುದೇನು ಎಂಬುದರ ಸರಿಯಾದ ಕಲ್ಪನೆಯಾಗಿದ್ದರೆ ನಮಗೆ ಬೇಕಾದಂಥ ಆಟಿಗೆಗಳನ್ನು ನೀವು ತೋರಿಸಬಹುದಿತ್ತು," ಎಂದು ಹೆಂಡತಿ ತುಸು ಬೇಸರದಿಂದ, ಸಿಡುಕಿನಿಂದ ಹೇಳಿದಳು.

ಆ ಅಂಗಡಿಕಾರ ನಿರ್ವಿಕಾರ ಮುದ್ರೆಯಿಂದ ಹೇಳಿದ್ದು : " ಅಮ್ಮಾ, ನೀವು ಬಯಸುವದು, ನಿಮ್ಮ ಮಕ್ಕಳು ಅಪೇಕ್ಷಿಸುವದು ಆಟಿಗೆಗಳ ನ್ನಲ್ಲ ! ತಂದೆ-ತಾಯಿಗಳನ್ನು. ನಾವು ಅವನ್ನು ಮಾರುವದಿಲ್ಲ. ''

—ವಿ. ವಾ. ಆ.

ಅಂದು ಅವಸರದಿಂದ ಸಿಟಿ ಬಸ್ ಹತ್ತಿ ಚಿಲ್ಲರೆ ಇಲ್ಲದ್ದರಿಂದ ಕಂಡಕ್ಟರನಿಗೆ ಒಂದು ರೂಪಾಯಿ ಕೊಟ್ಟೆ. ನನ್ನ ತಿಕೀಟಿನ ಬೆಲೆ ಒಂದೂಮುಕ್ಕಾಲಾಣೆ ಮಾತ್ರ ಇತ್ತು. ಆದರೆ ಕಂಡಕ್ಟರ ನನಗೆ ತಿರುಗಿ ಕೊಟ್ಟ ಚಿಲ್ಲರೆ ಹದಿನಾಲ್ಕಾಣೆ ಮೂರು ಪೈಯ ಬದಲು ಹದಿ-ನಾರಾಣೆ ಮೂರು ಪೈ ಇತ್ತು.

ಒಮ್ಮೆ ನನಗನಿಸಿತು — ಕಂಡಕ್ಟರ ತಪ್ಪಿ ಎರಡಾಣೆ ಜಾಸ್ತಿ ಕೊಟ್ಟಿದ್ದಾನೆ, ತಿರುಗಿ ಕೊಟ್ಟು ಬಿಡೋಣ—ಎಂದು. ಆದರೆ ಮರುಕ್ಷಣದಲ್ಲೇ ನನ್ನೊಳಗೆ ಹುದುಗಿದ್ದ ಸೈತಾನ ಅದಕ್ಕೆ ಅಡ್ಡಿ ಮಾಡಿದ. ನಾನು ಇಡೀ ಚಿಲ್ಲರೆಯನ್ನು ಜೇಬಿನೊಳಗೆ ಇಳಿಸಿಬಿಟ್ಟೆ.

ಬಸ್ಸಿನಿಂದ ಇಳಿದವನಿಗೆ, ಯಾಕೋ ಮನಸು ಅಶಾಂತವಾದದ್ದರಿಂದ, ಮತ್ತೆ ಚಿಲ್ಲರೆಯನ್ನು ಎಣಿಸಿ ನೋಡಿದೆ. ನಿಜವಾಗಿ ಹದಿನಾರೂ ಕಾಲಾಣೆಯೇ ಇತ್ತು. ಆದರೆ ಸರಿಯಾಗಿ ನೋಡಿದಾಗ ಅದರಲ್ಲಿ ಎಂಟಾಣೆಯ ಒಂದು ನಾಣ್ಯ ಖೊಟ್ಟಿಯಿದ್ದದ್ದು ತಿಳಿಯಿತು.

ಕಂಡಕ್ಟರನ ಮೇಲೆ ಒಮ್ಮೆ ನನಗೆ ಸಿಟ್ಟು ಬಂತು. ಆದರೆ ಮನದೊಳಗಿನ ನ್ಯಾಯ್ಯ ದೇವತೆ ನನ್ನನ್ನು ಒಡನೆ ಹಂಗಿಸಿತು—" ತಲೆಗೆ ಹೊಯ್ದ ನೀರೇ ಕಾಲಿಗಿಳಿಯಿತು. ಅದಕ್ಕೇಕೆ ಸಿಟ್ಟು ? ''

—ನಾ. ಸು.

ಮೊನ್ನೆ ನಾನು ಬೆಳಗಾವಿಗೆ ಹೊರಟಿದ್ದಾಗ ಬಸ್ಸಿನಲ್ಲಿ ಒಬ್ಬ ಹೆಣ್ಣುಮಗಳು ಚಿಕ್ಕ ಹುಡುಗಿಯೊಡನೆ ಬಂದು ಕುಳಿತಳು. ಕಂಡಕ್ಟರನು ತಿಕೀಟು ಕೊಡುತ್ತ ಅವಳ ಕಡೆಗೂ ಬಂದ. ಅವಳು ತನ್ನದೊಬ್ಬಳದೇ ತಿಕೀಟಿನ ಹಣ ಕೊಟ್ಟಳು. ಅವನು ತಿಕೀಟು ಕೊಟ್ಟು " ಹುಡುಗಿಯ ತಿಕೀಟು ? '' ಎಂದ.

ಹೆಂಗಸು " ಅವಳಿಗಿನ್ನೂ ಮೂರು ವರ್ಷವಾಗಿಲ್ಲವಲ್ಲ ! '' ಎಂದು ಉತ್ತರವಿತ್ತಳು.

ಕಂಡಕ್ಟರ ತಕರಾರು ಮಾಡದೆ ಮುಂದೆ ಸಾಗಿದ. ಅವನು ಎರಡು ಹೆಜ್ಜೆ ಮುಂದೆ ಹೋಗಿರಲಿಲ್ಲ, ಹುಡುಗಿ ತಾಯಿಗೆ ಹೇಳಿದಳು : " ಇಲ್ಲಿ ಹೇಳುತ್ತೀ, ನನಗೆ ಮೂರು ವರ್ಷವಾಗಿಲ್ಲ ಅಂತ. ಬರುವಾಗ ದಾರಿಯಲ್ಲಿ ಬೈದಿ, ಐದು ವರ್ಷದ ಮುದುಕಿಯಾದಿ, ನಡೆಯಲಿಕ್ಕೇನು ಧಾಡಿ ? ಅಂತ. ''

—ಬಂ. ರಾ. ಕಾರವಾರ

---

ಈ ಶೀರ್ಷಿಕೆಯ ಕೆಳಗೆ ಪ್ರಕಟವಾಗಲು ಓದುಗರಿಂದ ಸ್ವಂತ ಅನುಭವದ ಇಂಥ ಚುಟುಕು ಲೇಖಗಳು ಬೇಕಾಗಿವೆ. ೧೫೦ ಶಬ್ದಗಳಿಗೆ ಮೀರದಂತೆ ಅವನ್ನು ಬರೆದು ಕಳಿಸಬೇಕು. ಚುಟುಕುಗಳು ಭಾರತೀಯ ಜೀವನದ ಸ್ವಾರಸ್ಯ ಮುಖವನ್ನು ಪ್ರದರ್ಶಿಸುವಂತಿರಬೇಕು. ಸ್ವೀಕೃತವಾದ ಪ್ರತಿ ಚುಟುಕಕ್ಕೆ ಒಂದು ರೂಪಾಯಿ ಬಹುಮಾನವೀಯಲಾಗುವುದು.



# ಬಂಗಾಲದ ಜಗತ್ ಸೇಠ ಮನೆತನ

೧೭೨೩ರಲ್ಲಿ ಒಂದು ದಿನ ಮೊಗಲ ಚಕ್ರವರ್ತಿ ಮಹಮ್ಮದಶಾಹನ ದರಬಾರ ನಲ್ಲಿ ಉಚ್ಚಾಸನದಲ್ಲಿ ಭವ್ಯ ವೇಷದ ದೊಡ್ಡ ರುಮಾಲಿನ ಮಾರವಾಡಿಯೊಬ್ಬನು ಕುಳಿತಿದ್ದನು. ಅವನ ಮುಖ ಸಂತಸ ದಿಂದ ಅರಳಿದ್ದಿತು. ಅವನು ಹಿಗ್ಗಲು ಬೇಕಾದಷ್ಟು ಕಾರಣವಿತ್ತು. ಚಕ್ರವರ್ತಿಯು ಅಂದು ವಿಶೇಷ ದರಬಾರು ಜರುಗಿಸಿ ಅವ ನಿಗೆ "ಜಗತ್ ಸೇಠ" ಎಂಬ ಬಿರುದು ದಯಪಾಲಿಸಿದ್ದನು. ಅವನು ಈ ಬಿರು ದನ್ನು ಪರಂಪರಾಗತವಾಗಿ ಅನುಭವಿಸಿ ಕೊಂಡು ಬರಬಹುದೆಂದು ಬಾದಶಾಹನು ಸನದು ಕೊಟ್ಟಿದ್ದನು.

ಈ ಸೇಠಜಿಯ ಹೆಸರು ಫತ್ತೇಚಂದ ಅವನು ದಿಲ್ಲಿಯ ನಿವಾಸಿಯಾಗಿದ್ದಿಲ್ಲ. ಅವನ ವ್ಯವಹಾರದ ಸ್ಥಳ ಬಂಗಾಲದ ಆಗಿನ ರಾಜಧಾನಿಯಾಗಿದ್ದ ಮುರ್ಶಿದಾಬಾದ. ಅವನ ವ್ಯವಹಾರದ ಒಂದು ಶಾಖೆ ಮಾತ್ರ ದಿಲ್ಲಿಯಲ್ಲಿತ್ತು. ಅವನು ಆಗ ವ್ಯವಹಾರ ನಿಮಿತ್ತ

ದಿಲ್ಲಿಗೆ ಬಂದಿದ್ದನು. ಆಗ ಚಕ್ರವರ್ತಿ ಅವನಿಗೆ "ಜಗತ್ ಸೇಠ" ಬಿರುದು ಕೊಡುವ ಅವಕಾಶ ತೆಗೆದುಕೊಂಡಿದ್ದನು.

ಅವನ ಬಿರುದು ಬಹಳ ಅತಿಶಯೋಕ್ತಿಯು-ದಾಗಿರಲಿಲ್ಲ. ಅವನು ನಿಜವಾಗಿ ಮೊಗಲ ಜಗತ್ತಿನ ಒಂದನೇ ನಂಬರಿನ ಸಾಹುಕಾರನೇ ಇದ್ದನು. ಬಂಗಾಲದ ನವಾಬನಾದ ಮುರ್ಶಿದ ಕುಲಿಖಾನನು ನಿಧನಹೊಂದಿದಾಗ ಅವನ ಸರಕಾರವು ಈ ಸೆಟ್ಟಿಗೆ ೫ ಕೋಟಿ ರೂಪಾಯಿ ಕೊಡಬೇಕಾಗಿತ್ತು. ಬೇರೆ ಎಷ್ಟೋ ಜನ ಅರಸರು ಅವನಿಗೆ ಋಣಿಗಳಾಗಿದ್ದಿರಬೇಕು. ತನ್ನ ದಿಲ್ಲಿ ಶಾಖೆಯ ಮೂಲಕ ಅವನು ಮೊಗಲ ದರಬಾರಿನ ಮೇಲೂ ವರ್ಚಸ್ಸು ಬೀರುತ್ತಿದ್ದುದರಿಂದಲೇ ಅವನನ್ನು ಬಾದಶಾಹನು ಬಿರುದು ಕೊಟ್ಟು ಗೌರವಿಸಿದ್ದನು.

ಜಗತ್ ಸೇಠರ ಕುಟುಂಬವು ಮಧ್ಯಯುಗದಲ್ಲಿ ಒಂದು ಅಪರೂಪ ಉದಾಹರಣೆಯಾಗಿತ್ತು. ಇನಾಮದಾರಿಕೆಯ ಆ ಕಾಲದಲ್ಲಿ ಸಂಪತ್ತು ಸಾಹುಕಾರರ ಕೈಯ್ಯಲ್ಲಿ, ಅದೂ ಹಿಂದುಗಳ ಕೈಯಲ್ಲಿ, ಇಷ್ಟು ಪ್ರಚಂಡ ಪ್ರಮಾಣದಲ್ಲಿ ಸೇರುವುದು ತೀರ ವಿರಳವಾಗಿತ್ತು. ಅರಸರು, ಸೇನಾಪತಿಗಳು, ಸರದಾರರು ಮೊದಲಾದವರಲ್ಲೇ ಸಂಪತ್ತು ಶೇಖರವಾಗಿರುತ್ತಿತ್ತು. ವ್ಯಾಪಾರಿ ಜನರ ಕೈಯಲ್ಲಿ ಅಪಾರ ದ್ರವ್ಯ ಕೂಡಿ ಬೀಳುವುದು ೧೯ ನೇ ಶತಕದಲ್ಲಿ ಯುರೋಪಿನಲ್ಲಿ ಉದಿಸಿದ ಔದ್ಯೋಗಿಕ ಯುಗದ ವೈಶಿಷ್ಟ್ಯ.

ಜಗತ್ ಸೇಠರ ಮನೆತನವು ಅಪಾರ ಸಂಪತ್ತಿಗಾಗಿ ಮಾತ್ರ ಸ್ಮರಣೀಯವಾಗಿರದೆ ಅದು ೧೮ ನೇ ಶತಮಾನದ ರಾಜಕೀಯ ರಂಗದ ಮೇಲೆ ಬೀರುತ್ತಿದ್ದ ಪ್ರಭಾವದಿಂದಲೂ ಸೆಟ್ಟಿಗಳಲ್ಲಿ ವಿಲಕ್ಷಣ ಕುಟುಂಬವಾಗಿತ್ತು. ಫತ್ತೇಚಂದನು ಅರಸರನ್ನು ಸಿಂಹಾಸನಕ್ಕೇರಿಸಬಲ್ಲವನೂ ಉರುಳಿಸಬಲ್ಲವನೂ ಆಗಿದ್ದನು. ೧೭೪೦ ರಲ್ಲಿ ಬಂಗಾಲದ ಸ್ವತಂತ್ರ ನವಾಬನಾಗಿದ್ದ ಶೂಜಾ ಉದ್ದೌಲನು ಸತ್ತಾಗ ಅವನ ಮಗ ಸರ್ಫಾಫರಾಜ ಖಾನನನ್ನು ಫತ್ತೇಚಂದನು ಪಟ್ಟದಿಂದ ತಪ್ಪಿಸಿ ಅಲಿವರ್ದಿಖಾನನಿಗೆ ಸಿಂಹಾಸನವನ್ನು ಕೊಡಿಸಿದನು! ಇದರಲ್ಲಿ ಆಶ್ಚರ್ಯವಿಲ್ಲ. ೧೭೪೪ ರಲ್ಲಿ ಫತ್ತೇಚಂದನು ಮರಣಹೊಂದಿದಾಗ ನವಾಬನ ಟಂಕಸಾಲೆಯಲ್ಲಿ ನಾಣ್ಯವಾಗಿ ಮುದ್ರಿತವಾಗುತ್ತಿದ್ದ ಚಿನ್ನವೆಲ್ಲವೂ ಜಗತ್ ಸೇಠ ಮನೆತನದ್ದೇ ಇತ್ತು. ೧೭೪೧ ರಲ್ಲಿ ಮರಾಠಾ ಸುಲಿಗೆಗಾರನಾದ ಭಾಸಕರ ಪರ್ಮನು ಮುರ್ಶಿದಾಬಾದಕ್ಕೆ ಆಕಸ್ಮಿಕವಾಗಿ ನುಗ್ಗಿ ಫತ್ತೇಚಂದನ ಮನೆಯನ್ನು ಲೂಟಿ ಮಾಡಿದಾಗ ಅವನಿಗೆ ನಾಣ್ಯ ಹಾಗು ಚಿನ್ನದ ರೂಪದಲ್ಲಿ ಎರಡು ಕೋಟಿ ರೂಪಾಯಿಗಳು ಸಿಕ್ಕಿದವಂತೆ. ಇದರಿಂದ ಸೇಠ ಮನೆತನದ ಹತ್ತಿರ ಎಷ್ಟು ಅಗಾಧ ಸಂಪತ್ತು ಸಿದ್ಧ ರೂಪದಲ್ಲಿತ್ತೆಂದು ಊಹಿಸಬಹುದು.

ಜಗತ್‌ಸೇಠರ ಸಂಪತ್ತಿನ ಪ್ರಾರಂಭ ೧೭ ನೇ ಶತಮಾನದ ಮಧ್ಯದಲ್ಲಿ ಆ ಮನೆತನದ ಮೂಲ ಪುರುಷನಾದ ಹೀರಾನಂದ ಸೇಠನಿಂದಾಯಿತು. ಅವನು ರಾಜಪುತಸ್ಥಾನದ ನಗರ ಎಂಬ ಸ್ವ-ಗ್ರಾಮವನ್ನು ತ್ಯಜಿಸಿ ಪಾಟ್ನಾಕ್ಕೆ ಬಂದು ನೆಲಸಿ ಸಾಹುಕಾರಿಕೆಯ ವೃತ್ತಿಯನ್ನು ಆರಂಭಿಸಿದನು. ಅವನ ಉದ್ಯೋಗ ತುಂಬ ಲಾಭದಾಯಕವಾಗಿ ಬೆಳೆಯಿತು.

ಹೀರಾನಂದನ ಮಗ ಮಾಣಿಕಚಂದನು ೧೭ ನೇ ಶತಮಾನದ ಕೊನೆಯ ಸುಮಾರಿಗೆ ಆಗ ಬಂಗಾಲದಲ್ಲಿ ಮೊಗಲರ ರಾಜಧಾನಿಯಾಗಿದ್ದ ಡಾಕಾಕ್ಕೆ ಹೋಗಿ ನೆಲಸಿದನು. ಸೇಠನು ಆಗಲೇ ಬಂಗಾಲದ ನವಾಬರ ಪ್ರಮುಖ ಸಾಹುಕಾರನಾಗಿರಬೇಕು. ಮೊಗಲರ ಅಂಕಿತವನ್ನು ಧಿಕ್ಕರಿಸಿ ನವಾಬ ಕುಲಿಖಾನನು ಸ್ವತಂತ್ರನಾಗಿ ೧೭೦೨ ರಲ್ಲಿ ಡಾಕಾದಿಂದ ಮುರ್ಶಿದಾ-ಬಾದಕ್ಕೆ ರಾಜಧಾನಿಯನ್ನು ಸ್ಥಳಾಂತರಿಸಿದನು. ಮಾಣಿಕಚಂದನೂ ಅವನೊಡನೆ ಮುರ್ಶಿದಾ-ಬಾದಕ್ಕೆ ಬಂದನು. ನವಾಬನ ಯೋಜನೆಗಳೆಲ್ಲ ಮಾಣಿಕಚಂದನ ಧನದ ಬಲವನ್ನೇ ಅವಲಂಬಿಸಿದ್ದವು.

೧೭೨೨ ರಲ್ಲಿ ಮಾಣಿಕಚಂದನ ಮರಣವಾಯಿತು. ಅವನ ದತ್ತಕ ಮಗ ಫತ್ತೇಚಂದನೇ ಸೇಠ ಮನೆತನದ ಉತ್ಕರ್ಷವನ್ನೂ ರಾಜಕೀಯ

ಪ್ರಭಾವವನ್ನೂ ಶಿಖರಕ್ಕೇರಿಸಿದವನು. ಅವನೇ ಪ್ರಥಮ ಜಗತ್‌ಸೇಠ.

ಫತ್ತೇಚಂದನ ಮರಣಾನಂತರ ಸೇಠ ಮನೆತನದ ಹಿರಿತನ ವಹಿಸಿದ ಅವನ ಮೊಮ್ಮಕ್ಕಳಾದ ಮಹತಾಬರಾಯ ಹಾಗು ಸ್ವರೂಪರಾಯರು ಇನ್ನಷ್ಟು ವರ್ಚಸ್ವಿಗಳಾದರು. ಮಹತಾಬರಾಯನು ಮೊಗಲ ಬಿರುದಾದ "ಜಗತ್ ಸೇಠ"ನ್ನು ಧರಿಸಿದರೆ ತಮ್ಮ ಸ್ವರೂಪನು ನವಾಬನಿಂದ ಪಡೆದ "ರಾಜಾ" ಬಿರುದಿಗೆ ಪಾತ್ರನಾದನು. ಹನ್ನೆರಡು ವರ್ಷಕಾಲ ಇವರ ದಶೆ ಉಚ್ಚದಲ್ಲೇ ಇತ್ತು. ಅನಂತರ ರಾಜಕಾರಣದಲ್ಲಿ ಕೈವಾಡ ನಡೆಸಿದ್ದರ ಅನಿಷ್ಟ ಫಲಗಳನ್ನು ಅವರು ಅನುಭವಿಸಬೇಕಾಯಿತು.

೧೭೫೬ ರಲ್ಲಿ ಅಲಿವರ್ದಿಖಾನನು ಸತ್ತ ನಂತರ ಪಟ್ಟವೇರಿದ ತರುಣ ಸಿರಾಜುದ್ದೌಲನಿಗೂ ಮಹತಾಬರಾಯನಿಗೂ ಚಕಮಕಿಯಾಯಿತು. ೧೫ ದೇ ತಿಂಗಳು ಆಳಿದ ಸಿರಾಜುದ್ದೌಲನು ತನ್ನ ಯೋಜನೆಗಳಿಗೆ ಮಹತಾಬರಾಯನಿಂದ ಹಣ ದೊರಕಿಸಲಾರದೆ ಕೆರಳಿ ಅವನನ್ನು ಹಿಡಿದು ಸೆರೆಮನೆಗೆ ಕಳಿಸಿದನು. ಮೀರಜಾಫರನ ಮಧ್ಯಸ್ತಿಕೆಯೂ ಅವನ ಬಿಡುಗಡೆ ಮಾಡಿಸಲು ಅಸಮರ್ಥವಾಯಿತು. ಕೊನೆಗೆ ನವಾಬನ ಆಗ್ರಹ ತಣಿದು ಮಹತಾಬರಾಯನ ಬಿಡುಗಡೆಯಾದ ಮೇಲೆ ಬಂಗಾಲವನ್ನು ನಡುಗಿಸುವ ಘಟನೆಗಳಾದವು. ಮಹತಾಬನನ್ನು ಕೆಣಕಿದ್ದಕ್ಕೆ ಸಿರಾಜುದ್ದೌಲನು ಭೀಕರ ಪ್ರಾಯಶ್ಚಿತ್ತಕ್ಕೆ ಗುರಿಯಾಗಬೇಕಾಯಿತು. ಮಹತಾಬರಾಯನು ತನ್ನ ನೌಕರರಾಗಿದ್ದ ರಣಜಿತರಾಯ ಹಾಗು ಯಾರಲತೀಫರ ಮೂಲಕ ಇಂಗ್ಲೀಷರೊಡನೆ ಸಂಧಾನ ನಡೆಸಿ ಸಿರಾಜನನ್ನು ಪದಚ್ಯುತಗೊಳಿಸಲು ಕ್ಲೈವನಿಗೆ ಪ್ರೋತ್ಸಾಹವಿತ್ತನು. ಪ್ಲಾಸಿ ಕದನ (೧೭೫೭) ದಲ್ಲಿ ಸಿರಾಜುದ್ದೌಲನ ಸರ್ವನಾಶವಾಗಿ ಭಾರತದಲ್ಲಿ ಬ್ರಿಟಿಶ ಪ್ರಭುತ್ವದ ಸ್ಥಾಪನೆಯಾಗಲು ಜಗತ್‌ಸೇಠರೇ ಮೂಲವಾದರು.

ಸೇಠ ಮನೆತನವೂ ತನ್ನ ಕೃತಿಯ ಪ್ರಾಯಶ್ಚಿತ್ತವನ್ನು ಪಡೆಯದಿರಲಿಲ್ಲ. ಪ್ಲಾಸಿ ಕದನದ ನಂತರ, ಮುರ್ಶಿದಾಬಾದದ ಬೊಕ್ಕಸದಲ್ಲಿ ೪೦ ಕೋಟಿ ರೂಪಾಯಿಯಾದರೂ ಇರಬೇಕೆಂದು ಆಶಿಸಿದ್ದ ಇಂಗ್ಲೀಷರು ಒಂದೂವರೆ ಕೋಟಿ ರೂಪಾಯಿಯನ್ನಷ್ಟೇ ಕಂಡು ಹೊಸ ಆಡಳಿತದ ನಿರ್ವಹಣಕ್ಕೆ ಹಣವೊದಗಿಸುವ ಹೊಣೆಯನ್ನು ಜಗತ್‌ಸೇಠರ ಮೇಲೆಯೇ ಹೊರಿಸಿದರು.

ಈ ಸಂಧಿಯಲ್ಲಿ ಮೀರ ಜಾಫರನು ಪದಚ್ಯುತನಾಗಿ ಮೀರ ಕಾಸಿಮನು ಪಟ್ಟವೇರಿದನು. ಹೊಸ ನವಾಬನನ್ನು ಹೆದರಿಸಲು ಜಗತ್ ಸೇಠರು ಸರಕಾರದಿಂದ ತಮಗೆ ಬರಬೇಕಾಗಿದ್ದ ಹಣದ ಪೈಕಿ ೬೦ ಲಕ್ಷ ರೂಪಾಯಿಗಳಿಗೆ ಹುಂಡಿ ಬಜಾಯಿಸಿದರು.

ಮೀರ ಕಾಸಿಮನು ಹುಂಡಿಯ ಹಣ ತೀರಿಸಲಿಲ್ಲ. ಸೇಠ–ನವಾಬ ಮನಸ್ತಾಪ ಹೆಚ್ಚಿತು. ಮೀರ ಕಾಸಿಮನೊಡನೆ ಬ್ರಿಟಿಶರ ಸಂಬಂಧವೂ ಕೆಡುತ್ತ ಬಂತು. ಮುಂದೆರಡು ವರ್ಷಗಳಲ್ಲಿ ಅದು ತೀರ ಉಗ್ರವಾದಾಗ ಮೀರ ಕಾಸಿಮನು ಇಬ್ಬರೂ ಸೇಠರನ್ನು ಸೆರೆಹಿಡಿಸಿದನು. ಉದಯನಾಲಾ ಯುದ್ಧದ ಪ್ರಾರಂಭದಲ್ಲಿ ಅವನು ಅವರ ಮೇಲೆ ಭಯಾನಕ ಪ್ರತೀಕಾರ ಮಾಡಿದನು; ಅವರಿಬ್ಬರನ್ನೂ ಚೀಲಗಳಲ್ಲಿ ತುರುಕಿಸಿ ಬಾಯಿ ಕಟ್ಟಿ ಗಂಗಾಪ್ರವಾಹದಲ್ಲಿ ಮುಳುಗಿಸಿದನೆಂದು ಪ್ರತೀತಿಯಿದೆ.

ಜಗತ್ ಸೇಠರ ಅವನತಿ ಅಲ್ಲಿಂದ ಜೋರಾಗಿ ಮೊದಲಾಯಿತು.

೧೭೬೫ ರಲ್ಲಿ ಬ್ರಿಟಿಶರು ದಿವಾಣಿ ಅಧಿಕಾರ ವಹಿಸಿಕೊಂಡ ಬಳಿಕ ಮುರ್ಶಿದಾಬಾದದಲ್ಲಿಯ ಟಂಕಸಾಲೆ ಕಲಕತ್ತೆಗೆ ಸ್ಥಳಾಂತರಿಸಲ್ಪಟ್ಟಿತು. ಮರುವರ್ಷ ಮಹತಾಬರಾಯನ ೧೮ ವರ್ಷ ಪ್ರಾಯದ ಮಗ ಕುಶಾಲಚಂದನು ಜಗತ್‌ಸೇಠನಾದನು. ತನಗೆ ಸಹಾಯ ಮಾಡಿದ್ದರ ಪ್ರತಿಫಲವೆಂದು ಈ ಸೇಠನಿಗೆ ಕ್ಲೈವನು ವರ್ಷಕ್ಕೆ ೩ ಲಕ್ಷ ರೂಪಾಯಿ ಪೆನ್ಶನ್ ಕೊಡಮಾಡಿದನು. ಆದರೆ ಸೇಠನ ತಿಂಗಳ ವೆಚ್ಚವೇ ೧ ಲಕ್ಷ ರೂಪಾಯಿಗಳಷ್ಟಿದ್ದುದರಿಂದ ಈ ಕೊಡುಗೆ ನಿರಾಕರಿಸಲ್ಪಟ್ಟಿತು. ೧೭೮೦ ರಲ್ಲಿ ಕುಶಾಲಚಂದನ ಪರಿವಾರದಲ್ಲಿ ೧೨,೦೦೦ ಸ್ತ್ರೀಯರು ಇದ್ದರು, ೪,೦೦೦ ಆಳು

ಹೋಳುಗಳಿದ್ದರು. ೧೭೮೭ ರಲ್ಲಿ ಕುಶಾಲಚಂದ ಸತ್ತನಂತರ ಹಂಕಚಂದನು ಬ್ರಿಟಿಶರಿಂದ ತಿಂಗಳಿಗೆ ರೂ. ೧೨,೦೦೦ ಪೆನ್ಶನ್ ಪಡೆದು ಜಗತ್ ಸೇಠನಾದನು. ಮುಂದೆ ಈ ಹಣ ರೂ. ೮,೦೦೦ ಗಳಿಗಿಳಿಸಲ್ಪಟ್ಟಿತು. ೧೯ ನೆಯ ಶತಮಾನದ ಪ್ರಾರಂಭದಲ್ಲಿ ಜೀವಿಸಿದ ಹಂಕಚಂದನ ಉತ್ತರಾಧಿಕಾರಿ ಇಂದ್ರಚಂದನು ಜಗತ್‌ಸೇಠ ಪದವಿ ಪಡೆದವರಲ್ಲಿ ಕೊನೆಯವನಾಗಿದ್ದನು. ೧೭೬೫ ರಲ್ಲಿ ಕಲಕತ್ತೆಯಲ್ಲಿ ಟಂಕಸಾಲೆ ಆರಂಭವಾದಂದಿನಿಂದ ಈ ಕುಟುಂಬದ ಸಂಪತ್ತು ನಿಧಾನವಾಗಿ ಕರಗಿಹೋಗಿತ್ತು.

ಎರಡು ನೂರು ವರ್ಷಗಳ ಹಿಂದಿನ ಈ ಜಗತ್ ಸೇಠರ ಕಥೆ ಅದ್ಭುತವಾಗಿದೆ. ಆದರೆ ಆ ಕಾಲದಲ್ಲಿ ರಾಜಕೀಯ ಅಧಿಕಾರಕ್ಕೆ ಎಷ್ಟೇ ಅಪಾರವಾಗಿದ್ದರೂ ಖಾಸಗಿ ಸಂಪತ್ತು ಎದುರು ನಿಲ್ಲುವದು ಸಾಧ್ಯವಿರಲಿಲ್ಲ ಎಂಬುದನ್ನು ಈ ಕಥೆ ತೋರಿಸುತ್ತದೆ.

---

## ' ಮುಟ್ಟಿಸುತ್ತೇನೆ ! '

——ದಲ್ಲಿ ಒಬ್ಬ ಹೊಲೆಯನಿದ್ದನು. ದಾರಿಯಲ್ಲಿ ಎದುರಾದವರಿಗೆಲ್ಲ ಅವನು ಕೈಮುಗಿದು " ಸಲಾಮ್ ಸಾಹೇಬರೇ, ನಮಸ್ಕಾರ ಬುದ್ಧಿ " ಎನ್ನುತ್ತಿದ್ದನು. ಕೆಲವರು ನಮಸ್ಕಾರ ಸ್ವೀಕರಿಸುತ್ತಿದ್ದರು, ಉಳಿದವರು ಅಸಡ್ಡೆ ಮಾಡಿ ಸಾಗುತ್ತಿದ್ದರು.

ಒಂದು ದಿನ ಆ ಹೊಲೆಯನಿಗೆ ಲಾಟರಿಯಲ್ಲಿ ಒಂದು ಲಕ್ಷ ರೂಪಾಯಿ ಸಿಕ್ಕಿತು. ತತ್‌ಕ್ಷಣ ಅವನೂ ಸಾಹೇಬನಾದ, ' ಬುದ್ಧಿ ' ಯಾದ. ಒಳ್ಳೇ ಠೀಕು ಠಾಕಿನ ಪೋಷಾಕು ಧರಿಸತೊಡಗಿದ, ದೊಡ್ಡ ಸುಸಜ್ಜಿತ ಮನೆ ಕಟ್ಟಿಸಿದ.

ಈಗ ಅವನು ಬೀದಿಯಲ್ಲಿ ಹೋಗುತ್ತಿದ್ದರೆ ಅವನಿಗೆ ಎಲ್ಲರೂ ಕೈಮುಗಿದು ನಮಸ್ಕಾರ ಚಮತ್ಕಾರ ಮಾಡಹತ್ತಿದರು. ಆಗೆಲ್ಲ ಅವನು, ' ಮುಟ್ಟಿಸುತ್ತೇನೆ, ತಲುಪಿಸುತ್ತೇನೆ' ಅನ್ನುತ್ತಿದ್ದ. ಪ್ರತಿ ಸಲವೂ ಇದೇ ಉತ್ತರ ಬರುತ್ತಿದ್ದುದನ್ನು ಕೇಳಿ ಒಬ್ಬನಿಗೆ ಚೋದ್ಯವಾಯಿತು. ಈತ ಯಾರಿಗೆ, ಏನು ಮುಟ್ಟಿಸುತ್ತಾನಂತೆ ?

ಒಂದು ದಿನ ಆ ಮನುಷ್ಯನು ಶ್ರೀಮಂತನಾದ ಹೊಲೆಯನ ಹಿಂದೆ ಗುಪ್ತವಾಗಿ ಸಾಗಿ ಅವನ ಮನೆ ಹೊಕ್ಕು, ಮರೆಯಲ್ಲಿ ನಿಂತನು. ಮಾಜೀ ಹೊಲೆಯನ ಕೋಣೆಯಲ್ಲಿ ವಿಚಿತ್ರ ನಾಟಕ ನಡೆದಿತ್ತು.

ಮಾಜೀ ಹೊಲೆಯ ಮತ್ತು ಈಗಿನ ' ಬುದ್ಧಿ ' ತನ್ನ ತಿಜೋರಿಯ ಬಾಗಿಲು ತೆರೆದ. ಕೈಜೋಡಿಸಿದ. ತಲೆ ಬಾಗಿಸಿದ. ಮತ್ತು ಅತ್ಯಂತ ಭಕ್ತಿಯಿಂದ ಹೇಳಿದ:

" ತಾಯಿ ಲಕ್ಷ್ಮೀದೇವಿ ! ನಾನು ಹಿಂದಿದ್ದಂತೆ ಇಂದೂ ಇದ್ದೇನೆ. ಆದರೆ ನೀನು ಯಾವಾಗ ಬಂದು ತಿಜೋರಿಯಲ್ಲಿ ಕುಳಿತೆಯೋ ಅಂದಿನಿಂದ ನಾನು ' ಬುದ್ಧಿ ' ಯಾಗಿದ್ದೇನೆ. ಎಲ್ಲರೂ ನನಗೆ ನಮಸ್ಕರಿಸುತ್ತಾರೆ. ಆದರೆ ಈ ಎಲ್ಲ ಪ್ರಣಾಮಗಳು ನನಗಲ್ಲ: ಇವೆಲ್ಲ ನಿನ್ನವು ತಾಯಿ ! ಇಕೋ ಇವನ್ನೆಲ್ಲ ನಿನಗೆ ಮುಟ್ಟಿಸಿದ್ದೇನೆ. ತೆಗೆದುಕೋ: ಇಂಥಾ ರಸ್ತೆಯಲ್ಲಿ ಇಂಥವರು ಸಿಕ್ಕಿದ್ದರು. ಅವರ ಸಲಾಮ್ ಇದು. ಇಂಥಾ ಗಲ್ಲಿಯಲ್ಲಿ ಇಂಥವರು ಹೇಳಿದ ರಾಮು ರಾಮು ಇದು. . . . . ."

**" ಮಂಗಲ ಪ್ರಭಾತ "ದಲ್ಲಿ ರೆಹಾನಾ ತಯ್ಯಬಜಿ**

ತಾವು ಕೀಳರಲ್ಲದಿದ್ದರೂ ಕೀಳರೆಂದು ಭ್ರಮಿಸುವವರ ಕೊರಗಿಗೆ ಪರಿಹಾರ

# ನೈಚ್ಯಾನುಸಂಧಾನವನ್ನು ಹೇಗೆ ಎದುರಿಸಬೇಕು ?

ಲೇಖಕ : 'ಭಾರದ್ವಾಜ'

ಎಂ. ಎಸ್‌ಸಿ.ಯಲ್ಲಿ ಉತ್ತಮ ವರ್ಗದಲ್ಲಿ ತೇರ್ಗಡೆಯಾದ ನನ್ನ ಮಿತ್ರನೊಬ್ಬನಿದ್ದಾನೆ. ಅವನು ಒಂದು ಖಾಸಗಿ ಹೈಸ್ಕೂಲಿನಲ್ಲಿ ಮಾಸ್ತರನಾಗಿ ಜೀವನ ಸವೆಸುತ್ತಿದ್ದಾನೆ. ಸ್ವಲ್ಪ ಯತ್ನಿಸಿದ್ದರೆ ಅವನಿಗೆ ಕಾಲೇಜಿನಲ್ಲಿ ಪ್ರೊಫೆಸರ ಕೆಲಸ ಸಿಗಬಹುದಾಗಿತ್ತು. ವಾಸ್ತವಿಕವಾಗಿ ಅವನ ಸಹಪಾಠಿಯೇ ಆಗಿದ್ದು ಅವನಿಗಿಂತ ಕೆಳಗಿನ ದರ್ಜೆ ಪಡೆದಿದ್ದ ಇನ್ನೊಬ್ಬನು ಈಗ ಸರಕಾರಿ ಕಾಲೇಜಿನಲ್ಲಿ ಭೌತಶಾಸ್ತ್ರದ ಪ್ರೊಫೆಸರನಾಗಿ ಸಾಕಷ್ಟು ಪ್ರಸಿದ್ಧನಾಗಿದ್ದಾನೆ.

ನನ್ನ ಮಿತ್ರನ—ಅವನ ಹೆಸರು ಭೀಮರಾಯಾಚಾರ್ಯ ಎಂದಿಟ್ಟುಕೊಳ್ಳೋಣ—ಕಷ್ಟವೆಂದರೆ ಅವನು ನೈಚ್ಯಾನುಸಂಧಾನ ಅಥವಾ ಇನ್‌ಫೀರಿಯಾರಿಟಿ ಕಾಂಪ್ಲೆಕ್ಸಿನಿಂದ ಬಳಲುತ್ತಿದ್ದಾನೆ. ತನಗೆ ಪರ್ಸನ್ಯಾಲಿಟಿ—ಅರ್ಥಾತ್ ಭವ್ಯ ಆಕೃತಿಯಿಲ್ಲ. ಆದ್ದರಿಂದ ತಾನು ಪುಂಡ ಸ್ವಭಾವದವರಾದ ಕಾಲೇಜು ವಿದ್ಯಾರ್ಥಿಗಳ ಮೇಲೆ ವರ್ಚಸ್ಸು ಬೀರಲಾರೆ. ಅವರು ತನ್ನನ್ನು ಧಿಕ್ಕರಿಸಿ ನಡೆಯಬಹುದು ಎಂದು ಅವನ ಆಂತರ್ಯದ ಅಂಜಿಕೆ. ಅವನು ಇದನ್ನು ಬಹಿರಂಗವಾಗಿ ಒಪ್ಪುತ್ತಾನೆಂದಲ್ಲ. ತಾನು ಕಾಲೇಜು ಪ್ರೊಫೆಸರನಾಗಲು ಯತ್ನಿಸದಿದ್ದುದಕ್ಕೆ ಅವನು ಸಾವಿರದಾಒಂದು ಕಾರಣಗಳನ್ನು ಹೇಳುತ್ತಾನೆ. ಕಾಲೇಜುಗಳಲ್ಲಿರುವ ಕೊಳಕು, ನೌಕ



ರಿಗೆ ಆಯ್ಕೆ ಮಾಡುವವರಲ್ಲಿರುವ ಕುಹಕ, ಉಮೇದ್ವಾರರು ಹಚ್ಚುವ ವಶೀಲಿ ಇವೆಲ್ಲ ಸೋದಾಹರಣವಾಗಿ ಅವನ ಬಾಯಿಂದ ಗಾಥೆಯಾಗಿ ಹರಿಯುತ್ತವೆ. ಆದರೆ ಅವನ ಒಳಕೊರಗು ತನ್ನಲ್ಲಿ ಪ್ರೊಫೆಸರಗಿರಿಯನ್ನು ನಿಸ್ತರಿಸುವ ಯೋಗ್ಯತೆಯಿಲ್ಲೆಂಬುದೇ ಆಗಿದೆ.

ಈಗ, ಭೀಮರಾಯಾಚಾರ್ಯ ಸಾಮಾನ್ಯರಿಗಿಂತ ತುಸು ಕುಳ್ಳನಿರುವುದು ಸುಳ್ಳಲ್ಲ. ಆದರೆ ತೀರ ಕುಳ್ಳನೆನ್ನಲು ಬಾರದು. ಅಲ್ಲದೆ ಎಷ್ಟು ಜನ ಕುಳ್ಳರು ಉತ್ತಮ ಪ್ರೊಫೆಸರರಾಗಿಲ್ಲ? ಕುಳ್ಳತನವೊಂದೇ ಒಬ್ಬನ ಭವ್ಯತೆಯನ್ನು ನಿರ್ಧರಿಸುವುದಿಲ್ಲ. ಆದರೆ ಭೀಮರಾಯಾಚಾರ್ಯ ಅದನ್ನು ನೆನೆಯುವುದೇ ಇಲ್ಲ. ಕುಳ್ಳನಾದ್ದರಿಂದ ತನ್ನ ಜೀವನವೇ ವ್ಯರ್ಥವೆಂಬ ತೀರ್ಮಾನಕ್ಕೆ ಬಂದು ಅವನು ಯತ್ನವನ್ನೇ ಮಾಡದೆ ಇದ್ದಲ್ಲೇ ಕೊಳೆಯುತ್ತಿದ್ದಾನೆ.

ಮನಶ್ಶಾಸ್ತ್ರಜ್ಞರು ಇನ್‌ಫೀರಿಯಾರಿಟಿ ಕಾಂಪ್ಲೆಕ್ಸ್ ಅಥವಾ ಸ್ವೈಚ್ಯಾನುಸಂಧಾನ ಎಂದು ಕರೆಯುವುದು ಈ ಭಾವನೆಯನ್ನೇ. ಸ್ವೈಚ್ಯಾನುಸಂಧಾನ ಪೀಡಿತರಿಗೆ ತಮ್ಮ ವಿಷಯಕ್ಕೆ ಒಳ್ಳೇ ಅಭಿಪ್ರಾಯವಿರುವುದಿಲ್ಲ. ತಾವು ಇತರರಿಗಿಂತ ಕಡಿಮೆ ಯೋಗ್ಯತೆಯವರೆಂಬ ನಂಬಿಕೆ ಅವರಲ್ಲಿ ಬೇರೂರಿರುತ್ತದೆ. ಇದು ಅವರನ್ನು ಶಾಶ್ವತವಾಗಿ ಕುಗ್ಗಿಸಿಬಿಡುತ್ತದೆ. ಅದೊಂದು ವಿಷಾದಕರ ಮನೋಭ್ರಾಂತಿ.

ಸ್ವೈಚ್ಯಾನುಸಂಧಾನವುಳ್ಳವರು ಜಗತ್ತನ್ನು ವಿಕೃತದೃಷ್ಟಿಯಿಂದ ನೋಡುತ್ತಾರೆ. ತಮ್ಮ ಅಯಶಸ್ವಿ ಜೀವನದ ದೆಸೆಯಿಂದ ಅವರು ಸುತ್ತಮುತ್ತಲಿನವರನ್ನು ದ್ವೇಷಿಸತೊಡಗುತ್ತಾರೆ. ತಮ್ಮ ಮೇಲೆಯೇ ಅವರಿಗಿರುವ ತಿರಸ್ಕಾರವು ಪರರ ಮೇಲಿನ ತಿರಸ್ಕಾರವಾಗಿ ಅವರ ಬುದ್ಧಿಯಲ್ಲಿ ಪ್ರತಿಬಿಂಬಿತವಾಗುತ್ತದೆ. ಅವರು ಜನರನ್ನು ದ್ವೇಷಿಸುವುದರಿಂದ ಜನರೂ ಅವರನ್ನು ತಿರಸ್ಕರಿಸುತ್ತಾರೆ. ಹೀಗಾಗಿ ಅವರು ಜನರಲ್ಲಿ ಅಪ್ರಿಯ ವ್ಯಕ್ತಿಗಳಾಗುತ್ತಾರೆ.

ಸ್ವೈಚ್ಯಾನುಸಂಧಾನ ಗ್ರಸ್ತರಲ್ಲಿ ಮತ್ತಷ್ಟು ಕನಿಕರದ ಸಂಗತಿಯೆಂದರೆ ಅವರು ನಿಜವಾಗಿ ಯೋಗ್ಯತಾಹೀನರಾಗಿರುವುದಿಲ್ಲ. ಒಂದು ಅಮೇರಿಕನ್ ಕಾಲೇಜಿನಲ್ಲಿ ವಿದ್ಯಾರ್ಥಿಗಳ ವ್ಯಕ್ತಿತ್ವಗಳ ಪರಿಶೀಲನೆ ನಡೆಸಲಾಯಿತು. ಅವರಲ್ಲಿ ಅರ್ಧಕ್ಕೂ ಹೆಚ್ಚು ಜನರು ತಾವು ಬುದ್ಧಿಶಕ್ತಿಯಲ್ಲಿ ಕೊರತೆಯುಳ್ಳವರೆಂದು ನಂಬಿಕೊಂಡವರೇ ಇದ್ದರು. ಆದರೆ ಅವರೆಲ್ಲರೂ ನಿಜವಾಗಿ ಬುದ್ಧಿ ಹಾಗು ಶರೀರಸೌಷ್ಠವದಲ್ಲಿ ಸಾಮಾನ್ಯರಿಗಿಂತ ಮೇಲ್ಮಟ್ಟದವರೇ ಇದ್ದರು. ಅವರಲ್ಲಿದ್ದ ಕೊರತೆಯೆಂದರೆ ಆತ್ಮವಿಶ್ವಾಸದ್ದು ಮಾತ್ರ.

ತದ್ವಿರುದ್ಧವಾಗಿ ಬುದ್ಧಿಯಲ್ಲಿ ಕೊರತೆಯುಳ್ಳವರಾದ ಹುಚ್ಚರೂ ಮಂಕರೂ ಮೂಢರೂ ತಾವು ಘನ ಬುದ್ಧಿಶಾಲಿಗಳೆಂದೇ ನಂಬಿರುವುದು ಕಂಡುಬಂತು!

ಇದು ಸಹಜವೇ. ಯಾಕೆಂದರೆ ಪರರಲ್ಲಿರುವ ಗುಣಗಳನ್ನು ಗುರುತಿಸಿ ತಮ್ಮದರೊಡನೆ ಹೋಲಿಸಬೇಕಾದರೆ ಬುದ್ಧಿಶಕ್ತಿ ಹರಿತವಾಗಿರಬೇಕಲ್ಲವೆ? ಆದರೆ ಸ್ವೈಚ್ಯಾನುಸಂಧಾನದ ಅಭಿಶಾಪವೆಂದರೆ ಅವರು ಅನ್ಯರಲ್ಲಿರುವ ಒಂದೆರಡು ವಿಶಿಷ್ಟ ಗುಣಗಳನ್ನು ಮಾತ್ರ ಆರಿಸಿಕೊಂಡು ತಮ್ಮಲ್ಲಿ ಅವುಗಳ ಕೊರತೆ ಕಂಡು ತಾವು ಇಡಿಯಾಗಿ ಇತರರಿಗಿಂತ ಅಧಮರೆಂದು ಭ್ರಮೆ ಹಚ್ಚಿಕೊಳ್ಳುತ್ತಾರೆ. ಇದರಿಂದ ಅವರ ಮನಸ್ಸು ಸಂಶಯಗ್ರಸ್ತವಾಗುತ್ತದೆ. ಆಗ ಅವರಿಗೆ ತಮ್ಮ ಸ್ವಂತದ ಇತರ ಹಿರಿಯ ಗುಣಗಳು ಕಾಣಿಸುವದಿಲ್ಲ. ಅವು ಅರಣ್ಯಕುಸುಮಗಳಂತೆ ವ್ಯರ್ಥವಾಗುವ ಪ್ರಸಂಗ ಬರುತ್ತದೆ.

ಬುದ್ಧಿಶಾಲಿ ಜನರು ಹೀಗೆ ಯಾಕೆ ತಮ್ಮ ಯೋಗ್ಯತೆಯನ್ನು ಅರಿಯದಾಗುತ್ತಾರೆ? ಅವರ ಆತ್ಮವಿಶ್ವಾಸ ಯಾಕೆ ಹಾರುತ್ತದೆ? ಇದಕ್ಕೆ ಜೇಮ್ಸ್ ಬೆಂಡರ ಹಾಗು ಲೀ ಗ್ರಾಹ್ಯಾಮರು ತಮ್ಮ ಪುಸ್ತಕದಲ್ಲಿ ಹೀಗೆ ಕಾರಣ ಕೊಡುತ್ತಾರೆ:

- **ಇತರರ ಪ್ರೇಮ ಮತ್ತು ಪ್ರಶಂಸೆಗಾಗಿ ಅವರು ಮಿತಿಮೀರಿ ಹಾತೊರೆಯುತ್ತಾರೆ.** ಅವರಿಗೆ ಅಂಥ ಪ್ರಶಂಸಾಪಾಠಕರು ದೊರೆಯದೇ ಹೋದರೆ ತಮ್ಮಲ್ಲೇನೋ ದೋಷವಿದೆಯೆಂದುಕೊಂಡು ಮುದುರಿಕೊಳ್ಳುತ್ತಾರೆ.

• **ಅವರು ತಮ್ಮಿಂದ ಘನ ಕಾರ್ಯಸಾಧನೆಯಾಗುವದೆಂಬ ನಿರೀಕ್ಷೆ ಇಟ್ಟುಕೊಂಡಿರುತ್ತಾರೆ.** ಅದು ಫಲಿಸದಿದ್ದರೆ ಅವರಿಗೆ ತಾವು ನಿರರ್ಥಕರೆಂಬ ಭಾವನೆಯುಂಟಾಗುತ್ತದೆ. ಪ್ರಪಂಚದಲ್ಲಿ ಸರ್ವಾಂಗ ಪರಿಪೂರ್ಣನಾದ ಮನುಷ್ಯನಿಲ್ಲೆಂದು ಅವರು ಮನಗಂಡರೆ ಒಳಿತು.

• **ತಮಗೊದಗಿದ ಸೋಲುಗಳನ್ನು ಅವರು ಮಿತಿಮೀರಿ ಮನಸಿಗೆ ಹಚ್ಚಿಕೊಂಡಿರುತ್ತಾರೆ.** ಇದರಿಂದ ಗೆಲ್ಲುವ ಯೋಗ್ಯತೆ ತಮ್ಮಲ್ಲಿಲ್ಲೆಂದು ಅವರು ಯತ್ನಗಳನ್ನೇ ನಿಲ್ಲಿಸಿಬಿಡುವರು. ಸೋಲುಗಳಿಲ್ಲದೆ ಯಾರಿಗೂ ಗೆಲವು ಬರುವದಿಲ್ಲೆಂದು ಅವರು ಮರೆಯುತ್ತಾರೆ.

• **ಇತರರ ಗೆಲವುಗಳಿಗೆ ಅವರು ಮಿತಿಮೀರಿ ಮಹತ್ವ ಕೊಡುತ್ತಾರೆ.** ತಮ್ಮ ಓರಗೆಯವರು ತಮಗಿಂತ ಮೇಲೇರುವುದನ್ನು ಕಂಡು ತಾವು ತುಚ್ಛರೆಂದು ಅವರಿಗನಿಸುತ್ತದೆ. ಮುಂದೆ ಪ್ರಯತ್ನಗಳಿಗೇ ಅವರ ಮನವೊಗ್ಗುವುದಿಲ್ಲ.

• **ಅವರು ಕಡ್ಡಿಯನ್ನು ಗುಡ್ಡ ಮಾಡಿಕೊಂಡು ಕೊರಗುತ್ತಾರೆ.** ಇದರಿಂದ ಕ್ಷುಲ್ಲಕ ಘಟನೆಗಳೂ ಅವರ ಮನಸ್ಸನ್ನು ಕೊರೆದು ನಿರ್ಬಲಗೊಳಿಸುತ್ತವೆ.

• **ಅವರಲ್ಲಿ ವಿನೋದ ರಸಿಕತೆ ಇರುವುದಿಲ್ಲ.** ಇಂಥವರು ಇನ್ನೊಬ್ಬರನ್ನು ಕುರಿತು ಯಾರಾದರೂ ಹಾಸ್ಯಮಾಡಿದರೆ ಧಾರಾಳವಾಗಿ ನಗುವರಾದರೂ ತಮ್ಮನ್ನು ಚೇಷ್ಟೆ ಮಾಡಿದರೆ ಮುಖ ಕೆಂಜಗ ಮಾಡುತ್ತಾರೆ.

• **ಅವರಲ್ಲಿ ಯಾವದಾದರೂ ನೆವದಿಂದ ಶ್ರಮ ತಪ್ಪಿಸಿಕೊಳ್ಳುವ ಪ್ರವೃತ್ತಿಯಿರುತ್ತದೆ.** ಅವರಿಗೆ ಒಂದೆರಡು ಸೋಲು ಬಂದರೆ ಅದೇ ಸಾಲುತ್ತದೆ. ತಾವು ಅಯಶಸ್ವಿಗಳಾದೆವೆಂದೂ ಮುಂದೆ ಯತ್ನಿಸಿ ಫಲವಿಲ್ಲೆಂದೂ ಸ್ವಸ್ಥರಾಗುತ್ತಾರೆ.

ಅನೇಕ ಕುಶಲಮತಿಗಳನ್ನು ನಿರಂತರ ಸೋಲಿಗೆ ಗುರಿಪಡಿಸುವ ಸ್ವೈಚ್ಛ್ಯಾನುಸಂಧಾನವನ್ನು ನಿವಾರಿಸುವ ಬಗೆಯಾವುದು ?

ತಮ್ಮ ಸ್ವೈಚ್ಛ್ಯಾನುಸಂಧಾನವನ್ನು ನಿರೋಧಿಸಲು ಕೆಲವರು ಶೌರ್ಯದ ಸುಳ್ಳು ಮುಖವಾಡ ಧರಿಸುವರು. ಮತ್ತು ವಿರಕ್ತಿಯ ಸೋಗು ಹಾಕುವರು. ವ್ಯಾಪಾರದಲ್ಲಿ ಹಾನಿಹೊಂದಿದವರು ದೊಡ್ಡ ಲಾಭ ಹೊಡೆದಿದ್ದೇವೆಂಬಂತೆ ಮಾತಾಡುವುದನ್ನೂ ಕುರೂಪಿಯು ಸುಂದರಿಗಿಂತಲೂ ವೈಯಾರ ಮಾಡುವುದನ್ನೂ ಹೇಡಿಯು ತನ್ನ ಸಾಹಸದ ಕಥೆ ಹೇಳುವುದನ್ನೂ ಎಲ್ಲರೂ ನೋಡಿರಬಹುದು. ಇಂಥವರು ತಮ್ಮ ಸ್ವೈಚ್ಛ್ಯ ಭಾವವನ್ನು ತಮ್ಮಿಂದಲೂ ಪರರಿಂದಲೂ ಮರೆಮಾಚಲು ಹವಣಿಸುತ್ತಿದ್ದಾರೆಂದು ಅರ್ಥ. ಆದರೆ ಗುಟ್ಟು ರಟ್ಟಾಗುವ ಭಯ ಯಾವಾಗಲೂ ಅವರಿಗಿರುವುದರಿಂದ ಅವರಿಗೆ ಮನಶ್ಶಾಂತಿ ಲಭಿಸಲಾರದು.

ಜನರು ಮೂಢರು, ಮೂರ್ಖರು. ಅವರೊಡನೆ ಸಂಪರ್ಕವೇ ಬೇಡವೆಂದು ಜಗತ್ತಿನಿಂದ "ನಿವೃತ್ತಿ" ಹೊಂದಿ "ಚಿಂತನೆ" ನಡೆಸುತ್ತಿರುವುದಾಗಿ ಹೇಳುವವರೂ ತಮ್ಮ ಈ ಒಳಕೊರತೆ ಮುಚ್ಚಿಕೊಳ್ಳುವವರೇ. ಜಗತ್ತಿನ ಹೋರಾಟದಲ್ಲಿ ತಮಗೆ ಯಶ ದೊರೆಯದೆಂಬ ಅಂಜಿಕೆಯೇ ಅವರ ವಿರಕ್ತಿಯ ಮೂಲ. ಈ ಲೇಖದ ಪ್ರಾರಂಭದಲ್ಲಿ ಉದಾಹರಿಸಿದ ಪ್ರಕರಣ ಇಂಥದೇ.

ಆದರೆ ಇವೆರಡೂ ತೊಡಕನ್ನು ಎದುರಿಸುವ ಉಪಾಯಗಳಲ್ಲ. ಅವು ನಿಮ್ಮ ಪ್ರಗತಿಯನ್ನು ಸಾಧಿಸಲಾರವು. ಅದಕ್ಕೆ ಉತ್ತಮ ಉಪಾಯವೆಂದರೆ ನಿಮ್ಮ ಆತ್ಮವಿಶ್ವಾಸವನ್ನು ಹಾರಿಸಲು ಕಾರಣವಾದ ಸಂಗತಿಯನ್ನು ಗೊತ್ತುಹಚ್ಚಿ ನೇರವಾಗಿ ಎದುರಿಸಿ ಹೋರಾಡುವುದಾಗಿದೆ.

ತಾನು ಮದುವೆಯಾಗಬಯಸಿದ ಹುಡುಗಿಯು ತನ್ನ ಬಡಕಲು ದೇಹ ನೋಡಿ ಅಸಂತುಷ್ಟಿ ತೋರಿಸಿದಳೆಂದು ಕೇಳಿ ವ್ಯಥಿತನಾದ ಒಬ್ಬ ತರುಣನು ಈ ದಿಟ್ಟ ಹಾದಿ ಅನುಸರಿಸಿದನು. ಕೆಲ ಕಾಲ ಅವನಿಗೆ ತನ್ನನ್ನು ರೂಪವತಿಯರು ಎಂದೂ ಮೆಚ್ಚಲಾರರೆಂದು ಅನಿಸಿ ನಿರ್ವಿಣ್ಣತೆ ಬಂದಿತ್ತು. ಆದರೆ ಒಂದು ದಿನ ಅವನು ಮನಸು ಗಟ್ಟಿ ಮಾಡಿ ವ್ಯಾಯಾಮದಲ್ಲಿ ತೊಡಗಿದನು. ಒಂದು ವರುಷದೊಳಗೆ ಅವನ ದೇಹ ಪುಷ್ಟ

ವಾಯಿತು. ಅವನನ್ನು ಟೀಕಿಸಿದ್ದ ಹುಡುಗಿ ಅವನನ್ನು ವರಿಸಲು ಸಿದ್ಧಳಾದಳು. ಆದರೆ ಅವನಿಗೆ ಅವಳಲ್ಲಿ ಆಸ್ಥೆ ಉಳಿದಿರಲಿಲ್ಲ. ಆದರೂ ಅವಳು ಅವನ ಹೇಡಿತನವನ್ನು ಓಡಿಸಲು ಪ್ರೇರಕಳಾಗಿದ್ದಳು.

ಪ್ರತ್ಯಕ್ಷ ಕ್ರಮದಿಂದ ನೈಚ್ಯಾನುಸಂಧಾನವನ್ನೋಡಿಸಿ ಅದ್ಭುತ ಯಶ ಗಳಿಸಿದವರಲ್ಲಿ ಚರ್ಚಿಲ್ಲರ ಉದಾಹರಣೆ ಪ್ರಸಿದ್ಧವಾಗಿದೆ. ಅವರಿಗೆ ಬಾಲ್ಯದಲ್ಲಿ ಉಗ್ಗು ಇತ್ತು. ಆದರೆ ಅವರು ಅದನ್ನೋಡಿಸಲು ಹಟ ತೊಟ್ಟರು. ಅವರ ಮಹಾಯತ್ನವು ಸಫಲವಾದದ್ದಷ್ಟೇ ಅಲ್ಲದೆ ಅವರ ಸಾಹಸದ ಒತ್ತಡವು ಅವರನ್ನು ತಮ್ಮ ಗುರಿಗಿಂತ ಎಷ್ಟೋ ಮುಂದೆ ಒಯ್ದು ಜಗತ್ತಿನ ಅತಿಶ್ರೇಷ್ಠ ವಾಗ್ಮಿಯಾಗಿ ಮಾಡಿತು. ಸೋಲಿನಿಂದ ವಿಷಣ್ಣವಾಗಿದ್ದ ಬ್ರಿಟಿಶ ರಾಷ್ಟ್ರವು ಎರಡನೇ ಮಹಾಯುದ್ಧದಲ್ಲಿ ಗೆಲ್ಲುವ ಸಾಹಸಕ್ಕಣಿಯಾದದ್ದು ಚರ್ಚಿಲ್ಲರ ವಾಗ್ವೈಭವದ ಫಲವಾಗಿಯೇ. ನೈಚ್ಯಾನುಸಂಧಾನವನ್ನು ಗೆಲ್ಲುವ ಸಾಹಸದಲ್ಲೇ ಎಷ್ಟೋ ಮಹಾಪುರುಷರು ಪ್ರಪಂಚದಲ್ಲಿ ಉನ್ನತಿಗೇರಿದ್ದುಂಟು.

ನಿಮ್ಮಲ್ಲಿ ನೈಚ್ಯಾನುಸಂಧಾನವನ್ನು ಉಂಟು ಮಾಡಿದ ಕಾರಣ ಅಪರಿಹಾರ್ಯವಿರಬಹುದು. ಬೈರನ್ನನ ಕುಂಟುಕಾಲಿನ ಹಾಗೆ. ಆದರೆ ಬೈರನ್ನನು ಅದಕ್ಕೆ ಸೊಪ್ಪು ಹಾಕಲಿಲ್ಲ. ತನಗೆ ಓಟದಲ್ಲಿ, ಪರ್ವತಾರೋಹಣದಲ್ಲಿ ಯಶ ಸಿಗಲಾರದೆಂದು ಅವನಿಗೆ ಖಂಡಿತವಿತ್ತು. ಕವಿಶ್ರೇಷ್ಠ ಬೈರನ್ನನು ಅದಕ್ಕಾಗಿ ತಲೆ ಹಿಡಿದು ಕೂಡ್ರಲಿಲ್ಲ. ಅವನು ಓಟದ ಬದಲು ಈಸುವುದರಲ್ಲಿ ಪ್ರಾವೀಣ್ಯ ಗಳಿಸಿದನು. ಕೊನೆಗೆ ಅವನು ಎಂಥ ಈಸುಗಾರನಾದನೆಂದರೆ ಆಧುನಿಕ ಕಾಲದಲ್ಲಿ ಹೆಲೆಸ್ಪಾಂಟ ಸಮುದ್ರವನ್ನು ಈಸಿ ಪಾರಾದವರಲ್ಲಿ ಬೈರನ್ನನೇ ಮೊದಲಿಗನೆನಿಸಿದನು.

ತತ್ವಜ್ಞಾನಿಶ್ರೇಷ್ಠನಾದ ಇಮ್ಯಾನ್ಯುವಲ್ ಕ್ಯಾಂಟನು ಕುರೂಪಿಯಾಗಿದ್ದನು. ಆದರೆ ಅವನು ಈ ಕೊರತೆಯನ್ನು ಬೇರೆ ತರದಿಂದ ತುಂಬಿಕೊಂಡನು. ಬುದ್ಧಿ ಪ್ರಪಂಚದತ್ತ ಅವನು ಕೇಂದ್ರೀಕರಿಸಿದ್ದರಿಂದ Critique of Pure Reason ದಂಥ ಗ್ರಂಥರತ್ನ ಹುಟ್ಟಿತು. ಕುರೂಪಿ ಬರೆದದ್ದೆಂದು ಯಾರೂ ಈ ಗ್ರಂಥವನ್ನು ತಿರಸ್ಕರಿಸಲಿಲ್ಲ. ಒಂದು ದೋಷವನ್ನು ತುಂಬಿಕೊಳ್ಳಲು ಇನ್ನೊಂದು ಗುಣವನ್ನು ಬೆಳಸಿ ಸಾರ್ಥಕ್ಯ ಪಡೆಯಲು ಶಕ್ಯವುಂಟು.

ಚರ್ಚಿಲ್ಲರ ಅಥವಾ ಕ್ಯಾಂಟನ ದಾರ್ಢ್ಯವಿಲ್ಲದವರು ತಮ್ಮ ಇತಿ ಮಿತಿಗಳನ್ನೊಪ್ಪಿಕೊಂಡು ಕಾರ್ಯಪ್ರವೃತ್ತರಾಗಬೇಕು. ಅಂದಾಕ್ಷಣ ಅವುಗಳಿಗೆ ಸೋಲಬೇಕೆಂತಲ್ಲ. ಸಂಗೀತ ವಿದ್ವಾನ್ ವಾಸುದೇವಾಚಾರ್ಯರು ಪಿಟೀಲು ವಿದ್ವಾಂಸರೊಬ್ಬರ ಕಥೆ ಹೇಳಿದ್ದಾರೆ. ಇವರು ಯಾವುದೋ ಕಚೇರಿಯಲ್ಲಿ ಬಾರಿಸಲು ಕುಳಿತಾಗ ಶತ್ರುಗಳ ಕೈವಾಡದಿಂದ ಮೂರು ತಂತಿಗಳು ಹರಿದವಂತೆ. ಆ ವಿದ್ವಾಂಸರು ತಮ್ಮ ಪಿಟೀಲಿನ ಅವಸ್ಥೆಯನ್ನು ಕ್ಷಣಕಾಲ ನಿರೀಕ್ಷಿಸಿದರು. ಆದರೆ ಅದನ್ನು ಕೆಳಗಿಡಲಿಲ್ಲ. ಒಂದೇ ತಂತಿಯ ಮೇಲೆ ಸಾಧ್ಯವಿದ್ದಷ್ಟು ಕೌಶಲದಿಂದ ಬಾರಿಸಿ ಕಚೇರಿಯನ್ನು ನಿಸ್ತರಿಸಿಯೇ ಬಿಟ್ಟರು. ಅವರನ್ನು ಹಾಸ್ಯ ಮಾಡಲು ಬಂದವರು ಚಪ್ಪಾಳೆ ಬಾರಿಸಿದರು.

ನಿಮ್ಮ ಸೋಲುಗಳು ಅಥವಾ ತಪ್ಪುಗಳು ನಿಮ್ಮಲ್ಲಿ ಅಧೀರತೆಯನ್ನುಂಟುಮಾಡಿದಾಗ ನಿಮಗಾದ ಗೆಲವುಗಳನ್ನು ನೆನೆದುಕೊಳ್ಳಿರಿ. ಕೆಲವಾದರೂ ನಿಮ್ಮ ನೆನಪಿಗೆ ಬಂದೇ ಬರುವವು. ಆಗ ನಿಮಗೆ ಆತ್ಮಗೌರವ ಹೆಚ್ಚಾಗುವುದೆಂದು ಬೆಂಡರ ಹಾಗೂ ಗ್ರಾಹ್ಯಾಮರು ಸೂಚಿಸುತ್ತಾರೆ.

ನಿಜವಾಗಿ ನೋಡಿದರೆ ನೀವು ನಂಬಿದಷ್ಟು ನೀವು ತುಚ್ಛರಲ್ಲ, ಅಪ್ರಯೋಜಕರಲ್ಲ, ಕುರೂಪಿಗಳಲ್ಲ, ಪ್ರತಿಭಾಹೀನರಲ್ಲ. ನಿಮ್ಮಲ್ಲಿ ಒಂದಲ್ಲ ಒಂದು ಗುಣ ಇದ್ದೇ ಇದೆ. ಇಲ್ಲದಿದ್ದರೆ ನಿಮ್ಮನ್ನು ಯಾರೂ ನೌಕರಿಗಿಟ್ಟುಕೊಳ್ಳುತ್ತಿದ್ದಿಲ್ಲ, ನಿಮ್ಮ ಗೆಳೆತನ ಮಾಡುತ್ತಿದ್ದಿಲ್ಲ, ನಿಮ್ಮನ್ನು ಪ್ರೀತಿಸುತ್ತಿದ್ದಿಲ್ಲ. ನಿಮ್ಮಲ್ಲಿರುವ ಕೊರತೆಯನ್ನು ಧ್ಯಾನಿಸುವ, ಕೊರಗುವ ಅರೆವಾಸಿ ಸಮಯದಲ್ಲಿ ನೀವು ನಿಮ್ಮಲ್ಲಿನ ಗುಣಗಳನ್ನು ಗುರುತಿಸಬಲ್ಲಿರಿ. ಅದನ್ನು ಬೆಳಸಿದರೆ ನಿಮ್ಮ ಅವಗುಣ ತಾನಾಗಿ ಮುಚ್ಚಿಹೋಗುವುದು.

**ಈ ಹಕ್ಕಿ ಬೆಳುದಿಂಗಳನ್ನು ಕುಡಿಯುತ್ತದಂತೆ!**

# ಚಕೋರ

ಚಕೋರ ಪಕ್ಷಿಗೂ ಚಂದ್ರನಿಗೂ ಬಿಡಿ ಸಲಾರದ ಬಾಂಧವ್ಯ. ಆ ಹಕ್ಕಿಯ ಅನ್ನವೇ ಬೆಳುದಿಂಗಳಂತೆ. ಶರದೃತುವಿನ ಶೀತಲ ಚಂದ್ರ ಪ್ರಕಾಶದಲ್ಲಿಯ ಅಮೃತ ಕಣಗಳನ್ನು ಹೆಕ್ಕಿ ಹೆಕ್ಕಿ ಅದು ನುಂಗುವು ದಂತೆ. ಭಾರತದ ಪುರಾತನ ಕವಿಗಳಿಂದಾ ರಂಭಿಸಿ ಇಂದಿನವರ ವರೆಗೆ ಎಲ್ಲರೂ ಚಕೋರ ಚಂದ್ರಮರ ಈ ಬಾಂಧವ್ಯದ ವರ್ಣನೆ ಮಾಡಿದವರೇ. ಕನ್ನಡ ಕವಿಗ ಳಂತೂ ಅದನ್ನು ಜೊನ್ನವಕ್ಕಿಯೆಂದೇ ಹೊಗಳಿದ್ದಾರೆ. ಬೆಳುದಿಂಗಳ ಮೇಲೆ ಅದರ ಪ್ರೀತಿಯೆಷ್ಟೆಂದರೆ ಅದನ್ನು ಕುಡಿದು ಚಕೋರಾಂಗನೆಯರಿಗೆ ಮದವೇರಿಬಿಡುತ್ತ ದೆಂದು ಒಬ್ಬ ಕವಿ ಹೇಳುತ್ತಾನೆ. ಕಾಲಿ-ದಾಸನ ರಾಮನು ಸೀತೆಯನ್ನು ಚಕೋ-ರಾಕ್ಷಿಯೆಂದು ಸಂಬೋಧಿಸುತ್ತಾನೆ.

ಇಷ್ಟು ಕವಿಪ್ರಿಯವಾದ ಈ ಹಕ್ಕಿಯ ಬದುಕು ನಮ್ಮ ಕುತೂಹಲ ಕೆರಳಿಸುವುದು ಸಹಜ ಪಕ್ಷಿಶಾಸ್ತ್ರಜ್ಞರ ಪರೀಕ್ಷಕ ದೃಷ್ಟಿಯಿಂದ ಅದೇನೂ ಪಾರಾಗಿಲ್ಲ. ಆದರೆ ಅದು ಚಂದ್ರ ಪ್ರಕಾಶದ ಅಮೃತ ಪಾನ ಮಾಡುವ ರಹಸ್ಯ ವನ್ನು ಮಾತ್ರ ಅವರು ಭೇದಿಸಲು ಶಕ್ತರಾಗಿಲ್ಲ. ಅದು ಹಾಗೆ ಮಾಡಿದ್ದನ್ನು ಅವರೆಲ್ಲಿಯೂ ನೋಡಿಲ್ಲ. ಬದಲಿಗೆ ಅಫಗಾಣಿಸ್ತಾನದಲ್ಲಿ ಇದನ್ನು "ಅಗ್ನಿ ಭಕ್ಷಕ" ಎಂಬರ್ಥದ ಹೆಸರಿ-ನಿಂದ ಕರೆಯುತ್ತಾರೆ!

ಲೀನಿಯಸ್ ಎಂಬ ಪಕ್ಷಿ ಶಾಸ್ತ್ರಜ್ಞನು ಪಕ್ಷಿ ಜಾತಿಗಳಲ್ಲಿ '' ಗೇಮ ಬರ್ಡ '' ಎಂಬುದೊಂದು ವರ್ಗವನ್ನು ಕಲ್ಪಿಸಿದ್ದಾನೆ. ಈ ಜಾತಿಯ



ಪಕ್ಷಿಗಳಲ್ಲಿ ಸರ್ವಪರಿಚಿತವಾದ ಹಕ್ಕಿಯೆಂದರೆ ಕೋಳಿ. ಚಕೋರಪಕ್ಷಿಯೂ ಈ "ಗೇಮ ಬರ್ಡ್ಸ" ಜಾತಿಯದೇ ಆಗಿದೆ. ಕೋಳಿ ತನ್ನ ಮೂಲ ವಾಸಸ್ಥಾನವಾದ ಅಡವಿಯನ್ನು ಬಿಟ್ಟು ಊರು ಸೇರಿ ಮಾನವನಿಗೆ ಹೊಂದಿಕೊಂಡಿದೆ. ಚಕೋರ ಪಕ್ಷಿ ಹಾಗೆ ಮಾಡಿಲ್ಲ.

ಈ ಕುಕ್ಕುಟಕುಲಕ್ಕೆ ದೇವರು ಸೌಂದರ್ಯವನ್ನು ಉದಾರಹಸ್ತದಿಂದ ದಾನಮಾಡಿದ್ದಾನೆ. ಈ ಕುಲದಲ್ಲಿ ಹತ್ತಿಪ್ಪತ್ತು ಪ್ರಕಾರದ ಹಕ್ಕಿಗಳಿವೆ. ಇವುಗಳಿಗೆ ೨೫ ಬಗೆಯ ಬೇರೆ ಬೇರೆ ಬಣ್ಣಗಳು ಇವೆ. ಕೆಲವದರ ತಲೆಯ ಮೇಲೆ ಬಣ್ಣದ ತುರಾಯಿ ಇರುವದಾದರೆ ಕೆಲವಕ್ಕೆ ಸುಂದರವಾದ ಬಾಲ ( ಪುಚ್ಛ ) ಗಳಿವೆ. ಈ ಎಲ್ಲ ಹಕ್ಕಿಗಳು ಯಾವಾಗಲೂ ಮೈತುಂಬಿಕೊಂಡು ಪುಷ್ಟವಾಗಿ ಕಾಣಿಸುತ್ತವೆ.

ಪಕ್ಷಿಗಳ ಬೇರೆ ಬೇರೆ ಜಾತಿಗಳಲ್ಲಿ ಬೇರೆ ಬೇರೆ ಸಾಮಾಜಿಕ ರೀತಿಗಳು ರೂಢವಾಗಿವೆ. ಪಾರಿವಾಳ ವರ್ಗದ ಹಕ್ಕಿಗಳೆಲ್ಲ ನಿಷ್ಠೆಯಿಂದ ಏಕ ಪತ್ನೀವ್ರತವನ್ನು ಪಾಲಿಸುತ್ತವೆ. ಕೋಳಿಯ ಕುಲದಲ್ಲಿ ಬಹುಪತ್ನೀತ್ವವೇ ಹೆಚ್ಚು.

ದಕ್ಷಿಣ ಯುರೋಪದಲ್ಲಿಯ ಪಾರಟ್ರಿಜ್ ಹಕ್ಕಿಗೂ ಚಕೋರ ಪಕ್ಷಿಗೂ ತುಂಬ ಸಾಮ್ಯವಿರುವದರಿಂದ ಇಂಗ್ಲೀಷಿನಲ್ಲಿ ಈ ಹಕ್ಕಿಗೆ "ಗ್ರೀಕ್ ಪಾರಟ್ರಿಜ್" ಎಂಬ ಹೆಸರು ಬಿದ್ದಿದೆ. ಭಾರತದಲ್ಲಿ ಚಕೋರ ಪಕ್ಷಿ ಪ್ರಾಮುಖ್ಯವಾಗಿ ಹಿಮಾಲಯದ ಬರ್ಫಾಚ್ಛಾದಿತ ಭಾಗದಿಂದ ಹಿಡಿದು ತೀರ ಕೆಳಗಿನ ತಪ್ಪಲು ಪ್ರದೇಶದ ವರೆಗೆ ಎಲ್ಲೆಡೆಗಳಲ್ಲೂ ಕಾಣಸಿಗುತ್ತದೆ. ಪಂಜಾಬ ಮತ್ತು ಅಫಗಾನಿಸ್ತಾನಗಳಲ್ಲೂ ಈ ಹಕ್ಕಿ ಇದೆ.

ಚಕೋರ ಪಕ್ಷಿ ಚುಂಚಿನಿಂದ ಬಾಲದ ವರೆಗೆ ೧೫ ಇಂಚು ಉದ್ದವಿರುತ್ತದೆ. ಬಾಯಿ ಮತ್ತು ಗದ್ದ ತಾಮ್ರವರ್ಣದವಿದ್ದು ಚುಂಚು ಮತ್ತು ಕಾಲು ಅಚ್ಚ ಕೆಂಪು ಬಣ್ಣದವಿರುತ್ತವೆ. ಹುಬ್ಬುಗಳಲ್ಲಿ ಹಸುರು ಬಣ್ಣದ ಛಾಯೆ ಇರುತ್ತದೆ. ಹೆಣ್ಣು ಮತ್ತು ಗಂಡು ಹಕ್ಕಿಗಳಲ್ಲಿ ವಿಶೇಷ ಭೇದವಿರುವದಿಲ್ಲ. ಆದರೆ ಗಂಡು ಹಕ್ಕಿಯ ಜೀವನದ ಬಹು ಭಾಗ ಹೊಡೆದಾಟದಲ್ಲಿಯೆ ಕಳೆದುಹೋಗುವದರಿಂದ ಅದರ ಎರಡೂ ಕಾಲುಗಳ ಹಿಂಬದಿಗೆ ಬೊಟ್ಟಿನಂಥ ಒಂದು ಅವಯವ ಇರುತ್ತದೆ. ಅದೇ ಈ ಹಕ್ಕಿಯ ಆಯುಧ. ಅದು ಸದಾ ಮಸೆದು ಸಿದ್ಧವಾಗಿರುತ್ತದೆ. ಚಕೋರ ಪಕ್ಷಿಯನ್ನು ಗುರುತಿಸುವ ಸುಲಭ ಸಾಧನವೆಂದರೆ ಅದರ ಒಂದು ಕಣ್ಣಿನಿಂದ ಹಿಡಿದು ಕುತ್ತಿಗೆಯನ್ನು ಬಳಸಿ ಇನ್ನೊಂದು ಕಣ್ಣಿನ ವರೆಗೂ ಹಬ್ಬಿರುವ ಕರಿಯ ಪಟ್ಟಿ. ಈ ಕಪ್ಪು ಪಟ್ಟಿ ಇದಕ್ಕೆ ಬಾಲ್ಯದಿಂದಲೂ ಇರುತ್ತದೆ.

ಹಿಮಾಲಯದ ತಪ್ಪಲು ಪ್ರದೇಶದಲ್ಲಿ ಈ ಪಕ್ಷಿಗಳು ಸುಲಭವಾಗಿ ಕಣ್ಣಿಗೆ ಬೀಳುತ್ತವೆ. ಚಳಿಗಾಲದಲ್ಲಿ ಇವು ೪೦-೪೦, ೫೦-೫೦ ರ ಹಿಂಡುಗಟ್ಟಿಕೊಂಡು ಸಂಚರಿಸುತ್ತವೆ. ಬೇಸಿಗೆಯಲ್ಲಿ ಮಾತ್ರ ಯಾವುದೊಂದು ಗಂಡು ಹೆಣ್ಣಿನ ಜೋಡಿ ಸ್ವತಂತ್ರವಾಗಿ ಅಡ್ಡಾಡುವದು ಕಂಡು ಬರುತ್ತದೆ. ಸಣ್ಣ ಸಣ್ಣ ಹಣ್ಣು, ಕಂದಮೂಲ ಮತ್ತು ಕಾಳುಗಳು ಇದರ ಆಹಾರ. ಚಿಕ್ಕಂದಿನಲ್ಲಿ ಹಿಡಿದು ಸಾಕಿದರೆ ಇವು ಮನುಷ್ಯನಿಗೆ ಪಳಗುತ್ತವೆ.

ಸಾಕಿದ ಚಕೋರ ಪಕ್ಷಿಯ ಸ್ವಭಾವಚರ್ಯೆಯನ್ನು ಕುರಿತು ಮೇಜರ ಬ್ರಾವುನ್ ಎಂಬಾತನು ಈ ರೀತಿ ಬರೆದಿದ್ದಾನೆ : "ಚಕೋರ ಪಕ್ಷಿ ಬಹು ದಿಟ್ಟ ಹಕ್ಕಿ. ಇದನ್ನು ಕಾದಾಡಿಸಲೆಂದು ಜನರು ಸಾಕುತ್ತಾರೆ. ಬೇಕಾದ ಪ್ರತಿಸ್ಪರ್ಧಿಯೊಡನೆ ಕಾದಲೂ ಇದು ಹಿಂಜರಿಯುವದಿಲ್ಲ. ಪ್ರತಿಸ್ಪರ್ಧಿಯ ದೇಹದ ಸೂಕ್ಷ್ಮ ಭಾಗವನ್ನು ಕಂಡು ಹಿಡಿದು ಅಲ್ಲಿಯೆ ಚುಂಚಿನಿಂದ ಕುಕ್ಕುವ ಕಲೆಯು ಚಕೋರ ಪಕ್ಷಿಗೆ ಸಹಜ ಸ್ವಭಾವವಾಗಿದೆ. ನಾಯಿಯ ಮೂಗಿನ ಮೇಲೆ, ಮನೆಯ ಆಳಿನ ಕಾಲಿನ ಮೇಲೆ ಈ ಹಕ್ಕಿ ಚುಂಚಿನಿಂದ ಕುಕ್ಕುತ್ತದೆ. ಇದಕ್ಕೊಂದು ಖೋಡಿ ಚಟವಿರುತ್ತದೆ. ಇದರ ಅಕ್ಕಪಕ್ಕದಲ್ಲಿ ಯಾರಾದರೂ ಧಬ್ ಧಬ್ ಸಪ್ಪಳ ಮಾಡುತ್ತ ನಡೆಯುತ್ತ ಹೋಗುವದು ಇದಕ್ಕೆ ಸೇರುವದಿಲ್ಲ. ಅಂಥವರ ಕಾಲಿಗೆ ಇದರ ಚುಂಚಿನ ಏಟು

ಬಿತ್ತೆಂದೇ ತಿಳಿಯಬೇಕು."

ಚಕೋರ ಪಕ್ಷಿಗೆ ದೇವರು ಧ್ವನಿಯ ವರವನ್ನು ಕೊಟ್ಟೇ ಇಲ್ಲ. ಇದು ಕೇವಲ ಚಕ್, ಚಕ್-ಚಕುರ್, ಎಂದಿಷ್ಟೆ ಸಪ್ಪಳ ಹೊರಡಿಸಬಲ್ಲದು. ಗಂಡು-ಹೆಣ್ಣಿನಲ್ಲಿ ಬಲವಾದ ಪ್ರೀತಿ ಕೂಡುತ್ತದೆ. ಚಕೋರಿಯು ತತ್ತಿಯಿಡುವ ಸಮಯ ಎಪ್ರಿಲದಿಂದ ಅಗಸ್ಟ ತಿಂಗಳ ವರೆಗೆ ಇರುತ್ತದೆ. ಅದು ಸಾಮಾನ್ಯವಾಗಿ ೮ ರಿಂದ ೧೨ ತತ್ತಿಗಳನ್ನು ಹಾಕುತ್ತದೆ. ಇದರ ಗೂಡು ಗಿಡಗಂಟಿಗಳ ನಡುವೆ ಹುಲ್ಲು ಮತ್ತು ತರಗೆಲೆಗಳಿಂದ ಕಟ್ಟಲ್ಪಟ್ಟಿರುತ್ತದೆ.

ಪಕ್ಷಿಗಳ ಬೇಟೆಗಾರರಿಗೆ ಈ ಹಕ್ಕಿಯ ಬೇಟೆ ಬಲು ಪ್ರಿಯವಾಗಿದೆ. ಅಕ್ಟೋಬರ ತಿಂಗಳ ಪ್ರಾರಂಭವಾದೊಡನೆ ಜನ ನಾಯಿಗಳನ್ನು ಜೊತೆಗಿಟ್ಟುಕೊಂಡು ಇದರ ಬೇಟೆಗೆ ಹೊರಡುತ್ತಾರೆ. ರಾಮಚಕೋರ ಎಂಬುದು ಚಕೋರ ಪಕ್ಷಿಗಳಲ್ಲಿ ದೊಡ್ಡ ಜಾತಿ. ರಾಮಚಕೋರ ಹಕ್ಕಿಯ ತೂಕ ೬ ಪೌಂಡುಗಳಷ್ಟಿರುತ್ತದೆ. ಚಕೋರದ ಮಾಂಸ ಬಲು ರುಚಿ ಎಂದು ಮಾಂಸಾಹಾರಿಗಳು ಹೇಳುತ್ತಾರೆ.

ಚಕೋರ ಪಕ್ಷಿಯ ಜೀವನದ ವಿಚಾರವಾಗಿ ಬಹಳಷ್ಟು ವಿಷಯ ಗೊತ್ತಾಗಿರುವದಾದರೂ ಅದು ಅಮೃತಪಾನಮಾಡುತ್ತದೆ, ಎನ್ನುವದರ ರಹಸ್ಯ ಮಾತ್ರ ಇನ್ನೂ ಬಹಿರಂಗವಾಗಿಲ್ಲ. ಈ ಹೇಳಿಕೆ ಹೇಗೆ ರೂಢಿಯಲ್ಲಿ ಬಂತು ಎಂದೂ ತಿಳಿಯುವದಿಲ್ಲ.

## ವಿರೋಧಾಭಾಸಗಳು

ಟಿನ್ನಿನ ತಗಡುಗಳನ್ನು ಕಬ್ಬಿಣದಿಂದ ತಯಾರಿಸುತ್ತಾರೆ.

ಪನಾಮಾ ಹ್ಯಾಟುಗಳು ಪನಾಮಾದಿಂದ ಬರುವುದಿಲ್ಲ.

ತುರ್ಕಿಯ ತಂಬಾಕು ಎಂಬುದು ತುರ್ಕಿಯಲ್ಲಿ ಬೆಳೆಯುವುದಿಲ್ಲ.

ಹೇಸ್ಟಿಂಗ್ಸ್ ಕಾಳಗವು ಹೇಸ್ಟಿಂಗ್ಸದ ಬಳಿ ನಡೆಯಲಿಲ್ಲ.

ತಾಳೀಕೋಟೆಯ ಯುದ್ಧವೆಂಬುದು ರಕ್ಕಸತಂಗಡಗಿಯಲ್ಲಿ ನಡೆಯಿತು.

ಬೋಹಿಮಿಯಾದ ಬಂದರದ ಬಳಿ ಹಡಗು ಒಡೆಯಿತೆಂದು ಶೇಕ್ಸಪಿಯರ್ ಮಹಾಕವಿಯು ಹೇಳಿದ್ದಾನೆ; ಆದರೆ ಬೋಹಿಮಿಯಾದ ಬಳಿ ಯಾವ ದಿಕ್ಕಿನಲ್ಲಿಯೂ ಸಮುದ್ರವಿಲ್ಲ.

ಬಣ್ಣ ಕೊಡುವ "ಒಂಟೆಯ ಕೂದಲಿನ ಕುಂಚ"ಗಳನ್ನು ರಶಿಯಾದ ಇಣಚಿಯ ಕೂದಲುಗಳಿಂದ ಮಾಡುತ್ತಾರೆ.

ಜರ್ಮನ್ ಸಿಲ್ವರ್ ಎಂಬುದು (ಸಿಲ್ವರ್) ಬೆಳ್ಳಿಯೂ ಅಲ್ಲ, ಜರ್ಮನಿಯದೂ ಅಲ್ಲ.

* * *

ಜೀನ ಕೋತೆ ಎಂಬ ಫ್ರೆಂಚ ಲೇಖಕನಿಗೆ ಯಾರೋ, "ನಶೀಬ ಎಂಬುದರಲ್ಲಿ ನಿಮಗೆ ವಿಶ್ವಾಸವಿದೆಯೆ?'' ಎಂದು ಕೇಳಿದರು.

ಆದಕ್ಕಾತ, "ಇಲ್ಲದೆ ಏನು? ಹಾಗಿಲ್ಲದಿದ್ದರೆ ನಮ್ಮ ಪ್ರತಿಸ್ಪರ್ಧಿಯ ಯಶಸ್ಸಿಗೆ ನಾವು ಯಾವ ಕಾರಣವನ್ನು ಹೇಳಬಲ್ಲೆವು?'' ಎಂದುತ್ತರವಿತ್ತ.

ಇಂದಿನ “ ವಿಚಾರ ಯುಗದ ” ಮಹಾ ಅಂಧಶ್ರದ್ಧೆಯೆಂದರೆ ಗುಳಿಗೆಗಳು



# ಗುಳಿಗೆಗಳ ಯುಗ

ಹಂ ! ಅಸಂಭಾವ್ಯವಾದ ಯಾವುದೊಂದು ಮಾತನ್ನು ಯಾರಾದರೂ ಅಂದಾಗ, ಅಥವಾ ಏನೋ ಆಡಬೇಕೆಂದು ಏನನ್ನಾದರೂ ಆಡಿದ್ದನ್ನು ಕಂಡಾಗ ನಾವು “ ಗುಳಿಗೆ ಹೊಡೆದ” ಎನ್ನುತ್ತೇವೆ. ಈಗಿಲ್ಲಿ ಹೇಳುತ್ತಿರುವುದು ಅಂಥ ಗುಳಿಗೆಗಳ ಯುಗದ ಮಾತಲ್ಲ.

ಇಂದಿನ ಯುಗಕ್ಕೆ ಆಧುನಿಕ ಯುಗ, ಯಂತ್ರ ಯುಗ, ಅಣುಯುಗ ಎಂದು ಮುಂತಾಗಿ ಹೆಸರಿಟ್ಟಿದ್ದಾರೆ. ಇವೆಲ್ಲ ನಿಜವಾದರೂ ಮುಂದಿನ ಇತಿಹಾಸಕಾರರು ನಮ್ಮ ಕಾಲವನ್ನು ‘ ಗುಳಿಗೆಗಳ ಯುಗ ’ ಎಂದು ಹೇಳಲೂ ಬಹುದು. ಏಕೆಂದರೆ ಇಂದು ಜಗತ್ತಿನ ಎಲ್ಲೆಡೆಗಳಲ್ಲಿ ವಿಶೇಷತಃ ಅಮೇರಿಕೆ ಮತ್ತು ಇಂಗ್ಲಂಡಗಳಲ್ಲಿ ನಿತ್ಯವೂ ಯಾವುದಾದರೊಂದು ಬಗೆಯ ಔಷಧ ಗುಳಿಗೆಗಳನ್ನು ಸೇವಿಸದೇ ಇರುವವರು ತೀರ ವಿರಳವಾಗಿದ್ದಾರೆ.

ನಮ್ಮಲ್ಲಿಯೆ ನಿರೀಕ್ಷಿಸಿ ನೋಡಿದರೆ ಈ ಮಾತು ಪ್ರತ್ಯಯಕ್ಕೆ ಬರುವಂತಿದೆ. ಆಸ್ಪ್ರೋ, ಅನಾಸಿನ್, ಸಲ್ಫನಾಮಾಯಿಡ್, ಸಿಬಿಝಾಲ್ ಮುಂತಾದ ಗುಳಿಗೆಗಳ ಹೆಸರು ಸಾಮಾನ್ಯವಾಗಿ ಪ್ರತಿಯೊಬ್ಬ ಶಹರವಾಸಿಗೂ ಗೊತ್ತಾಗಿದೆ. ತಲೆನೋವಿನ ಲಕ್ಷಣ ಕಂಡರೆ ಸಾಕು, ಅಥವಾ ತಲೆ

ನೋವು ಬರುತ್ತದೆಂಬ ಕಲ್ಪನೆ ಮನಸ್ಸಿನಲ್ಲಿ ಸುಳಿದರೂ ಸಾಕು, ತಟಕ್ಕನೆ ಒಂದು ಆಸ್ಪ್ರೋ ಗುಳಿಗೆ ನುಂಗುವವರು ಹೆಚ್ಚಾಗಿದ್ದಾರೆ. ಸಿಬಿಝಾಲ ಗುಳಿಗೆ ನುಂಗಿದರೆ ಸಕಲ ರೋಗ ವಾಸಿಯಾಗುತ್ತದೆ ಎನ್ನುವ ಸಲಹೆ ಕೊಡುವವರೂ ಇಲ್ಲದೆ ಇಲ್ಲ. ಬರಬರುತ್ತ ಇದು ಒಂದು ಚಟದಂತಾಗಿ ನಿತ್ಯವೂ ಒಂದೆರಡು ಗುಳಿಗೆ ಹೊಟ್ಟೆಯಲ್ಲಿ ಹೋಗದಿದ್ದರೆ ಆ ಮನುಷ್ಯನಿಗೆ ಸಮಾಧಾನವೇ ಆಗುವದಿಲ್ಲ.

ನಿಮಗೆ ನಿದ್ದೆ ಬರಿಸುವ ಗುಳಿಗೆಗಳಿವೆ; ಎಚ್ಚರಿಡುವ ಗುಳಿಗೆಗಳಿವೆ; ನೋವು ಕಡಿಮೆ ಮಾಡುವ ಗುಳಿಗೆಗಳಿವೆ; ನರಮಂಡಲವನ್ನು ಸಾಂತ್ವನಗೊಳಿಸುವ ಗುಳಿಗೆಗಳಿವೆ; ಅಂಜಿಕೆ ಚಿಂತೆಗಳನ್ನು ದಮನ ಮಾಡುವ ಗುಳಿಗೆಗಳಿವೆ; ಬೊಜ್ಜು ಕರಗಿಸುವ, ತೂಕ ಹೆಚ್ಚಿಸುವ ಗುಳಿಗೆಗಳಿವೆ—ಇಷ್ಟೇ ಅಲ್ಲ, ಸಾವಿರಾರು ಬಗೆಯ ರೋಗಗಳನ್ನು ನಿವಾರಿಸುವ ಸಾವಿರಾರು ಗುಳಿಗೆಗಳು ಇವೆ.

ಇಂಗ್ಲಂಡದಲ್ಲಿ ಪ್ರತಿನಿತ್ಯವೂ ಪ್ರತಿ ೨೦ ಜನರಲ್ಲಿ ಒಬ್ಬ ಯಾವುದಾದರೂ ಒಂದು ಬಗೆಯ ಗುಳಿಗೆಯನ್ನು ತಪ್ಪದೆ ಸೇವಿಸುತ್ತಾನೆ. ಇಂಗ್ಲಂಡದಲ್ಲಿ ೩೦ ವರ್ಷಕ್ಕೆ ಮೇಲ್ಪಟ್ಟ ವಯಸ್ಸಾದ ಪ್ರತಿ ಆರು ಜನರಲ್ಲಿ ಒಬ್ಬನು ಕೇವಲ ಕಾಲ್ಪನಿಕ ಕಾರಣಗಳಿಗಾಗಿ ಗುಳಿಗೆಗಳನ್ನು ಸೇವಿಸುತ್ತಾನೆ. ಅಮೇರಿಕೆಯಲ್ಲಿ ಈ ಪ್ರಮಾಣ ಇನ್ನೂ ಹೆಚ್ಚಿಗಿದೆ. ಆಸ್ಪಿರಿನ್ ಮೊದಲಾದ ಯಾವುದೇ ಅಂಗಡಿಯಲ್ಲಿ ಸಿಗುವ ಗುಳಿಗೆಗಳನ್ನು ಸೇವಿಸುವವರ ಲೆಕ್ಕವನ್ನು ಇದರಲ್ಲಿ ಹಿಡಿದಿಲ್ಲ.

ಯಾವ ಬಗೆಯ ಔಷಧ ಗುಣವೂ ಇಲ್ಲದ ಗುಳಿಗೆಗಳನ್ನು ನುಂಗುವದಕ್ಕಾಗಿ ಬ್ರಿಟಿಶರು ಪ್ರತಿ ವರ್ಷ ೬೦ ಲಕ್ಷ ಪೌಂಡುಗಳನ್ನು ವೆಚ್ಚ ಮಾಡುತ್ತಾರೆ. ತಮ್ಮಲ್ಲಿದೆ ಎಂದು ಊಹಿಸಿಕೊಂಡ ರೋಗಕ್ಕೆ ಔಷಧಿ ಕೊಡಿರೆಂದು ದುಂಬಾಲು ಬೀಳುವ ರೋಗಿಗಳಿಗೆ ಡಾಕ್ಟರರು ಈ ಗುಳಿಗೆಗಳನ್ನು ಕೊಡುತ್ತಾರೆ. ಇವು ಹಾಲು ಮತ್ತು ಸಕ್ಕರೆಯ ಮಿಶ್ರಣದ ಗುಳಿಗೆಗಳಾಗಿರುತ್ತವೆ. ಇವುಗಳಲ್ಲಿ ಔಷಧದ ಅಂಶವಿರದಿದ್ದರೂ ರೋಗಿಗಳ ಮನಸ್ಸಿನ ಮೇಲೆ ಇವು ಪರಿಣಾಮ ಮಾಡುತ್ತವೆ. ಕಲ್ಪಿತ ರೋಗ ವಾಸಿಯಾಯಿತೆಂಬ ವಿಶ್ವಾಸವನ್ನು ಹುಟ್ಟಿಸುತ್ತವೆ. ಕಿಸೆಯಲ್ಲಾಗಲಿ, ಹೊಟ್ಟೆಯಲ್ಲಾಗಲಿ ಒಂದು ಗುಳಿಗೆಯಿದೆ ಎಂದು ಜನರು ನಂಬಿರುವ ವರೆಗೆ ತಾವು ಜಗತ್ತಿನ ಕಷ್ಟ-ನಿಷ್ಠುರಗಳನ್ನು ಎದುರಿಸಬಲ್ಲೆವೆಂಬ ವಿಶ್ವಾಸ ಅವರಲ್ಲುಂಟಾಗುತ್ತದೆ. ನಮ್ಮ ನಾಗರಿಕತೆಗೆ ಅಂಟಿಕೊಂಡ ಗುಳಿಗೆಗಳ ವ್ಯಾಮೋಹಕ್ಕೆ ಈ ಜನರು ಬಲಿ ಬಿದ್ದಿದ್ದು ಅವರಿಗೆ ಗುಳಿಗೆ ನುಂಗುವದೊಂದು ಚಟವೇ ಆಗಿಬಿಟ್ಟಿದೆ. ಈ ಚಟದಿಂದ ತಾತ್ಕಾಲಿಕ ಲಾಭವೆನಿಸಿಪಂತಾದರೂ ಮುಂದೆ ಕೆಟ್ಟ ಪರಿಣಾಮಗಳಾಗುವ ಸಂಭವವೂ ಇರುತ್ತದೆ.

"ನಾವೇನೂ ಈ ರೀತಿ ಗುಳಿಗೆ ನುಂಗಲು ಹೇಳುವದಿಲ್ಲ. ಜನ ತಾವಾಗಿಯೆ ತೆಗೆದುಕೊಂಡರೆ ನಾವೇನು ಮಾಡೋಣ" ಎಂದು ಡಾಕ್ಟರ ಜನರು ಹೇಳಬಹುದು. ಕೆಲ ಮಟ್ಟಿಗೆ ಇದು ಸರಿಯೆನಿಸಿದರೂ ಡಾಕ್ಟರರು ತಮ್ಮಲ್ಲಿಗೆ ಬರುವ ರೋಗಿಗಳಿಗೆ ಡಾಕ್ಟರರ ಸಲಹೆಯಿಲ್ಲದೆ ಗುಳಿಗೆ ನುಂಗುವದರ ಅಹಿತವನ್ನು ತುಸು ತಿಳಿಹೇಳಿದರೆ ಎಷ್ಟೋ ಕಲ್ಯಾಣವಾದೀತು. ಏಕೆಂದರೆ ರೋಗನಿವಾರಕ ಶಕ್ತಿಯುವು ಎಂದು ಜನರಲ್ಲಿ ನಂಬಿಗೆಯುಂಟುಮಾಡಿರುವ ಗುಳಿಗೆಗಳು ನಾವು ಬೇಡವೆಂದರೂ ಪೇಟೆಯಿಂದ ಮಾಯವಾಗುವಂತಿಲ್ಲವಾದ್ದರಿಂದ ಅವುಗಳ ಸದುಪಯೋಗದ ವಿಚಾರವನ್ನು ಜನರಿಗೆ ತಿಳಿಸಿ ಕೊಡುವದೇ ನಾವು ಮಾಡಬಹುದಾದ, ಮಾಡಲೇಬೇಕಾದ ಕಾರ್ಯವಾಗಿದೆ.



# ಇದು ನನ್ನ ಭಾರತ

ಈ ವರ್ಷ ಕಲಕತ್ತೆಯಲ್ಲಿ ಮಳೆಗಾಲ ತಡವಾಗಿ ಆರಂಭವಾಗಲಿದೆಯೆಂದು ತಿಳಿದುಬಂದ ನಂತರ ಕಪ್ಪೆಗಳ ಬೆಲೆ ಒಂದಕ್ಕೆ ಮೂರರಷ್ಟಾಯಿತು. ಕಲಕತ್ತೆಯಲ್ಲಿನ ಕಾಲೇಜು ಹಾಗು ಪ್ರಾಣಿಶಾಸ್ತ್ರ ಶಿಕ್ಷಣ ಸಂಸ್ಥೆಗಳಲ್ಲಿ ಕಪ್ಪೆಗಳನ್ನು ಸೀಳಿ ತೋರಿಸಿ ಪಾಠ ಹೇಳುವುದರಿಂದ ತಿಂಗಳಿಗೆ ಏನಿಲ್ಲೆಂದರೂ ಎಂಟು ಸಾವಿರ ಕಪ್ಪೆಗಳು ಬೇಕಾಗುತ್ತವೆ. ಬೇಸಿಗೆ ಕಳೆದಂತೆಲ್ಲ ನೆಲದಡಿಯಲ್ಲಿ ಹುದುಗಿರುವ ಕಪ್ಪೆಗಳನ್ನು ಹುಡುಕಿ ತೆಗೆಯುವುದು ದುಷ್ಕರವಾಗುವುದರಿಂದ ಬೆಲೆಗಳು ಅತಿಯಾಗಿ ಏರಿಕೊಂಡವೆಂದು ತಿಳಿದು ಬಂದಿದೆ.

—ಯು. ಪ್ರೆ. ಸುದ್ದಿ

ನೋವನ್ನುಂಟುಮಾಡಿದರೂ ಸಾವುಂಟುಮಾಡದ ಹೊಸ ಬಗೆಯ ಗುಂಡುಗಳನ್ನು ಪಶ್ಚಿಮ ಬಂಗಾಲ ಪೋಲೀಸರಿಗೆ ಬೇಗನೇ ಪೂರೈಸುವ ಸಂಭವವಿದೆ. ಗಲಭೆಗಾರ ಜನಜಂಗುಳಿಯನ್ನು ಚದರಿಸಲು ಇದನ್ನು ಮುಖ್ಯವಾಗಿ ಪ್ರಯೋಗಿಸಲಾಗುವದು.

ಒಳಗೆ ಸೀಸದ ಗಟ್ಟಿ, ಹೊರಗೆ ದಪ್ಪನ್ನ ರಬ್ಬರು ಹೊದಿಕೆಯಿರುವ ಈ ಗುಂಡುಗಳು ಸಾಮಾನ್ಯ ಪಿಸ್ತೂಲು, ರೈಫಲುಗಳಿಂದಲೇ ಹಾರಿಸಲ್ಪಡುವವು. ಅವು ಬಲವಾಗಿ ಬಡಿದು ನೋವುಂಟುಮಾಡಿದರೂ ಬಟ್ಟೆಯನ್ನಾಗಲಿ ಚರ್ಮವನ್ನಾಗಲಿ ಕೊರೆದು ಒಳಹೊಗುವದಿಲ್ಲ. ಒಬ್ಬ ರಬ್ಬರ ಕಾರಖಾನೆದಾರನು ಇದನ್ನು ತಯಾರಿಸಿದ್ದು ಸರಕಾರದವರು ಅವನ್ನೀಗ ಪರಿಶೀಲಿಸುತ್ತಿದ್ದಾರೆ.

—ಸ್ಟೇಟ್ಸಮನ್

ಈ ಸಲದ ಬೇಸಗೆಯ ಮದುವೆ ಮೋಸಮಿನಲ್ಲಿ ಘತವಾದ ಲೈಟ್ ರೇಲ್ವೆ ಪ್ಲಾಟ್‌ಫಾರ್ಮಿನಲ್ಲಿ ಒಂದು ಮೋಜು ನಡೆಯಿತು. ಮದುವೆ ದಿಬ್ಬಣದ ಬಳಗವೊಂದು ತಿಕೇಟಿಲ್ಲದೆ ಪ್ರವಾಸ ಮಾಡಿದ್ದನ್ನು ಹಿಡಿಯಲಾಯಿತು. ಒಡನೆ, ದಿಬ್ಬಣದವರೆಲ್ಲರೂ ತಿಕೀಟು ಚೆಕರನಿಂದ ತಪ್ಪಿಸಿಕೊಂಡು ಪಲಾಯನ ಮಾಡಿದರು.

ಆದರೆ ಮದುವಣಗಿತ್ತಿಯೊಬ್ಬಳು ಮಾತ್ರ ಪಾರಾಗಲಾರದೆ ಪ್ಲಾಟ್‌ಫಾರ್ಮಿನಲ್ಲಿ ಸಿಕ್ಕಿ ಬಿದ್ದದ್ದರಿಂದ ದಿಬ್ಬಣದ ಯಜಮಾನನು ಹಾದಿಗೆ ಬರಲೇಬೇಕಾಯಿತು. ಅವನು ತಿಕೀಟಿಲ್ಲದೆ ಪ್ರವಾಸಮಾಡಿದ್ದಕ್ಕೆ ೮೫ ರೂಪಾಯಿ ದಂಡ ತೆತ್ತು ಮದುವಣಗಿತ್ತಿಯನ್ನು ಬಿಡಿಸಿಕೊಂಡು ಹೋದನು.

—ಸರ್ಚ್‌ಲೈಟ್

ಹಿಂದೂ ಸಾಧುವೊಬ್ಬನು ಈ ವರ್ಷ ಅಗರತಾಲಾ (ತ್ರಿಪುರಾ) ದಲ್ಲಿ ಆಹಾರ ಕ್ಷಾಮಕ್ಕೆ ಕಾರಣನಾದನು.

ಪೂರ್ವ ಪಾಕಿಸ್ತಾನದಲ್ಲಿದ್ದ ಈ ಸಾಧುವು ಗಡಿ ದಾಟ ಇಲ್ಲಿಗೆ ಬಂದೊಡನೆ ೭೦,೦೦೦ ಜನರು ಅವನ ದರ್ಶನಕ್ಕಾಗಿ ಈ ಪಟ್ಟಣದಲ್ಲಿ ಬಂದು ಮುಕುರಿದ್ದರಿಂದ ಒಮ್ಮೆಲೇ ಜನಸಂಖ್ಯೆ ಹೆಚ್ಚಿ ಆಹಾರದ ಬರವುಂಟಾಯಿತು. ಈ ವರ್ಷ ಜನೇವರಿಯಲ್ಲಾದ ಈ ಆಕಸ್ಮಿಕ ಆಹಾರ ಬಿಕ್ಕಟ್ಟನ್ನು ಹಿಡಿತಕ್ಕೆ ತರಲು ಎಷ್ಟೋ ಸಮಯ ಹಿಡಿಯಿತು.

—ಯು. ಪ್ರೆ. ವರದಿ

# ಬೊಜ್ಜಿನ ಸಮಸ್ಯೆಗೆ ಕಾಯಕಷ್ಟವೇ ಉತ್ತರ

ಬೊಜ್ಜಿನ ವಿರುದ್ಧ ಹೋರಾಟ ನಿರಂತರವಾಗಿ ಸಾಗಿದೆ. ಆದರೆ ಶಾಶ್ವತ ಜಯ ಶಕ್ಯವಾಗಿಲ್ಲ. ಊಟದಲ್ಲಿ ನಿಯಮ ಮಾಡಿಕೊಂಡು ಬೊಜ್ಜು ಇಳಿಸಿಕೊಂಡವರಿಗೆ ಒಂದೆರಡು ವರ್ಷಗಳಲ್ಲಿ ಪುನಃ ಬೊಜ್ಜು ಏರಿದ ಉದಾಹರಣೆಗಳು ಎಷ್ಟೋ ಇವೆ.

ಬೊಜ್ಜು ಬೆಳೆಯಲು ಅಗತ್ಯಕ್ಕಿಂತ ಹೆಚ್ಚು ಆಹಾರ ತಿನ್ನುವುದೇ ಕಾರಣವೆಂದು ತಜ್ಞರು ಎಂದೋ ಕಂಡುಹಿಡಿದಿದ್ದಾರೆ. ಆದ್ದರಿಂದ ಬೊಜ್ಜು ಕಡಿಮೆ ಮಾಡಲು ಆಹಾರ ನಿಯಮನವೇ ಉಪಾಯವೆಂದು ತಿಳಿದು ಆ ಉಪಾಯಕ್ಕೆ ಪ್ರಾಶಸ್ತ್ಯ ಕೊಡಲಾಯಿತು. ಆದರೆ ಇದು ಸುಲಭವಲ್ಲೆಂದು ಬೇಗ ಸ್ಪಷ್ಟವಾಯಿತು. ಯಂತ್ರ ಮತ್ತು ವಾಹನಗಳ ಈ ಯುಗದಲ್ಲಿ ಕುಳಿತು ಕೆಲಸ ಮಾಡುವವರ ಸಂಖ್ಯೆಯೇ ಹೆಚ್ಚು. ಅವರು ತಿಂದ ಆಹಾರದ ಸತ್ವದಲ್ಲಿ ಅಲ್ಪಾಂಶವನ್ನು ಮಾತ್ರ ವೆಚ್ಚ ಮಾಡುತ್ತಾರೆ. ಉಳಿದದ್ದು ಬೊಜ್ಜಾಗಿ ಹೇರಿಕೊಳ್ಳುತ್ತದೆ. ಬೊಜ್ಜು ಬೆಳೆಯುದಂತೆ ಆಹಾರವನ್ನು ಕಡಿಮೆ ಮಾಡತೊಡಗಿದರೆ ಅವರಿಗೆ ಹಸಿವೆ ತಡೆಯಲಾಗುವದಿಲ್ಲ. ಮೇಲಾಗಿ ಕೆಲವರು ಯಾವುದೋ ಆಂತರಿಕ ಪ್ರೇರಣೆಯಿಂದ ಹೆಚ್ಚು ತಿನ್ನುವ ಅಭ್ಯಾಸ ಮಾಡಿಕೊಂಡಿರುತ್ತಾರೆ. ಅವರು ತಿನ್ನುವುದನ್ನು ಬಿಟ್ಟರೆ ತುಂಬ ಕಂಗಾಲಾಗುತ್ತಾರೆ.

ಹಾಗಾದರೆ ಬೊಜ್ಜು ಬೆಳಸಬೇಕು, ಇಲ್ಲವೆ ಉಪವಾಸ ಬೀಳಬೇಕು—ಇವೆರಡೇ ಹಾದಿಗಳೋ ?

ಅಲ್ಲ—ನೀವು ಹೊಟ್ಟೆ ತುಂಬ ಉಂಡೂ ತೆಳ್ಳನ್ನ ದೃಢ ಮೈಕಟ್ಟಿನವರಾಗಿ ಉಳಿಯಬಲ್ಲಿರೆಂದು ಅಮೇರಿಕದ ಹರ್ವಾರ್ಡ ಸಾರ್ವಜನಿಕಾರೋಗ್ಯ ಶಾಲೆಯ ಡಾ. ಜೀನ ಮೇಯರ, ಡಾ. ಜಾರ್ಜ ಮ್ಯಾನ್ ಹಾಗು ಬ್ರಿಟಿಶ ಆಹಾರ ತಜ್ಞ ಡಾ. ಜಾನ್ ಕ್ಲೈಡರ ಸಂಶೋಧನೆಗಳು ತೋರಿಸಿವೆ.

ಡಾ. ಮೇಯರರ ಅಭಿಪ್ರಾಯದಲ್ಲಿ ಕೇವಲ



ಆಹಾರ ನಿಯಮನದಿಂದ ಕೊಬ್ಬಿನೊಡನೆ ಹೋರಾಡುವುದೆಂದರೆ ಒಗ್ಗೈಯಿಂದ ಯುದ್ಧ ಮಾಡಿದಂತೆ. ಇನ್ನೊಂದು ಮುಷ್ಟಿಯಾದ ವ್ಯಾಯಾಮವನ್ನೂ ಉಪಯೋಗಿಸಿಕೊಂಡರೆ ಮಾತ್ರ ನೀವು ಬೊಜ್ಜನ್ನು ಸೋಲಿಸಬಲ್ಲಿರಿ.

ಡಾ. ಮೇಯರರು ಎರಡನೇ ಮಹಾಯುದ್ಧ ಕಾಲದಲ್ಲಿ ಫ್ರೀ-ಫ್ರೆಂಚ ಸೈನ್ಯದೊಡನಿದ್ದರು. ಆಗ ವ್ಯಾಯಾಮವು ದೇಹ ಭಾರದ ಮೇಲೆ ಮಾಡುವ ಪರಿಣಾಮವನ್ನು ಅವರು ಕಣ್ಣಾರೆ ಕಂಡರು. ಕಂದಕ ಅಗೆಯುವ ಅಮೇರಿಕನ್ ಸೈನಿಕರು "ಕುದುರೆಗಳಂತೆ ತಿಂದರೂ" ತೆಳ್ಳಗಾಗಿದ್ದು ಉತ್ತಮ ಆರೋಗ್ಯ ಸ್ಥಿತಿಯಲ್ಲಿರುವದು ಅವರ ಲಕ್ಷ್ಯಕ್ಕೆ ಬಂತು.

ಡಾ. ಮೇಯರರ ಹಿಂದಿನ ಸಹಕಾರಿ ಡಾ. ಜಾರ್ಜ ಮ್ಯಾನರು ಪ್ರಯೋಗಗಳಿಂದ ಇದನ್ನು ತೋರಿಸಿದರು. ನಾಲ್ಕು ವೈದ್ಯಕೀಯ ವಿದ್ಯಾರ್ಥಿಗಳಿಗೆ ಅವರು ಸಾಮಾನ್ಯಕ್ಕಿಂತ ಇಮ್ಮಡಿ ಆಹಾರವನ್ನು--ಚಾಕಲೇಟು ಮಿಠಾಯಿ ಸಹಿತ--ತಿನ್ನಿಸಿದರು. ಅನಂತರ ಈಸುವುದು, ಸೈಕಲ್ ಸವಾರಿ, ಬಾಸ್ಕೆಟ್‌ಬಾಲ್ ಆಟ ಮೊದಲಾದ ಸಶ್ರಮ ವ್ಯಾಯಾಮಗಳಲ್ಲಿ ಅವರನ್ನು ತೊಡಗಿಸಿದರು.

ಈ ವಿದ್ಯಾರ್ಥಿಗಳ ತೂಕ ಒಂದು ತೊಲೆ ಕೂಡ ಏರಲಿಲ್ಲ. ಅವರ ಮುಖ ಹೆಚ್ಚು ಆರೋಗ್ಯಶಾಲಿಯಾಯಿತು, ಚಳಿಯನ್ನು ಸಹಿಸುವ ತ್ರಾಣ ಹೆಚ್ಚಿತು, ಅವರ ನಿದ್ರೆ ಹೆಚ್ಚು ಸುಖಪ್ರದವಾಯಿತಲ್ಲದೆ ಅಭ್ಯಾಸದಲ್ಲಿಯೂ ಅವರ ದಕ್ಷತೆ ಹೆಚ್ಚಾಯಿತು.



ಕೊಬ್ಬು ಇಳಿಸಲು ಶಾರೀರಿಕ ಶ್ರಮ ವ್ಯರ್ಥ ಎನ್ನುವವರಿದ್ದಾರೆ. ಒಂದು ಪೌಂಡು ಕೊಬ್ಬು ತೆಗೆಯಲು ೩೬ ಮೈಲು ನಡೆಯಬೇಕಾಗುವದು ಇಲ್ಲವೆ ೭ ತಾಸು ಕಟ್ಟಿಗೆ ಒಡೆಯಬೇಕಾಗುವದು ಎಂದು ಅವರು ಹೇಳುತ್ತಾರೆ. ಆದರೆ ದಿನಕ್ಕೊಂದು ಮೈಲಿನಂತೆ ೩೬ ಮೈಲು ನಡೆದರೂ ಅಷ್ಟೇ ಪ್ರಯೋಜನವಾಗುತ್ತದೆ. ಹೀಗೆ ಮಾಡಲು ಏನಡ್ಡಿ ?

ಹೆಚ್ಚು ಶ್ರಮದಿಂದ ಹೆಚ್ಚು ತಿನ್ನುವ ಹಂಬಲವುಂಟಾಗಿ ಬೊಜ್ಜು ಇನ್ನಷ್ಟು ಬೆಳೆಯುವದೆಂಬ ಕೆಲವರ ವಾದವೂ ಸರಿಯಲ್ಲ.

ಡಾ. ಮೇಯರರು ಕೆಲ ಬಿಳೇ ಇಲಿಗಳನ್ನು ಓಡಲು ತರಬೇತು ಮಾಡಿದರು. ಅವುಗಳನ್ನು ವರ್ಗೀಕರಿಸಿ ದಿನಕ್ಕೆ ಒಂದು, ಎರಡು, ಮೂರು ಹೀಗೆ ಎಂಟು ತಾಸುಗಳ ವರೆಗೆ ಓಡುವ ವಿವಿಧ ವರ್ಗಗಳಾಗಿ ಮಾಡಿದರು.

ಆಗ ದಿನಕ್ಕೆ ಒಂದೆರಡು ತಾಸು ಓಡುವ ಇಲಿಗಳ ಆಹಾರ ಪ್ರಮಾಣ ಏರುವ ಬದಲು **ಸ್ವಲ್ಪ ಇಳಿದದ್ದೇ** ವ್ಯಕ್ತವಾಯಿತು. ಉಳಿದವು ತಿನ್ನುವದು ಹೆಚ್ಚಾಯಿತು. ಎಂಟು ತಾಸಿಗಿಂತ ಹೆಚ್ಚು ಓಡಿದವುಗಳು ತೀರ ಸುಸ್ತಾದವು. ಅವುಗಳು ಆಹಾರ ತೆಗೆದುಕೊಳ್ಳುವದು ಕಡಿಮೆಯಾಯಿತಲ್ಲದೆ ಅವುಗಳ ತೂಕವೂ ಇಳಿಯಿತು.

ಪ್ರಾಣಿಗಳ ಮೇಲಿನ ಈ ಪ್ರಯೋಗ ಮನುಷ್ಯರ ಮೇಲೂ ಅಷ್ಟೇ ನಿಜವಾಗಿದೆ. ೨೧೩ ಔದ್ಯೋಗಿಕ ಕೆಲಸಗಾರರನ್ನು ಆರಿಸಿ ಡಾ. ಮೇಯರರು ಪರೀಕ್ಷಿಸಿದರು. ಅವರಲ್ಲಿ ಕೂತು ಕೆಲಸ ಮಾಡುವ ಸುಪರ್ವೈಜರರೇ ಮೊದಲಾದವರಿಂದ ಹಿಡಿದು ಟನ್‌ಗಟ್ಟಳೆ ಕಲ್ಲಿದ್ದಲಿ ಕೀಳುವ ಕಠಿನ ಪರಿಶ್ರಮಿಗಳ ವರೆಗೆ ಎಲ್ಲ ಪ್ರಕಾರದವರೂ ಇದ್ದರು. ಅವರಲ್ಲಿ ಇಂಜನಿಯರರು, ಮುಕಾದಮರು, ಟ್ರಕ್ ಡ್ರೈವರರೇ ಮೊದಲಾದ ಸಾಧಾರಣ ಪರಿಶ್ರಮದ ಜನರು ಕಾರಕೂನರೇ ಮೊದ

ಲಾದ ಕೂತು ಕೆಲಸ ಮಾಡುವ ಜನರಿಗಿಂತ **ಕಡಿಮೆ** ಉಣ್ಣುವವರು ಮತ್ತು ಕಡಿಮೆ ತೂಕದವರಾಗಿದ್ದರು. ಅದಕ್ಕಿಂತ ಪರಿಶ್ರಮ ಹೆಚ್ಚುಳ್ಳ ಗಿರಣಿಕೂಲಿಕಾರರು, ಭಾರ ಏರಿಸುವವರೇ ಮೊದಲಾದವರು ಹೆಚ್ಚೆಚ್ಚು ಉಣ್ಣುವವರಾದರೂ ತೂಕವನ್ನು ಇದ್ದಂತೆಯೇ ಉಳಿಸಿಕೊಳ್ಳುತ್ತಿದ್ದರು. ಕಲ್ಲಿದ್ದಲಿ ಕೂಲಿಕಾರರು ಎಲ್ಲರಿಗಿಂತ ಹೆಚ್ಚು ಉಂಡರೂ ತೂಕ ಕಳೆದುಕೊಳ್ಳುತ್ತಿದ್ದರು. ೨೧೩ ಜನರಲ್ಲಿ ಕೊಬ್ಬು ಬೆಳಸಿಕೊಂಡವರೆಂದರೆ ಕುಳಿತು ಕೆಲಸಮಾಡುತ್ತಿದ್ದವರು ಮಾತ್ರ.

ಇದರಿಂದ ದೇಹದ ತೂಕ ಸಮಂಜಸವಾಗಿರಬೇಕಾದರೆ ಅತಿ ಶ್ರಮವೂ ಸಲ್ಲದು. ಅತಿ ವಿರಾಮವೂ ಸಲ್ಲದೆಂದು ಸ್ಪಷ್ಟವಾಗುತ್ತದೆ.

ಇನ್ನೊಂದು ಪರಿಶೀಲನೆಯಲ್ಲಿ ಡಾ. ಮೇಯರರು ೨೮ ತೆಳ್ಳನ್ನ ಹುಡುಗಿಯರನ್ನೂ ೨೮ "ಡುಮ್ಮಿ" ಯರನ್ನೂ ಆರಿಸಿಕೊಂಡು ಅವರ ಜೀವನ ಮತ್ತು ಆಹಾರಾಭ್ಯಾಸಗಳನ್ನು ಗುರುತು ಹಾಕಿಕೊಂಡರು.

ಆಗ ಅವರಿಗೆ ತಿಳಿದುಬಂದ ಅಂಶಗಳಿವು: ದಪ್ಪನ್ನ ಹುಡುಗಿಯರಲ್ಲಿ ಹೆಚ್ಚು ಜನರು ತೆಳ್ಳನ್ನವರಿಗಿಂತ ತುಸು **ಕಡಿಮೆಯೇ** ತಿನ್ನುತ್ತಿದ್ದರು. ಆದರೆ ಅವರು ಏನೂ ಶ್ರಮಮಾಡುತ್ತಿರಲಿಲ್ಲ. ಸಾಮಾನ್ಯ ತೂಕದ ಹುಡುಗಿಯರು ಕುಣಿತ, ನಡಿಗೆ ಮತ್ತು ಆಟಗಳೆಂದು ಡುಮ್ಮಿಯರಿಗಿಂತ ಮೂರುಪಟ್ಟು ವ್ಯಾಯಾಮ ಮಾಡುತ್ತಿದ್ದರು. ಇವೇ ದಪ್ಪನ್ನ ಹುಡುಗಿಯರು ಮುಂದೆ ಬೇಸಿಗೆಯ ಶಿಬಿರಗಳಲ್ಲಿ ಅನಿವಾರ್ಯವಾಗಿ ಆಟಗಳಲ್ಲಿ ತೊಡಗಲೇಬೇಕಾದಾಗ ಅವರ ಆಹಾರ ಪ್ರಮಾಣ **ಹೆಚ್ಚಾದರೂ** ತೂಕ **ಇಳಿಯಿತು.**

ಬೊಜ್ಜು ಇಂದಿನ ಜಗತ್ತಿನಲ್ಲಿ ಸಮಸ್ಯೆಯೇಕಾಗಿದೆ? ಡಾ॥ ಮೇಯರರ ಅಭಿಪ್ರಾಯದಲ್ಲಿ ನಮ್ಮ ಜೀವನ ಹೆಚ್ಚು ಐಷಆರಾಮದ್ದಾಗಿರುವುದೇ ಕಾರಣ.

ನಮ್ಮ ಪೂರ್ವಜರು ಗುಹಾವಾಸಿಗಳಾಗಿದ್ದರು. ಅವರು ಗುಡ್ಡಗಳನ್ನು ಹತ್ತಿ, ಅಡವಿಗಳಲ್ಲಿ ದೀರ್ಘಕಾಲ ನಡೆದು, ಬೇಟೆಯ ಬೆನ್ನಟ್ಟಿ ದಿನಗಟ್ಟಳೆ ಓಡಿ ಕಾಲಕಳೆಯುತ್ತಿದ್ದರು. ನಾವಿಂದು ಕೆಲಸಕ್ಕೆ ರೈಲು, ಮೋಟಾರುಗಳಲ್ಲಿ ಹೋಗುತ್ತೇವೆ; ಕುರ್ಚಿಯಲ್ಲಿ ಕುಳಿತು ಕೆಲಸ ಮಾಡುತ್ತೇವೆ; ವಾಹನಗಳಲ್ಲೇ ಮರಳಿಬರುತ್ತೇವೆ; ಉಂಡು ಮಲಗುತ್ತೇವೆ. ರೈತನಿಂದ ಹಿಡಿದು ಪಟ್ಟಣವಾಸಿಯ ವರೆಗೆ ಎಲ್ಲರಿಗೂ ಶ್ರಮ ಉಳಿಸುವ ಸಾಧನಗಳು ಲಭ್ಯವಾಗಿ ಶರೀರ ಶ್ರಮದ ಅವಶ್ಯಕತೆ ಕಡಿಮೆಯಾಗಿದೆ, ಎಂದು ಡಾ॥ ಮೇಯರರು ಹೇಳುತ್ತಾರೆ.

ಇದಕ್ಕೇನು ಮಾಡಲು ಸಾಧ್ಯ?

ನಗರವಾಸಿಗಳಿಗೆ ನಡೆಯುವದು ಒಳ್ಳೇ ಉಪಾಯ. ನಾವು ಪ್ರತಿಯೊಬ್ಬರೂ ದಿನಕ್ಕೆ ಸ್ವಲ್ಪ ಸ್ವಲ್ಪವೇ ಬೊಜ್ಜು ಹೆಚ್ಚಿಸುತ್ತ ಹೋಗುತ್ತೇವೆ. ಆಹಾರದಲ್ಲಿ ದಿನಕ್ಕೆ ಕೇವಲ ೮೦ ಕೆಲರಿ ಹೆಚ್ಚಾದರೂ ಸಾಕು. ೫ ವರ್ಷಗಳಲ್ಲಿ ೧೪ ಪೌಂಡಿನಷ್ಟು ತೂಕ ಏರಬಹುದು. ಆದರೆ ದಿನಕ್ಕೊಂದು ಮೈಲು ನಡೆದರೆ ೮೦ ಕೆಲರಿಯಿಂದ ಹುಟ್ಟಿದ ಬೊಜ್ಜನ್ನು ಆಯಾ ದಿನವೇ ಕರಗಿಸಲು ಸಾಧ್ಯವಿದೆ. ೧೫ ನಿಮಿಷಗಳ ಕಾಲ್ನಡಿಗೆಯಿಂದ ಇಷ್ಟು ಪ್ರಯೋಜನವಿದೆ.

ಅರ್ಧ ತಾಸು ಆಟವಾಡಿದರೆ ವರ್ಷದೊಳಗೆ ೧೦-೧೫ ಪೌಂಡ್ ಕೊಬ್ಬನ್ನು ಕರಗಿಸಬಹುದು. ಅರ್ಧ ತಾಸು ಈಸುವುದರಿಂದ ದಿನದಲ್ಲಿ ೧೫೦-೩೫೦ ಕೆಲರಿ ವರೆಗಿನ ಕೊಬ್ಬನ್ನೂ ಸೈಕಲ್ಲು ಹೊಡೆಯುವದರಿಂದ ೩೦೦ ಕೆಲರಿಯನ್ನೂ ಕರಗಿಸಲು ಶಕ್ಯವಿದೆ.

ದಿನಕ್ಕೆ ಅರ್ಧತಾಸಿನ ಸಾಧಾರಣ ಪರಿಶ್ರಮದ ಆಟಗಳು ಕೊಬ್ಬನ್ನು ದೂರ ಇರಿಸಬಲ್ಲವೆಂದು ಡಾ. ಮೇಯರರು ಹೇಳುತ್ತಾರೆ. ಇಂಗ್ಲಂಡಿನ ಡಾ. ಕ್ಲೈಡರಾದರೂ ಅರ್ಧತಾಸು ವ್ಯಾಯಾಮವು ಕೊಬ್ಬು ಇಳಿಸಲು ಉತ್ತಮ ಉಪಾಯವೆನ್ನುತ್ತಾರೆ. ಆದರೆ ಅತಿರೇಕ ವ್ಯಾಯಾಮವನ್ನು ಅವರು ಶಿಫಾರಸು ಮಾಡುವುದಿಲ್ಲ.

ಡಾ. ಕ್ಲೈಡರು ಆಹಾರ ವಿಷಯದಲ್ಲಿ ಒಂದು ಸಲಹೆ ಕೊಡುತ್ತಾರೆ. ಆಹಾರವನ್ನು ಕಡಿಮೆ ಮಾಡಿಕೊಂಡು ಹಸಿದಿರುವುದು ಕೊಬ್ಬು ಇಳಿ

ಸಲು ಅವಶ್ಯವಿಲ್ಲ. "ನಿಮ್ಮ ಕೊಬ್ಬು ನೀವು **ಎಷ್ಟು** ತಿನ್ನುತ್ತೀರಿ ಎಂಬುದಕ್ಕಿಂತಲೂ **ಏನು** ತಿನ್ನುತ್ತೀರಿ ಎಂಬುದನ್ನು ಅವಲಂಬಿಸಿದೆ" ಎಂದು ಅವರ ಮತ.

ನೀವು ತಿನ್ನುವ ಮಾಂಸ, ಮೀನು, ತತ್ತಿ, ಗಿಣ್ಣಗಳಾಗಲಿ, ಹಾಲು, ಖೋವಗಳಾಗಲಿ, ತರಕಾರಿ ಮತ್ತು ಫಲವಸ್ತುಗಳಾಗಲಿ, ಬೆಣ್ಣೆ, ತುಪ್ಪ, ಎಣ್ಣೆಗಳಾಗಲಿ ನಿಮ್ಮ ಕೊಬ್ಬು ಏರಿಸುವದಿಲ್ಲ. ಕೊಬ್ಬು ಏರಿಸುವ ಪಾಪಿಗಳೆಂದರೆ ಶರ್ಕರಾ-ಪಿಷ್ಟಗಳು—ಅಂದರೆ ಅಕ್ಕಿ, ಗೋದಿ ಮೊದಲಾದ ಧಾನ್ಯಗಳು, ಬೇಳೆಕಾಳುಗಳು ಮತ್ತು ಅದಕ್ಕೂ ಹೆಚ್ಚಾಗಿ ಸಕ್ಕರೆ, ಬೆಲ್ಲ ಇತ್ಯಾದಿ ಸಿಹಿಪದಾರ್ಥಗಳು. ಎಲ್ಲಕ್ಕೂ ಮಿಗಿಲಾಗಿ ಮಾದಕ ಪೇಯುಗಳು ಕೊಬ್ಬಿಗೆ ತುಂಬ ಕಾರಣ. ಈ ಶರ್ಕರಾ-ಪಿಷ್ಟ ಮತ್ತು ಮಾದಕ ಪೇಯಗಳನ್ನು ಆದಷ್ಟು ಕಡಿಮೆ ಮಾಡಿರಿ—ಸಕ್ಕರೆ ಮತ್ತು ಮದ್ಯಗಳನ್ನು ಪೂರ್ತಿ ವರ್ಜಿಸಿರಿ; ಅಂದರೆ ನಿಮ್ಮ ತೂಕ ನಿಮ್ಮ ಹಿಡಿತದಲ್ಲಿ ಉಳಿಯುವುದೆಂದು ಡಾ॥ ಕ್ಲೈಡರು ಹೇಳುತ್ತಾರೆ.

ಆದರೆ ಕೊಬ್ಬನ್ನೇಕೆ ಇಳಿಸಿಕೊಳ್ಳಬೇಕು? ಅದು ಇದ್ದರೇನು ನಷ್ಟ?

ಹೆಂಗಸರು ತಮ್ಮ ರೂಪ ಕೆಡುವದೆಂದು ತೆಳ್ಳಗೆ ಉಳಿಯಲು ಆಶಿಸಬಹುದು. ಆದರೆ ರೂಪದ ಮಾತು ಗೌಣ. ಮಿತಿಮೀರಿದ ಕೊಬ್ಬು ಅಪಾಯಕರವಾದದ್ದು.

ಬೊಜ್ಜು ಬೆಳೆದವರಿಗೆ ಹೃದಯರೋಗಗಳು, ಮೂತ್ರಪಿಂಡರೋಗಗಳು, ರಕ್ತದ ಒತ್ತಡ, ರಕ್ತನಾಳಗಳು ಬಾಯುವದು, ಸಂಧಿವಾತ ಈ ರೋಗಗಳ ಉಪದ್ರವ ಹೆಚ್ಚಾಗಿರುತ್ತದೆ.

ವಿಮಾ ಕಂಪನಿಗಳು ಇದಕ್ಕಾಗಿಯೇ ಬೊಜ್ಜು ಬೆಳೆದವರಿಂದ ಹೆಚ್ಚು ಪ್ರೀಮಿಯಂ ವಸೂಲು ಮಾಡುತ್ತವೆ. ಸಾಮಾನ್ಯ ತೂಕದವರಿಗಿಂತ ಬೊಜ್ಜು ಬೆಳೆದವರ ಮರಣಪ್ರಮಾಣ ನೂರಕ್ಕೆ ೫೦ ರಷ್ಟು ಹೆಚ್ಚಾಗಿದೆಯೆಂದು ಅಂಕೆಸಂಖ್ಯೆಗಳು ತೋರಿಸುತ್ತವೆ. **( ವಿವಿಧ ಆಧಾರಗಳಿಂದ )**

## ಕಣ್ಣು ಕೊಟ್ಟ ಸಿಟ್ಟು

ಇಂಗ್ಲಂಡದಲ್ಲಿಯ ಸೇಂಟ ಪೇಥ್ಸ ಎಂಬ ನಗರದಲ್ಲಿ ಪೀಟರ ಬಾರ ಎಂಬಾತ ಹತ್ತು ವರ್ಷಗಳಿಂದಲೂ ಅಂಧನಾಗಿದ್ದ. ಕಳೆದ ಜೂನ ತಿಂಗಳ ೩ ನೆಯ ತಾರೀಖಿನ ದಿನ ಅವನಿಗೂ ಅವನ ಹೆಂಡತಿಗೂ ಏತಕ್ಕೋ ಜಗಳವಾಯಿತು. ಸಿಟ್ಟಿನ ಭರದಲ್ಲಿ ಪೀಟರ ತನ್ನ ಅಂಗೈಯನ್ನು ಮುಷ್ಟಿ ಕಟ್ಟಿ ಇನ್ನೊಂದು ಅಂಗೈಯ ಮೇಲೆ ಬಲವಾಗಿ ಗುದ್ದಿದ. ಏನಾಶ್ಚರ್ಯ! ತುಸು ಹೊತ್ತಿನ ನಂತರ ಅವನಿಗೆ ತನ್ನ ಹೆಂಡತಿಯ ಆಕೃತಿ ಅಸ್ಪಷ್ಟವಾಗಿ ಕಾಣಿಸತೊಡಗಿತು. ಹತ್ತು ಮಿನಿಟುಗಳ ನಂತರ ಅವನಿಗೆ ಅವಳು ಸ್ಪಷ್ಟವಾಗಿ ಕಾಣಿಸತೊಡಗಿದಳು. ತನ್ನ ಹೆಂಡತಿಯ ಮುಖಾವಲೋಕನವನ್ನು ಪೀಟರ ಮಾಡಿದ್ದು ಅಂದೇ ಮೊದಲನೆಯ ಸಲವಾಗಿದ್ದಿತು.

---

ವಿಶ್ವವಿಜಯಿ ನೆಪೋಲಿಯನ್ ಒಮ್ಮೆ ಹೀಗಂದಿದ್ದ: "ಶಾಶ್ವತವಾದ, ಪಶ್ಚಾತ್ತಾಪಕ್ಕೆ ಎಡೆಗೊಡದಂಥ ಏಕಮಾತ್ರ ವಿಜಯವೆಂದರೆ, ನಮ್ಮ ಮೇಲೆ ನಾವು ಗಳಿಸಿಕೊಂಡ ವಿಜಯ."

ನಾಗರಿಕ ಭಾರತಕ್ಕೆ
ವರದಕ್ಷಿಣೆಯು ಸಮಸ್ಯೆಯಾದರೆ
ಆದಿವಾಸಿ ಭಾರತಕ್ಕೆ "ತೆರದಕ್ಷಿಣೆಯು" ಕಷ್ಟ

# ವಧು ತುಟ್ಟಿಯಾಗಿದ್ದಾಳೆ!

ವಿಕ್ಟರ ಘೋಷರ ಲೇಖದಿಂದ



ಮಧ್ಯಪ್ರದೇಶದ ಹಿಂದುಳಿದ ಭಾಗದಲ್ಲಿ ಒಂದು ಬಾಳೆಗಿಡದ ನೆರಳಲ್ಲಿ ನಾನು ಕುಳಿತಿದ್ದೆ. ನನ್ನ ಬಳಿ ಅಲ್ಲಿನ ಆದಿವಾಸಿಗಳ ಮುಖ್ಯಸ್ಥ ಕುಳಿತಿದ್ದ. ನಮ್ಮಿಬ್ಬರ ಸಂಭಾಷಣೆ ಯುದ್ಧೋತ್ತರ ಕಾಲದ ಆರ್ಥಿಕ ಸ್ಥಿತಿಗತಿಗಳ ಕಡೆ ಹೊರಳಿತು.

ಅವನ ದೂರುಗಳು ವ್ಯಾಪಕವಾಗಿದ್ದವು. ಆದರೆ ಎಲ್ಲಕ್ಕೂ ದೊಡ್ಡ ದೂರೆಂದರೆ, ಹೆಂಡಂದಿರು ವಿಪರೀತ ತುಟ್ಟಿಯಾದದ್ದು! ಈ ಮನುಷ್ಯ ನಗರವಾಸವನ್ನು ಕಂಡಂಥ ಅಕ್ಷರಸ್ಥ ಮತ್ತು ಶಿಕ್ಷಿತರಲ್ಲೊಬ್ಬನಾಗಿದ್ದುದರಿಂದ ಅವನ ದೂರು ನನಗೆ ಬಲು ಸೋಜಿಗವೆನಿಸಿತು.

ಅವನೆಂದದ್ದು: "ಇಪ್ಪತ್ತು ವರ್ಷಗಳ ಹಿಂದೆ ನನ್ನ ಮೊದಲ ಮದುವೆಯಾದಾಗ. ಸುತ್ತು-ಮುತ್ತಲ ಹಳ್ಳಿಗಳಲ್ಲಿ ಬರೀ ೩೦ ಆಡುಗಳಿಗೆ

'ಉತ್ತಮ ಹೆಂಡತಿ ಸಿಗುತ್ತಿದ್ದಳು. ಈಗಿನ ಬೆಲೆ ಕೇಳಿದರೆ ತಲೆ ತಿರುಗುತ್ತದೆ. ಸಾಧಾರಣ ವಾದ ರಿಯ ಹೆಂಡತಿ ಬೇಕಾದರೂ ಈಗ ೮೦ ಆಡು ಗಳನ್ನು ತೆರಬೇಕಾಗುತ್ತದೆ. ಉತ್ತಮ ಪ್ರತಿ ಗಂತೂ ೧೫೦ ಆಡುಗಳ ವರೆಗೂ ಬೇಡುತ್ತಾರೆ."

ಅಷ್ಟರಲ್ಲಿ ಹುಡುಗಿಯೊಬ್ಬಳು ಅಲ್ಲೇ ಹಾದು ಹೋದಳು. ಅವಳನ್ನು ತೋರಿಸಿ ಆದಿವಾಸಿ ಹೆಗ್ಗಡೆ ಕೇಳಿದ: "ಇವಳಿಗೆ ನಾನು ಏಷ್ಟು ಬೆಲೆ ಕೊಟ್ಟಿರಬಹುದೆನ್ನುತ್ತೀರಿ ?"

"ನಾನರಿಯೆನಪ್ಪಾ. ನಾನು ಎಂದೂ ಹೆಂಡತಿ ಯನ್ನು ಖರೀದಿ ಮಾಡಿದವನಲ್ಲ. ನನ್ನವಳು ಪುಕ್ಕಟೆ ಸಿಕ್ಕಿದವಳು," ಎಂದೆ ನಾನು.

"ತೊಂಭತ್ತು ಆಡು, ಮೇಲೊಂದು ದನ ಕೊಟ್ಟೆ ಸ್ವಾಮಿ, ಇವಳಿಗಾಗಿ" ಹೆಗ್ಗಡೆ ಅಂದ. "ಇವಳಪ್ಪ ಅದಕ್ಕಿಂತ ಒಂದು ಎರಡು ಆಡು ಕಡಿಮೆಯಾದರೂ ಒಲ್ಲೆನೆಂದ. ಏನು ಕಲಿಕಾಲ ಬಂತಪ್ಪಾ!"

ಹೆಗ್ಗಡೆ ಹೆಂಡತಿ-ವ್ಯಾಪಾರದ ಒಳಪಟ್ಟು ಗಳನ್ನೂ ವಿವರಿಸಿದ. "ಬೇಕಾದರೆ ಕಂತಿನ ಮೇಲೆ ಇವಳನ್ನು ಕೊಳ್ಳಲು ಶಕ್ಯವಿತ್ತು. ಎಷ್ಟೋ ಗಂಡಂದಿರು ಹಾಗೆ ಮಾಡುತ್ತಾರೆ. ಆದರೆ ನಾನು ಹೆಗ್ಗಡೆಯಾಗಿ ಹಾಗೆ ಮಾಡಲಾ ದೀತೆ?

"ಅಲ್ಲದೆ ಕಂತಿನ ಮೇಲೆ ಕೊಂಡ ಹೆಂಡಂ-ದಿರು ರೋಖ ಹೆಂಡಂದಿರ ಹಾಗೆ ಮೈಮುರಿ ದುಡಿಯುವುದಿಲ್ಲ. ಕಂತು ಬಾಕಿ ಬಿದ್ದರೆ ತಾವು ತಂದೆಯ ಮನೆಗೆ ತಿರುಗಿ ಹೋಗಬೇಕಾಗುವು ದೆಂದು ಅವರಿಗೆ ಗೊತ್ತಿದೆ. ಹೀಗಾಗಿ ಗಂಡನ ಮೇಲೆ ಅವರಿಗೆ ಗೌರವ ಉಳಿಯುವುದಿಲ್ಲ."

"ಆಹಾರ, ಬಟ್ಟೆ ಮೊದಲಾದ್ದರ ಮೇಲೆ ಗರಿಷ್ಠ ಬೆಲೆ ನಿರ್ಧರಿಸಿದ ಹಾಗೆ ಹೆಂಡತಿಯ ಬೆಲೆಯನ್ನೂ ಯಾಕೆ ನೀವು ನಿಯಂತ್ರಿಸಬಾ ರದು?" ನಾನು ಕೇಳಿದೆ. "ಅದನ್ನೂ ಮಾಡಿ ನೋಡಿದ್ದಾಗಿದೆ ಸ್ವಾಮಿ, ಏನೂ ಪ್ರಯೋಜನ ವಿಲ್ಲ" ಎಂದು ಹೆಗ್ಗಡೆ ತಲೆ ಅಲ್ಲಾಡಿಸಿದ.

ಅವನಂದ: "ಮದುವೆಯಾಗದ ಹೆಣ್ಣುಮಕ್ಕ ಳಿರುವವರೂ ಬಾಡಿಗೆಗೆ ಮನೆ ಕೊಡುವ ಒಡ ಯರೂ ಒಂದೇ ಜಾತಿ. ನಿಯಂತ್ರಣ ಹಾಕಿ ದಾಗ ನಮ್ಮಲ್ಲಿ ಹೆಂಡತಿಯ ಕಳ್ಳಪೇಟೆಯೇ ಮೆರೆಯತೊಡಗಿತು.

"ಹಾಗಂತ ಹೆಂಡಂದಿರಿಗೇನೂ ಬರಗಾಲ ವಿಲ್ಲ. ನನಗೆ ಏಳು ಜನ ಇದ್ದಾರೆ. ಇನ್ನೂ ಬೇಕಾದಷ್ಟು ತರಬಲ್ಲೆ. ಆದರೆ ಅವರ ಬೆಲೆ ಮಾತ್ರ ಅತಿಪ್ರಸರಣದ್ದು. ಆಕಾಶಬುಟ್ಟಿಯ ಹಾಗೆ ಅವರು ಇನ್ನೂ ಸುರುಳಿಸುರುಳಿಯಾಗಿ ಏರುತ್ತಲೇ ಇದ್ದಾರೆ."

ಆಕಾಶಬುಟ್ಟಿಯಂತೆ ಮೇಲೇರುವ ಹೆಂಡಂದಿ ರನ್ನು ನಾನು ಮನಸಿನಲ್ಲಿ ಚಿತ್ರಿಸಿಕೊಳ್ಳುತ್ತಿ ದ್ದಂತೆ ಹೆಗ್ಗಡೆ ಮುಂದುವರಿಸಿದ.

"ಹತ್ತು ಹನ್ನೆರಡು ಗಂಡು, ಹತ್ತು ಹನ್ನೆ ರಡು ಹೆಣ್ಣುಮಕ್ಕಳು ಒಬ್ಬ ಗೃಹಸ್ಥನಿಗಿದ್ದಾ ರೆಂದುಕೊಳ್ಳಿರಿ. ತನ್ನ ಹೆಂಡಂದಿರು, ಅವನಿಗೆ ಒಂದು ಕಾಲದಲ್ಲಿ ಅಗ್ಗವಾಗಿ ಸಿಕ್ಕಿದ್ದರು. ಆದರೆ ಈಗ ಗಂಡುಮಕ್ಕಳಿಗೆ ಮದುವೆ ಮಾಡಹೊರ ಟಾಗ ತೇಜೀ ಪೇಟೆಯಲ್ಲಿ ಅವನು ಕೊಳ್ಳ ಬೇಕಾಗಿದೆ. ಅವನೇನು ಮಾಡಬೇಕು? ತನ್ನ ಮಗಂದಿರಿಗೆ ಹೆಂಡಂದಿರನ್ನು ಕೊಳ್ಳಲು ಸಾಧ್ಯ ವಾಗುವಂತೆ ಅವನು ಮಗಳಂದಿರಿಗೆ ಶಕ್ಯವಿ ದ್ದಷ್ಟು ಹೆಚ್ಚು ಬೆಲೆ ಬೇಡಬೇಕಾಗುತ್ತದೆ. ಹೀಗೆ ಬೆಲೆಗಳ ಏರಾಟಿಕೆಯಾಗುತ್ತಿದೆ."

ನಾನೊಂದು ಸೂಚನೆ ಮಾಡಿದೆ: "ಅಂದ ಮೇಲೆ ಇಡೀ ಪದ್ಧತಿಯನ್ನೇ ಯಾಕೆ ರದ್ದು ಮಾಡಿಬಿಡಬಾರದು? ನಾವೆಲ್ಲ ಮಾಡುವಂತೆ ಪ್ರೇಮವಿವಾಹ ಪ್ರಾರಂಭಿಸಿಬಿಡಿರಲ್ಲ. ಎಲ್ಲ ತಂಟೆ ಬಗೆಹರಿದೀತು."

"ಛೀಛೀ, ಅದು ಹೇಗಾದೀತು, ಸ್ವಾಮೀ?" ಎಂದು ಹೆಗ್ಗಡೆ ತನ್ನ ಗಾಂಧೀ ಟೊಪ್ಪಿಗೆ ಸರಿ ಪಡಿಸಿಕೊಂಡ. (ಹಳೆಗಾಲದ ರುಮಾಲು

ಹೋಗಿ ಈ ಟೊಪ್ಪಿಗೆ ಬಂದಿತ್ತೀಗ). "ಹಿತ ಸಂಬಂಧ ಉಳ್ಳವರು ಎಂದಿಗೂ ಬಿಡರು. ಅದೊಂದು ಬಗೆಯ ಬಂಡವಾಳಕರವೆನಿಸೀತು. ಕನ್ಯಾಪಿತೃಗಳು ಬೊಬ್ಬಾಟ ಎಬ್ಬಿಸುವುದು ಖಂಡಿತ."

ಅವನು ಕಾರಣ ವಿವರಿಸಿದ: "ಈ ಕನ್ಯಾ ವಿಕ್ರಯ ಪದ್ಧತಿಗೆ ಬುನಾದಿ ಕಾಲದ ಆರ್ಥಿಕ ತಳಹದಿ ಇದೆ. ನೀವು ಭಾವಿಸಿದಷ್ಟು ಹುಚ್ಚು ಪದ್ಧತಿ ಅದಲ್ಲ. ನಿಮ್ಮಂತೆ ನಮಗೆ ಶೇರುಗಳೂ ಬ್ಯಾಂಕುಗಳೂ ಇಲ್ಲ. ನಮ್ಮ ಹೆಣ್ಣು ಪೀಳಿಗೆಯೇ—ನಮ್ಮ ಆಕಳು, ಹೆಣ್ಣು ಆಡು, ಮತ್ತು ಹೆಂಗಸರೇ ನಮ್ಮ ಬಂಡವಾಳ."

ತಿಳಿಯಿತೆ? ಬ್ಯಾಂಕಿನಲ್ಲಿ ಒಂದು ಕಾಯಂ ಠೇವು ಇಡುವ ಬದಲು ಈ ಜನರು ಒಂದು ದನವನ್ನು ಕೊಳ್ಳುತ್ತಾರೆ. ಇನ್ನೊಂದು ಸೇವಿಂಗ್ಸ್ ಸರ್ಟಿಫಿಕೇಟನ್ನು ನೀವು ಕೊಳ್ಳುವಂತೆ ಇನ್ನೊಂದು ಹೆಂಡತಿಯನ್ನು ಕೊಳ್ಳುತ್ತಾರೆ.

ಪ್ರತಿ ಕುಟುಂಬಕ್ಕೂ ಇಂತಿಷ್ಟು ಭೂಮಿ, ಇಂತಿಷ್ಟು ದನಕರು, ಇಂತಿಷ್ಟು ಹೆಂಗಸರು—ಇದು ಬಂಡವಳು. ಒಬ್ಬ ಹುಡುಗಿಯನ್ನು ಹೆಂಡತಿಯೆಂದು ಇನ್ನೊಂದು ಕುಟುಂಬಕ್ಕೆ ಕೊಡುವುದೆಂದರೆ ಬಂಡವಾಳದಲ್ಲಿ ಅಷ್ಟು ಹೊರಟುಹೋದಂತೆ. ಅದಕ್ಕೆ ಪ್ರತಿಫಲವಾಗಿ ಅವರು ಬೇರೇನನ್ನಾದರೂ ಸಹಜವಾಗಿ ಅಪೇಕ್ಷಿಸುತ್ತಾರೆ. ಇದೇ ತೆರದ ಮೂಲ.

ಅವಳನ್ನು ಗಂಡ ಸೋಡಚೀಟಿ ಕೊಟ್ಟು ತ್ಯಜಿಸಿದನೆಂದರೆ ಅವಳು ತಿರುಗಿ ತೌರುಮನೆಗೆ ಬರುತ್ತಾಳೆ. ಆಗ ಅವನು ತೆತ್ತ ಬೆಲೆಯನ್ನು ತಿರುಗಿ ಕೊಡಬೇಕಾಗುವುದು. ಆದರೆ ಅವಳು ಹಡೆದ ಮಕ್ಕಳಿಗೆ ಪ್ರತಿಯೊಂದಕ್ಕೆ ಇಂತಿಷ್ಟೆಂದು ಸವಕಳಿ ಮುರಿದುಕೊಳ್ಳಲಾಗುವುದು!

ಯಥಾಸ್ಥಿತ ಜೀವನದ ಕಾಲದಲ್ಲಿ ಈ ಪದ್ಧತಿಯಿಂದ ಏನೂ ತೊಂದರೆಯಿರಲಿಲ್ಲ. ಆದರೆ ಈಗ ಹೆಂಡಂದಿರ ಬೆಲೆ ಗಗನಕ್ಕೇರಿದ್ದರಿಂದ ಕಷ್ಟ ಬಂದಿದೆ.

ಭಾರತದಲ್ಲಿ ಬೆಲೆಗಳೇರಿದಂತೆ ನಾವು ಹೆಚ್ಚು ನೋಟು ಮುದ್ರಿಸಿ ಸರಕುಗಳನ್ನು ಕೊಳ್ಳುತ್ತೇವೆ. ಇಲ್ಲಿ ಹೆಂಡಂದಿರ ಬೆಲೆ ಏರಿದರೆ ಇವರು ತಮ್ಮ ಆಡು-ಆಕಳುಗಳ ಚಲಾವಣೆ ಹೆಚ್ಚಿಸಬೇಕಾಗುವುದು.

ಆದರೆ ನೋಟುಗಳಂತೆ ಆಕಳು ಹೊಟ್ಟೆಗಿಲ್ಲದೆ ಬದುಕುವುದೆ? ವಧುಗಳ ಬೆಲೆ ಏರುತ್ತ ಬಂದಂತೆ ಆಡು ಆಕಳುಗಳ ಸಂಖ್ಯೆ ಮಿತಿಮೀರಿ ಈಗ ಅವುಗಳಿಗೆ ಮೇಯಲು ಸ್ಥಳ ಇಲ್ಲದಂತಾಗಿದೆ. ಮೇಯ್ದು ಮೇಯ್ದು ಭೂಮಿ ಬರಡಾಗುತ್ತಿದೆ.

"ಇದಕ್ಕೆ ಒಂದೇ ಉಪಾಯ. ಇಂಗ್ಲೀಷರು ಪೌಂಡಿನ ಬೆಲೆ ಇಳಿಸಿದಂತೆ ನಾವೂ ಹೆಂಡಂದಿರ ಮೌಲ್ಯಚ್ಛೇದ ಮಾಡಬೇಕು" ಎಂದನಾ ಹೊಸ ಕಾಲದ ಚತುರ ಹೆಗ್ಗಡೆ.



## ದಂತ—ಕಥೆ

ಹಲ್ಲಿನ ಆರೋಗ್ಯ ವಿಚಾರದಲ್ಲಿ ವಿಶ್ವವ್ಯಾಪಿ ಪರಿಶೀಲನೆ ನಡೆಸಿವಾಗ ಅಮೇರಿಕೆಯಲ್ಲಿಯ ೩೦,೦೦೦ ಜನರ ಹಲ್ಲುಗಳ ಪರೀಕ್ಷೆ ಮಾಡಲಾಯಿತು. ಅವರಲ್ಲಿ ಕೇವಲ ಮೂರು ಜನರ ಹಲ್ಲುಗಳು ಮಾತ್ರ ಸಂಪೂರ್ಣ ನಿರೋಗಿಯಾಗಿದ್ದವು. ಆದರೆ ಆಫ್ರಿಕೆಯಲ್ಲಿ ತೀರ ಹಿಂದುಳಿದ ನೈಜೇರಿಯ ಪ್ರದೇಶದಲ್ಲಿ ವಾಸಿಸುವ ಜನರ ಹಲ್ಲುಗಳು ಜಗತ್ತಿನಲ್ಲಿಯೆ ಅತಿ ಆರೋಗ್ಯಯುಕ್ತವಾಗಿವೆಯೆಂದು ಕಂಡುಬಂದಿದೆ. ಅಲ್ಲಿರುವ ೨,೨೦,೦೦,೦೦೦ ಜನರಿಗೆ ಕೇವಲ ಮೂವರು ಹಲ್ಲಿನ ವೈದ್ಯರಿದ್ದಾರೆ.

ಆಗ ಬಂಗಾರಕ್ಕಿಂತಲೂ
ತುಟ್ಟಿಯಾಗಿದ್ದುದು ಈಗ—

ಅಲ್ಯುಮಿನಿಯಂ ಶೋಧವಾದ ಮೇಲೂ
ಅದನ್ನು ಶುದ್ಧೀಕರಿಸುವುದು ಬಹಳ ಪ್ರಯಾಸ
ಹಾಗು ವೆಚ್ಚದ ಕೆಲಸವಾಗಿ ಉಳಿಯಿತು

# ಬಡವನ ಲೋಹ — ಅಲ್ಯುಮಿನಿಯಂ

"ಬಡವನ ಲೋಹ" ಎನಿಸಿದ ಅಲ್ಯುಮಿನಿಯಂ ನೂರೇ ವರ್ಷಗಳ ಹಿಂದೆ ಅಷ್ಟು ಬಡವನದಾಗಿರಲಿಲ್ಲ. ೧೮೫೫ಕ್ಕಿಂತ ಹಿಂದೆ ಅದರ ಬೆಲೆ ತೊಲೆಗೆ ಏನಿಲ್ಲೆಂದರೂ ರೂ. ೩೬ ರಷ್ಟಿತ್ತು. ಇದು ಬಂಗಾರದ ಅಂದಿನ ಬೆಲೆಗಿಂತಲೂ ಎಷ್ಟೋ ಹೆಚ್ಚಾಗಿತ್ತು. ಮತ್ತು ಫ್ರಾನ್ಸಿನ ಮೂರನೇ ನೆಪೋಲಿಯನ್ ದೊರೆಗೆ ತನ್ನ ರಾಜಭೋಜನ ಕೂಟಗಳ ವೈಭವ ಹೆಚ್ಚಿಸಬೇಕೆಂಬ ಶೋಕಿ ಎದ್ದಾಗ ಅವನು ಬೆಳ್ಳಿ ಬಂಗಾರಗಳ ಭೋಜನ ತಟ್ಟೆಗಳನ್ನು ರದ್ದುಪಡಿಸಿ ಅಲ್ಯುನಿನಿನಿಯಂನವನ್ನು ಮಾಡಿಸಿದನು! ಸಿಯಾಮದ ಅರಸನು ರಾಜಾತಿಥಿಯಾಗಿ ಬಂದಾಗ ಫ್ರೆಂಚ ಚಕ್ರವರ್ತಿ ಅವನಿಗೆ ಅಲ್ಯುಮಿನಿಯಂನಿಂದ ತಯಾರಿಸಿದ ಗಡಿಯಾರದ ಸರಪಳಿಯನ್ನು ಉಡುಗರೆ ಕೊಟ್ಟನು.

ಅಂದು ಅಲ್ಯುಮಿನಿಯಂ ಜಗತ್ತಿನಲ್ಲೊಂದು ಹೊಸ ಲೋಹ ಮತ್ತು ಕೌತುಕವಾಗಿತ್ತು. ಭೂಮಿಯಲ್ಲಿ ಎಲ್ಲೆಲ್ಲಿಯೂ ವಿಪುಲವಾಗಿದ್ದರೂ ಈ ಲೋಹದ ಶೋಧವಾದದ್ದು ಕೇವಲ ೧೮೨೫ರಲ್ಲಿ. ತಾಮ್ರ ತವರುಗಳು ಏನಿಲ್ಲೆಂದರೂ ೭,೦೦೦ ವರ್ಷಗಳಿಂದ ಮತ್ತು ದುರ್ಲಭವಾದ ಬಂಗಾರ ೫,೦೦೦ ವರ್ಷಗಳಿಂದ ಮನುಷ್ಯನಿಗೆ ಪರಿಚಿತವಾಗಿದೆಯೆಂದರಿತರೆ ಈ ಸಾರ್ವತ್ರಿಕ ಲೋಹ ಇಷ್ಟು ಕಾಲ ಮನುಷ್ಯನ ಕಣ್ಣು ತಪ್ಪಿಸಿ ಉಳಿದಿದ್ದು ಸೋಜಿಗವೆನಿಸದಿರದು.

ಮೂವತ್ತು ವರ್ಷಗಳ ನಂತರ, ೧೮೫೫ ರಲ್ಲಿ, ನೆಪೋಲಿಯನ್ನನ ಪ್ರೇರಣೆಯಿಂದ ಬಹಳ ಸಾಹಸಪಟ್ಟು ತಕ್ಕ ಮಟ್ಟಿಗೆ ಅಗ್ಗವಾಗಿಯೂ ವಿಪುಲವಾಗಿಯೂ ಅದನ್ನು ಶುದ್ಧೀಕರಿಸುವ ಪದ್ಧತಿಯನ್ನು ಸೆಂಟ್‌ಕ್ಲೇರ್ ಡಿವಿಲಿಯೆಂಬ ಪ್ರಸಿದ್ಧ ಫ್ರೆಂಚ ವಿಜ್ಞಾನಿ ಹುಡುಕಿ ತೆಗೆದನು. ಆದರೆ ಇದೂ ಅತಿ ಸುಲಭವಾಗಿರಲಿಲ್ಲ. ಅವನ ಪದ್ಧತಿ ಬೆಳಕಿಗೆ ಬಂದ ಮೇಲೂ ಹತ್ತು ವರ್ಷಗಳ ಅವಧಿಯಲ್ಲಿ ಹತ್ತು ಟನ್ನಿಗಿಂತ ಹೆಚ್ಚು ಲೋಹ ಉತ್ಪಾದಿಸಲ್ಪಡಲಿಲ್ಲ.

ಮತ್ತೆ ಮೂವತ್ತು ವರ್ಷ ಕಾಲ ಕಾದ ಮೇಲೆಯೇ ಅಗ್ಗದ ಅಲ್ಯುಮಿನಿಯಂ ಶುದ್ಧಿಯ ಉಪಾಯ ಬೆಳಕಿಗೆ ಬಂದದ್ದು. ೧೮೮೬ ರಲ್ಲಿ ಅಮೇರಿಕದ ಚಾರ್ಲ್ಸ್ ಹಾಲ್ ಮತ್ತು ಫ್ರಾನ್ಸಿನ ಪಾಲ್ ಹೆರೋಲರೆಂಬ ತಜ್ಞರು ಇಂದಿನ ಇಲೆಕ್ಟ್ರೋಲಿಟಿಕ ಪದ್ಧತಿಯನ್ನು ಕಂಡುಹಿಡಿದು ಉದ್ಯಮದಲ್ಲಿ ಕ್ರಾಂತಿಯುಂಟುಮಾಡಿದರು. ೧೮೮೬ ರಲ್ಲಿ ಜಾಗತಿಕ ಅಲ್ಯುಮಿನಿಯಂ ಉತ್ಪಾದನೆ ೧೬ ಟನ್ ಇದ್ದರೆ ೧೯೪೯ ರಲ್ಲಿ ಅದು ೨,೮೧,೬೧೫ ಟನ್ನಿಗೇರಿತು. ೧೯೫೨ ರಲ್ಲಿ ಅದು ೨೦,೫೦,೦೦೦ ಟನ್ನಿಗೇರಿತೆಂದು ಅಂದಾಜು ಮಾಡಲಾಗಿದೆ. ೧೮೫೫-೧೮೬೫ ರಲ್ಲಿ ಪೌಂಡಿಗೆ ರೂ. ೪೦ ಇದ್ದ ಅದರ ಬೆಲೆ ೧೯೫೪ ರಲ್ಲಿ ಪೌಂಡಿಗೆ ೧೨ ಆಣೆಗಿಳಿಯಿತು.

ಅಲ್ಯುಮಿನಿಯಂ ಲೋಹವು ಜಗತ್ತಿನ ಹೆಚ್ಚು ಕಡಿಮೆ ಎಲ್ಲ ಅದುರುಗಳಲ್ಲಿಯೂ ಸಿಲಿಕನ್ ಯುಕ್ತ ಬಂಡೆಗಳಲ್ಲಿಯೂ ಸಿಗುತ್ತದೆ. ಆದರೆ ಹೆಚ್ಚಾಗಿ ಅದನ್ನು ಬಾಕ್ಸೈಟಿನಿಂದಲೇ ತೆಗೆಯುತ್ತಾರೆ. ಅದರಲ್ಲಿದ್ದ ಅಲ್ಯುಮಿನಿಯಂ ಭಸ್ಮದ (ಅಲ್ಯುಮಿನಿಯಂ ಆಕ್ಸೈಡ್) ಅಂಶವನ್ನು

ಮೊದಲು ಬೇರ್ಪಡಿಸಿ ಆ ಮೇಲೆ ಅದನ್ನೂ ಕ್ರಯೋಲೈಟ್ ಎಂಬ ಇನ್ನೊಂದು ಅಲ್ಯುಮಿನಿಯಂ ಸಂಯುಕ್ತವನ್ನೂ ಒಟ್ಟಿಗೆ ಕುದಿಸಿ ಪ್ರಬಲ ವಿದ್ಯುತ್ ಸಂಚಾರದಿಂದ ಶುದ್ಧ ಅಲ್ಯುಮಿನಿಯಂ ಹೊರಡಿಸಲಾಗುತ್ತದೆ. ವಿದ್ಯುತ್ತು ಅಗ್ಗವಾಗಿರುವಲ್ಲೆಲ್ಲ ಅಲ್ಯುಮಿನಿಯಂ ಗಟ್ಟಿಗಳನ್ನು ಅಗವಾಗಿ ತಯಾರಿಸಬಹುದು.

ತನ್ನ ಅನೇಕ ಗುಣಗಳಿಂದ ಅಲ್ಯುಮಿನಿಯಂ ಅಸಂಖ್ಯ ಉದ್ಯಮಗಳಲ್ಲಿ ಉಪಯುಕ್ತವಾಗಿದೆ.

ಲಂಡನ್ನಿನಲ್ಲಿ ೫೦ ವರ್ಷಗಳ ಹಿಂದೆ ನಿಲ್ಲಿಸಿದ ಕಾಮದೇವನ ವಿಗ್ರಹವೊಂದು ಬಿಸಿಲು ಮಳೆಗಳ ಆಘಾತವನ್ನೆಲ್ಲ ತಡೆದುಕೊಂಡು ಇಂದಿಗೂ ಕಾಂತಿ ಕಳೆದುಕೊಳ್ಳದೆ ಉಳಿದಿದೆ. ಆ ವಿಗ್ರಹ ಅಲ್ಯುಮಿನಿಯಂ ನಿರ್ಮಿತವಾದದ್ದು. ತೇವ ಮತ್ತು ಪ್ರಾಣವಾಯು ಸಾಮಾನ್ಯ ಲೋಹಗಳನ್ನು ಕೊರೆಯುವಷ್ಟು ಸುಲಭವಾಗಿ ಅಲ್ಯುಮಿನಿಯಂ ಮೇಲೆ ಪರಿಣಾಮ ಮಾಡುವುದಿಲ್ಲ. ಹೊರಮೈಯಲ್ಲಿ ತೆಳ್ಳನ್ನ ಆಕ್ಸೈಡ್ ಪರೆಯೊಂದು ನಿರ್ಮಿತವಾಗಿ ಒಳಗಿನ ಲೋಹವನ್ನು ಹಚ್ಚಿನ ಕೊರತದಿಂದ ರಕ್ಷಿಸುವುದು ಅಲ್ಯುಮಿನಿಯಂನ ಒಂದು ಗುಣ.

ಹಗುರತನವಂತೂ ಅಲ್ಯುಮಿನಿಯಂನ ಅದ್ವಿತೀಯ ಗುಣ. ಹಿತ್ತಾಳೆಯಿಂದ ಮಾಡಿದರೆ ೧,೭೦೦ ಗ್ರಾಂ ತೂಗುವ ಶಿರಸ್ತ್ರಾಣವು ಅಲ್ಯುಮಿನಿಯಂನಿಂದ ತಯಾರಿಸಿದರೆ ೭೦೦ ಗ್ರಾಮಿನಷ್ಟೇ ಆಗುವುದು. ಈ ಗುಣದ ಸಂಗಡ ಅದಕ್ಕೆ ಗಟ್ಟಿತನವೂ ಇದೆ. ಅಲ್ಯುಮಿನಿಯಂ ಮಿಶ್ರಿತ ಎರಕಗಳು ಉಕ್ಕಿಗಿಂತ ಹಗುರವಾಗಿರುವುವಲ್ಲದೆ ಕೆಲ ವಿಷಯಗಳಲ್ಲಿ ಅದಕ್ಕಿಂತ ಗಟ್ಟಿಮುಟ್ಟಾಗಿರುತ್ತವೆ.

ಅಲ್ಯುಮಿನಿಯಂ, ಉಷ್ಣತೆ ಮತ್ತು ವಿದ್ಯುತ್ತಿನ ಒಳ್ಳೆ ವಾಹಕವಾಗಿದೆ. ಅದರ ಕಾಂತಿಯುಕ್ತ ಮೈಯಲ್ಲಿ ಪ್ರಕಾಶದ ಪ್ರತಿಫಲನ ಶಕ್ತಿಯಿದೆ. ಅಪರ ಲವಣಗಳು ವರ್ಣ, ರುಚಿ ಮತ್ತು ವಿಷಗಳಿಂದ ರಹಿತವಾಗಿರುವದರಿಂದ ಆಹಾರೋದ್ಯಮಗಳಲ್ಲಿಯೂ ಅಡಿಗೆಯ ಪಾತ್ರೆಗಳಿಗೂ ಅದನ್ನು ನಿರ್ಭಯವಾಗಿ ಉಪಯೋಗಿಸಬಹುದಾಗಿದೆ. ಅದು ತಾಮ್ರಕ್ಕಿಂತಲೂ ಉತ್ತಮ ವಿದ್ಯುದ್ವಾಹಕವಾಗಿರುವದರಿಂದ ದೂರಗಾಮಿ ವಿದ್ಯುತ್ ತಂತಿಗಳಿಗೆ ಅದನ್ನು ಭಾರತವನ್ನೊಳಗೊಂಡು ಅನೇಕ ದೇಶಗಳು ಬಳಸುತ್ತಿವೆ. ಉಷ್ಣತಾವಾಹಕವಿರುವುದರಿಂದ ಎಂಜಿನ್ನಿನ ಅನೇಕ ಭಾಗಗಳನ್ನು ಅದರಿಂದ ಮಾಡುತ್ತಾರೆ.

ಸಿಗರೇಟು, ಚೊಕಲೇಟು ಮೊದಲಾದವುಗಳನ್ನು ಸುತ್ತಿರುವ, ಮಕ್ಕಳನ್ನು ಮರುಳುಗೊಳಿಸುವ, ಆ ಮಿರಿಮಿರಿ "ಕಾಗದ" ಯಾತರದೆ

ಭಾರತದಲ್ಲಿ ಅಲ್ಯುಮಿನಿಯಂ ಗಟ್ಟಿಗಳು ೧೯೪೩ರಲ್ಲಿ ಮೊದಲು ತಯಾರಾದವು. ಇದಕ್ಕೆ ವಿದೇಶದಿಂದ ಅಲ್ಯುಮಿನಾ (ಅಲ್ಯುಮಿನಿಯಂ ಭಸ್ಮ) ತರಿಸಲಾಗುತ್ತಿತ್ತು. ಈಗ ಭಾರತೀಯ ಬಾಕ್ಸಾಯಿಟದಿಂದಲೇ ಅಲ್ಯುಮಿನಿಯಂ ಗಟ್ಟಿಗಳು ತಯಾರಾಗುತ್ತವೆ. ಅಸನಸೋಲ (ಬಂಗಾಲ), ಮುರಿ (ಬಿಹಾರ), ಆಳ್ವಾಯಿ (ತಿರುಕೊಚ್ಚಿ), ಬೇಲೂರು (ಬಂಗಾಲ) ಗಳು ಅಲ್ಯುಮಿನಿಯಂ ಉದ್ದಿಮೆಯ ಮುಖ್ಯ ಕೇಂದ್ರಗಳಾಗಿವೆ. ೧೯೫೪ರಲ್ಲಿ ಭಾರತೀಯ ಅಲ್ಯು-ಮಿನಾ ಉತ್ಪಾದನೆ ೧೧,೪೨೫ ಟನ್ನ ಮತ್ತು ಅಲ್ಯುಮಿನಿಯಂ ಉತ್ಪಾದನೆ ೪,೮೫೬ ಟನ್ನ ಇತ್ತು. ೧೯೫೫ರ ಕೊನೆಗೆ ಭಾರತದಲ್ಲಿನ ಅಲ್ಯುಮಿನಿಯಂ ಗಟ್ಟಿಗಳ ಬೆಲೆ ಹಂಡ್ರಡ್ವೇಟಿಗೆ ರೂ. ೧೬೨-೮-೦, ಅಲ್ಯುಮಿನಿಯಂ ತಗಡಿನ ಬೆಲೆ ಹಂಡ್ರಡ್ವೇಟಿಗೆ ರೂ. ೨೩೪-೮-೦ ಇತ್ತು.

ಭಾರತದಲ್ಲಿ ಅಲ್ಯುಮಿನಿಯಂ ನೀಡಬಲ್ಲ ೨.೫ ಕೋಟಿ ಟನ್ನ ಬಾಕ್ಸಾಯಿಟ ಅದುರು ಇದೆಯೆಂದು ಅಂದಾಜು ಮಾಡಲಾಗಿದ್ದು ವರ್ಷಕ್ಕೆ ೫೦,೦೦೦ ಟನ್ನಿನಂತೆ ೧೦೦ ವರ್ಷಗಳ ವರೆಗೆ ಸಿದ್ಧ ಅಲ್ಯುಮಿನಿಯಂ ಉತ್ಪಾದಿಸಲು ಸಾಲುವಷ್ಟು ಅದುರು ಸುಲಭಲಭ್ಯ ಸ್ಥಿತಿಯಲ್ಲಿದೆ.

ನ್ನುತ್ತೀರಿ? ಅದು ಒಂದಂಗುಲದ ೧/೫೦೦ರಷ್ಟು ತೆಳ್ಳಗೆ ಬಡಿಯಲ್ಪಟ್ಟ ಅಲ್ಯುಮಿನಿಯಂ ಪರೆ. ಅದು ಅಗ್ನಿ, ಥಳಥುಪ್ಪಡಿ ಮತ್ತು ಧೂಲಿ-ಸ್ತಂಭಕವಾಗಿದೆ. ಅಲ್ಯುಮಿನಿಯಂ ಪೇಂಟ್ ಹಚ್ಚಿದ ಕಬ್ಬಿಣದ ಸಾಮಾನುಗಳಿಗೆ ಶುಭ್ರ ರೂಪ ಬರುವದಲ್ಲದೆ ಜಂಗೂ ಹತ್ತುವದಿಲ್ಲ.

ಅಲ್ಯುಮಿನಿಯಂನ ಕಾಂತಿ ಗುಣದಿಂದ ಅದು ಹಲಬಗೆಯಲ್ಲಿ ಉಪಯುಕ್ತವಾಗಿದೆ. ಅದು ಉಷ್ಣತಾ ಕಿರಣಗಳನ್ನೂ ಅತಿ-ನೇರಿಳೆಕಿರಣಗಳನ್ನೂ ನಿರೋಧಿಸುವುದರಿಂದ ಪೆಟ್ರೋಲು, ಹಾಲು ಮೊದಲಾದ ದ್ರವಗಳ ಡಬ್ಬಿಗಳನ್ನು ಮುಚ್ಚಲು ಅವರ ಪರೆಗಳನ್ನೇ ಉಪಯೋಗಿಸುತ್ತಾರೆ. ಅದು ಬೆಳ್ಳಿಯಂತೆ ಕಂದುವುದಿಲ್ಲವಾದ್ದರಿಂದ ಮತ್ತು ಶೇಕಡಾ ೮೦ಕ್ಕಿಂತಲೂ ಹೆಚ್ಚು ಅತಿ ನೇರಿಳೆ ಕಿರಣಗಳನ್ನು ಪ್ರತಿಫಲಿಸುವುದರಿಂದ ಖಗೋಲ ಶಾಸ್ತ್ರಜ್ಞರು ತಮ್ಮ ಪ್ರಚಂಡ ದೂರದರ್ಶಕ ಕನ್ನಡಿಗಳಿಗೆ ಈಗ ಬೆಳ್ಳಿಯ ಒಪ್ಪದ ಬದಲು ಅಲ್ಯುಮಿನಿಯಂ ಒಪ್ಪ ಹಾಕುತ್ತಿದ್ದಾರೆ

ಆದರೆ ಅಲ್ಯುಮಿನಿಯಂ ಮಿಶ್ರಿತ ಎರಕಗಳನ್ನು ವಿಮಾನಗಳ ನಿರ್ಮಾಣಕ್ಕೆ ಉಪಯೋಗಿಸುವುದು ಎಲ್ಲಕ್ಕೂ ಮಹತ್ವದ್ದಾಗಿದೆ. ಹಗುರುತನ, ದಾರ್ಢ್ಯ, ಜಂಗು ಹಿಡಿಯದಿರುವುದು, ಪ್ರಕಾಶದ ಪ್ರತಿಫಲನ ಇವೆಲ್ಲ ಗುಣಗಳಿಂದ ಅದು ವಿಮಾನಗಳ ನಿರ್ಮಾಣಕ್ಕೆ ಆದರ್ಶ ಲೋಹವಾಗಿದೆ.

ಅಲ್ಯುಮಿನಿಯಂನಲ್ಲಿ ಇನ್ನೊಂದು ವಿಚಿತ್ರ ಗುಣವಿದೆ. ಅದರ ಮಿಶ್ರಣವುಳ್ಳ ಎರಕಗಳನ್ನು ಕರಗಿಸಿ ಮತ್ತೆ ತಣಿಯಬಿಟ್ಟರೆ ಅವು ಬರುಬರುತ್ತ ಮೊದಲಿಗಿಂತಲೂ ದೃಢವಾಗುತ್ತವೆ. ಜರ್ಮನ್ ವಿಜ್ಞಾನಿ ಆಲ್ಫ್ರೆಡ್ ವಿಲ್ಮನ್ನನು ಆಕಸ್ಮಿಕವಾಗಿ ಕಂಡುಹಿಡಿದ ಈ ಗುಣವು ಬೇರೆ ಬೇರೆ ಕೆಲಸಗಳಿಗಾಗಿ ಬೇರೆ ಬೇರೆ ಬಗೆಯ ಅಲ್ಯುಮಿನಿಯಂ ಎರಕಗಳನ್ನು ಉಪಯೋಗಿಸಿ ಕ್ರಾಂತಿಕಾರಕ ಕಾರ್ಯಗಳನ್ನು ಸಾಧಿಸಲು ಅನುವು ಮಾಡಿಕೊಟ್ಟಿದೆ.

ಬಸ್ಸಿನ ಬಾಡಿಗಳನ್ನೂ ರೇಲ್ವೆ ಡಬ್ಬಿಗಳನ್ನೂ ಈಗೀಗ ಹೆಚ್ಚಾಗಿ ಅಲ್ಯುಮಿನಿಯಂನಿಂದಲೇ ತಯಾರಿಸಲಾಗುತ್ತಿದೆ. ಉಕ್ಕಿನಷ್ಟೇ ಬಲಿಷ್ಠವಾಗಿದ್ದರೂ ಅದಕ್ಕಿಂತ ಹಗುರಾದ ಈ ಗಾಡಿಗಳಿಂದ ಉರುವಲು ಉಳಿಯುವುದಲ್ಲದೆ ರೇಲ್ವೆಗಳಲ್ಲಿ ಹೆಚ್ಚು ಡಬ್ಬಿಗಳನ್ನು ಎಂಜಿನುಗಳಿಗೆ ಜೋಡಿಸಲು ಬರುತ್ತದೆ.

ಎರಡನೇ ಮಹಾಯುದ್ಧಾನಂತರ ಅಲ್ಯುಮಿನಿಯಂನ್ನು ಕೆಲ ಅಪೂರ್ವ ಕಾರ್ಯಗಳಲ್ಲಿ ತೊಡಗಿಸಲಾಗುತ್ತಿದೆ. ಬ್ರಿಟನ್ನಿನಲ್ಲಿ ಅಲ್ಯುಮಿನಿಯಂಮಯವಾದ ೭೦,೦೦೦ ಪೂರ್ವನಿರ್ಮಿತ ಮನೆಗಳನ್ನು ಕಟ್ಟಲಾಗಿದೆಯಲ್ಲದೆ ಸಾಮಾನ್ಯ ಮನೆಗಳ ಛತ್ತಿನಿಂದಾರಂಭಿಸಿ ಕಿಡಿಕಿಗಳ ವರೆಗೆ ಹಲ ಭಾಗಗಳಿಗೆ ಅದೇ ಲೋಹ ಬಳಸಲಾಗುತ್ತಿದೆ. ಅಲ್ಲಿನ ಸಂದರಲಂಡ್ ಸೇತುವೆ ಇಡೀ ಅಲ್ಯುಮಿನಿಯಂಮಯವೇ ಆಗಿದೆ. ಹಡಗುಗಳಲ್ಲಿನ ಆಪತ್-ನೌಕೆ (ಲೈಫ ಬೋಟು) ಗಳಿಗೂ ವಿನಾಶಿಕೆಗಳ ಟ್ರ್ಯಾಲರುಗಳಿಗೂ ಅಲ್ಯುಮಿನಿಯಂ ಉಪಯೋಗವಾಗುತ್ತಿದೆ.

ಪ್ರತಿ ವರ್ಷವೂ ಅಲ್ಯುಮಿನಿಯಂನ ಹೊಸ ಹೊಸ ಚಿತ್ರವಿಚಿತ್ರ ದಿನಬಳಕೆಯ ಸರಕುಗಳು ಬರುತ್ತಿವೆ. ಅಲ್ಯುಮಿನಿಯಂನ ಜಂಗು ನಿರೋಧಕತೆಯನ್ನು ಹೆಚ್ಚಿಸುವ ವಿಧಾನದ ಜತೆಗೆ ಅದರಲ್ಲಿ ಬಣ್ಣಗಳನ್ನು ಹೀರಿಕೊಳ್ಳುವ ಶಕ್ತಿಯಿರುವುದನ್ನು ಗುರುತಿಸಲಾಯಿತು. ಅದರಿಂದ ಸಿಗರೇಟು ಕೇಸು, ಭಸ್ಮಪಾತ್ರೆ, ಸಾಬಾಣಪೆಟ್ಟಿಗೆ, ಬರವಣಿಗೆ ಪ್ಯಾಡುಗಳೇ ಮೊದಲಾದವುಗಳನ್ನು "ರಂಗರಂಗೀಲಿ" ರೂಪದಲ್ಲಿ ತಯಾರಿಸಿ ಪೇಟೆಗೆ ತರಲಾಗುತ್ತಿದೆ. ವೆಲ್ಡಿಂಗ್ ಮೊದಲಾದ ಔದ್ಯೋಗಿಕ ಕರ್ಮಗಳಲ್ಲಿ ಅಲ್ಯುಮಿನಿಯಂ ನೂತನ ಉಪಯೋಗಗಳಿಗೆ ಬರುತ್ತಿದೆ.

ಸಾಮಾನ್ಯ ಲೋಹಗಳಲ್ಲಿ ಅಲ್ಯುಮಿನಿಯಂ ಎಲ್ಲಕ್ಕೂ "ಎಳೆ"ಯದು — ಆದರೆ ಉಪಯೋಗದಲ್ಲಿ ಅದು ಆಗಲೇ ಹಿರಿ ಲೋಹಗಳ ಸಾಲಿನಲ್ಲಿ ಸೇರಿದೆ.

ಸಾಕ್ಷಿ ಪುರಾವೆಗಳಲ್ಲಿ ಹುರುಳಿದ್ದಿಲ್ಲ. ಆದರೂ
ನಾಲ್ವರು ತರುಣರು ನೇಣಿಗೆ ಕೊರಳೊಡ್ಡಬೇಕಾಯಿತು

# ಮರೆಯಲಾರದ ಕಯ್ಯೂರ ಪ್ರಕರಣ

ತಲಚೇರಕರ ರಂಗರಾಯರಿಂದ

ಕಯ್ಯೂರ ಖಟ್ಲೆಯು ಕರ್ನಾಟಕದಲ್ಲಿ ನಡೆದ ಒಂದು ಮಹತ್ವದ ಹಾಗೂ ಅತಿ ದೊಡ್ಡ ಖಟ್ಲೆಯೆನ್ನಬಹುದು. ಅದು ಸತತ ಎರಡು ತಿಂಗಳ ತನಕ ನಡೆಯಿತು. ಆರೋಪಿತರ ಸಂಖ್ಯೆ ೬೦ ; ಸಾಕ್ಷಿಗಾರರು ೭೪.

ಆರೋಪಿತರಲ್ಲಿ ಹೆಚ್ಚಿನವರು ರೈತರು. ಇಬ್ಬರು ಶಾಲಾ ಮಾಸ್ತರರು, ಇಬ್ಬರು ಜೋಯಿಸರು, ಒಬ್ಬನು ದೇಶೀ ವೈದ್ಯನು, ಒಬ್ಬನು ಬಿ.ಎ. ಪದವೀಧರನಿದ್ದು ಮಲಬಾರ ಜಿಲ್ಲಾ ಲೋಕಲ ಬೋರ್ಡದ ಸದಸ್ಯನಿದ್ದನು.

ನಾಲ್ವರು ಆರೋಪಿತರಿಗೆ ಅಂಪರೆ ಮಠದ ಅಪ್ಪು, ಕುಂಇಂಬು ನಾಯರ, ಚಿರುವೆಂಡನ್, ಅಬುಬಕರ ಇವರಿಗೆ ಮರಣದಂಡನೆಯಾಯಿತು. ಕೃಷ್ಣನ್ ನಾಯರ ಎಂಬವನು ಖೂನಿಯ ಆರೋಪದ ಮೇಲೆ ದೋಷಿಯೆಂದು ಹಿಡಿಯಲ್ಪಟ್ಟರೂ ಹದಿನಾರು ವರ್ಷಗಳಿಗಿಂತ ಕಡಿಮೆ ವಯಸ್ಸಿನವನಾದ್ದರಿಂದ ಗಲ್ಲಿಗೇರಿಸಲ್ಪಡಲಿಲ್ಲ. ಹದಿನೇಳು ಆರೋಪಿತರಿಗೆ ದೊಂಬಿಯ ಆರೋಪದ ಮೇಲೆ ಎರಡು ವರ್ಷ ಸಜೆ ವಿಧಿಸಲಾಯಿತು. ಇಲ ಮಂದಿ ಬಿಡುಗಡೆಹೊಂದಿದರು.

**ಖಟ್ಲೆಯ ಹಿನ್ನೆಲೆ.** ಕಯ್ಯೂರು ಮಂಗಳೂರು ಜಿಲ್ಲೆಯ ಕಾಸರಗೋಡು ತಾಲೂಕಿನ ಈಗ ನಿರ್ವಿವಾದವಾಗಿ ಕೇರಳಕ್ಕೆ ಹೋಗಲಿರುವ ದಕ್ಷಿಣ ಭಾಗದ ಒಂದು ಹಳ್ಳಿ. ಇಡಿಯ ಹಳ್ಳಿಯೇ ಒಂದು ತೆಂಗಿನ ತೋಟದಂತಿದ್ದು ಅಲ್ಲಿ ಬಿಸಿಲಿನ ಬೇಗೆಯೇ ಮೈಗೆ ಸೋಂಕುತ್ತಿರಲಿಲ್ಲ. ಅಲ್ಲಿಗೆ ಹೋಗಬೇಕಾದರೆ ಗುಡ್ಡಗಳನ್ನು ಏರಿ ಕೊರಕಲುಗಳನ್ನು ಇಳಿಯಬೇಕಾಗಿತ್ತು. ಆರೇಳು ಮೈಲುಗಳ ವರೆಗೆ ರಸ್ತೆಗಳೇ ಇರಲಿಲ್ಲ.



ಈ ಭಾಗದಲ್ಲಿ ಭೂಮಿಯ ಒಡೆತನ ಪದ್ಧತಿ ಕೇರಳದ್ದಾದರೂ ಅಲ್ಲಿನ ರೈತ ಕಾಯದೆ ಜಾರಿಯಲ್ಲಿಲ್ಲದ್ದರಿಂದ, ರೈತರ ಸ್ಥಿತಿ ಬಹಳ ನಿಕೃಷ್ಟವಿತ್ತು. ೧೯೪೦ ರ ಸುಮಾರಿಗೆ ಕರ್ಷಕ ಸಂಘವೆಂಬ ಹೆಸರಿನ ಕೆಳಗೆ ರೈತಸಂಘಟನ ಈ ಭಾಗದಲ್ಲಿ ಸ್ಥಾಪಿತವಾಗಿ ಅದು ಬೇಗನೇ ಬಲಗೊಂಡಿತು. ಅದನ್ನು ಸ್ಥಾಪಿಸಿದವರು ಕಮ್ಯುನಿಸ್ಟ್ ಮನೋವೃತ್ತಿಯವರಾದರೂ ಆಗ ಆ ಪಕ್ಷಕ್ಕೆ ಸ್ವತಂತ್ರ ಅಸ್ತಿತ್ವವಿಲ್ಲದೆ ಅವರೆಲ್ಲರೂ ಕಾಂಗ್ರೆಸಿನೊಳಗನೇ ಇದ್ದರು.

ಪ್ರತಿ ಹಳ್ಳಿಯಲ್ಲೆಂಬಂತೆ ಸ್ಥಾಪಿತವಾದ ಈ ಕರ್ಷಕ ಸಂಘಗಳು ಬಹಳ ಪ್ರಭಾವಶಾಲಿಗಳಾದವು. ಅವುಗಳನ್ನು ವಿರೋಧಿಸಲು ಜನರು ಅಂಜುತ್ತಿದ್ದರು. ಬಟ್ಲೆಯಲ್ಲಿ ಬೆಳಕಿಗೆ ಬಂದ ಒಂದು ದೃಷ್ಟಾಂತವನ್ನು ಕೊಡ-ವದಾದರೆ ಕೊಡಕ್ಕಾಟ ಎಂಬ ಹಳ್ಳಿಯ ಪಟೇಲನ ಮೇಲೆ ಕರ್ಷಕ ಸಂಘದ ಕಡೆಗೆ ದೂರು ಬಂದು ಅದರ ಚೌಕಶಿಗಾಗಿ ಸಂಘದ ಮುಂದೆ ಹಾಜರಾಗಲು ಅವನಿಗೆ ತಿಳಿಸಲಾಯಿತು. ಅವನು ಹಾಜರಾಗಲಿಲ್ಲ. ಆ ತಪ್ಪಿಗಾಗಿ ಅವನ ಹೆಂಡತಿಯನ್ನು ಗಂಡನ ಮನೆಗೆ ಕಳಿಸಬಾರದೆಂದು ಅವನ ಮಾವನಿಗೆ ಆದೇಶ ಕೊಡಲ್ಪಟ್ಟಿತು. ಸ್ವತಃ ಅಳಿಯನೇ ಗ್ರಾಮದಲ್ಲಿ ಬ್ರಿಟಿಶ ಸರಕಾರದ ಪ್ರತಿನಿಧಿಯಾಗಿದ್ದರೂ ಅದನ್ನು ಉಲ್ಲಂಘಿಸುವ ಧೈರ್ಯ ಮಾವನಿಗೆ ಬರಲಿಲ್ಲ. ಕರ್ಷಕ ಸಂಘದ ಬೆಳೆಯುತ್ತಿದ್ದ ಶಕ್ತಿ ಹಾಗೂ ಅದರ ಯುದ್ಧ ವಿರೋಧ ಧೋರಣೆ ಇವುಗಳಿಂದ ಸರಕಾರದ ವಕ್ರದೃಷ್ಟಿ ಅದರ ಮೇಲೆ ಬಿದ್ದರೂ ಪೋಲೀಸರು ಸಹ ಆ ಹಳ್ಳಿಗಳಿಗೆ ಹೋಗಲು ಅಂಜುತ್ತಿದ್ದದ್ದರಿಂದ, ವಿವರವಾದ ವರದಿಗಳು ಸರಕಾರಕ್ಕೆ ದೊರಕುತ್ತಿದ್ದಿಲ್ಲ. ಹಾಗೂ ಅದರ ಕಾರ್ಯಕಲಾಪಗಳು ಅಹಿಂಸೆಯ ಮೇರೆಯನ್ನು ಮೀರದ್ದರಿಂದ, ಕಾಯದೆಯ ಹಿಡಿತದೊಳಗೆ ಅದು ಸಿಕ್ಕುತ್ತಿದ್ದಿಲ್ಲ.

ಆದರೆ, ೧೯೪೧ರಲ್ಲಿ ಹಿಂಸಾತ್ಮಕ ಪ್ರವೃತ್ತಿಯು ತಲೆದೋರಹತ್ತಿತು. ಆ ವರ್ಷ ಮಾರ್ಚ ತಿಂಗಳಲ್ಲಿ ಕೆಲವು ಕಾರ್ಯಕರ್ತರನ್ನು ಹಿಡಿಯಲು ಕಳಿಸಲಾಗಿದ್ದ ಪೋಲೀಸನೊಬ್ಬನನ್ನು ಕಯ್ಯೂರ ಪಟೇಲರ ಅಂಗಳದಲ್ಲಿ ಮಲಗಿದಾಗ ರಾತ್ರಿಯಲ್ಲಿ ಸಂಘದವರೊಬ್ಬರು ಕೊರಳಲ್ಲಿ ಚೂರಿಯಿಂದ ತಿವಿದರು. ಇದಾದ ಕೆಲವು ದಿನಗಳಲ್ಲೇ ಖಟ್ಲೆಗೆ ಕಾರಣವಾದ ದುರಂತವು ಸಂಭವಿಸಿತು.

**ಅಂದಿನ ಘಟನೆ.** ಮಾರ್ಚ ೨೮ನೇ ದಿವಸ ನಂ. ೯೭೭ನೇ ಪೋಲೀಸ ಸುಬ್ರಾಯನು ಒಂದು ದಂಡ ವಸೂಲಿಯ ವಾರಂಟ ಜಾರಿಯ ಬಗ್ಗೆ ಕಯ್ಯೂರಿಗೆ ಹೋಗಿದ್ದನು. ಅವನು ಒಂದು ಚಹದಂಗಡಿಯಲ್ಲಿ ಕುಳಿತಿದ್ದಾಗ ಕರ್ಷಕ ಸಂಘದ ಮೆರವಣಿಗೆಯೊಂದು ಆ ದಾರಿಯಾಗಿ ಬಂತು. ಮದಿರಾದೇವಿಯ ಭಕ್ತನಾಗಿದ್ದ ಆ ಪೋಲೀಸನಿಗ ಮೆರವಣಿಗೆಗಳ ಮೇಲೆ ಆಗ ಹಾಕಿದ್ದ ನಿರ್ಬಂಧವನ್ನು ಹಳ್ಳಿಗರು ಈ ರೀತಿ ಧಿಕ್ಕರಿಸಿದ್ದನ್ನು ನೋಡಿ ಪಿತ್ತ ನೆತ್ತಿಗೇರಿತು. ಕೂಡಲೇ ಓಡಿ ಬಂದು ಮೆರವಣಿಗೆಯ ಮುಂಭಾಗದಲ್ಲಿ ಹುಡುಗನೊಬ್ಬನು ಹಿಡಿದಿದ್ದ ಕೆಂಬಾವುಟವನ್ನು ಕಿತ್ತುಕೊಂಡು ಕಾಲ ಕೆಳಗೆ ತುಳಿದನು. ಧ್ವಜಕ್ಕಾದ ಅಪಮಾನ ಸಹಿಸಲಾರದೆ ಮೆರವಣಿಗೆಯವರು ಅವನನ್ನು ಬಡಿಯಲುದ್ಯುಕ್ತರಾದರು. ಆಗ ಮಠದ ಅಪ್ಪು ಹಾಗೂ ಅಬುಬಕರ್, ಇವರು ಬಡಿಯುವದನ್ನು ತಡೆದು, ಧ್ವಜಕ್ಕೆ ಮಾಡಿದ ಅಪಮಾನದ ಪರಿಹಾರಾರ್ಥವಾಗಿ ಅವನು ಧ್ವಜವನ್ನು ಕೈಯಲ್ಲಿ ಹಿಡಿದು ಊರ ಹದ್ದಿನ ವರೆಗೆ ಮೆರವಣಿಗೆಯ ಮುಂದೆ ನಡೆದರೆ ಅವನಿಗೆ ಏನೂ ಹಾನಿಮಾಡಬಾರದೆಂದು ಸೂಚಿಸಿದರು. (ಈ ಇಬ್ಬರೇ ಮುಂದೆ ಅವನನ್ನು ಖೂನಿ ಮಾಡಿದ ಆರೋಪದ ಮೇಲೆ ಗಲ್ಲಿಗೇರಿಸಲ್ಪಟ್ಟವರು.)

ಬಡಿತದ ಭೀತಿಯಿಂದ ಪೋಲೀಸನು ಒಪ್ಪಿದನು. ಅವನು ಧ್ವಜ ಹಿಡಿದು ನಡೆಯುವಾಗ ಅವನಿಗೆ ಯಾರೂ ಕೇಡುಮಾಡದಂತೆ ಅವನ ಎರಡೂ ಪಕ್ಕಗಳಲ್ಲಿ ಅಪ್ಪು ಮತ್ತು ಅಬುಬಕರ್ ನಡೆಯಹತ್ತಿದರು. ಅಲ್ಲಿಂದ ತುಸು

" ಈ ಧೀರ ಯುವಕರ ಜೀವ ಉಳಿಸಲು ನಾನೇನಾದರೂ ಮಾಡಲು ಶಕ್ತನೆಂದು ನನಗನಿಸುವದಿಲ್ಲ. ಇನ್ನು ಮುಂದೆ ಹಲವರು ಮಾಡಬೇಕಾಗುವಂತೆ ಇವರು ಸಹ ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣವನ್ನು ಅರ್ಪಿಸಬೇಕಾಗಬಹುದು." — **ಕಯ್ಯೂರಿನ ನಾಲ್ಕು ಯುವಕರಿಗೆ ಫಾಶಿ ಶಿಕ್ಷೆಯಾದುದನ್ನು ತಿಳಿಸಿದಾಗ ಮಹಾತ್ಮಾಜಿಯವರು ಬರೆದ ಪತ್ರ.**

" ಅವರು ನಮ್ಮನ್ನು ಗಲ್ಲಿಗೇರಿಸಬಹುದು. ಆದರೆ ಯಾರ ಹೊಟ್ಟೆಯಲ್ಲಿ ನಾವು ಹುಟ್ಟಿರುವೆವೊ ಆ ನೇಗಿಲಯೋಗಿಗಳು ಅಮರರು. ನಮಗೆ ಒಂದಕ್ಕಿಂತ ಹೆಚ್ಚು ದೇಹ ಗಳಿದ್ದರೆ, ನಾಡಿನ ಬದುಕನ್ನು ಬದಲಾಯಿಸಲು ನಾವು ಪುನಃ ಪುನಃ ಸಾಯುತ್ತಿದ್ದೆವು." **— ಫಾಶಿಯಾದವರಲ್ಲಿ ಮೂರನೆಯವನಾದ ಚಿರುಕಂಡನು ಕಳಿಸಿದ ಕೊನೆಯ ಸಂದೇಶ.**

" ನಿಮ್ಮ ಮಗನು ಮಹಾ ಹುತಾತ್ಮರ ಹಾದಿಯನ್ನೇ ತುಳಿದಿದ್ದಾನೆಂದು ನನ್ನ ಮಾತೆಗೆ ತಿಳಿಸಿರಿ. ನನ್ನ ತಮ್ಮಂದಿರನ್ನು ನಾಡಿನ ನಿಜ ಪುತ್ರರಾಗುವಂತೆ ಬೆಳೆಸಿರಿ." **—ನಾಲ್ಕನೆ ಯುವನಾದ ಅಬುಬಕರ್ ಇವನ ಸಂದೇಶ.**

ಮುಂದೆ ದಾರಿಯು ಗುಡ್ಡದ ಮೇಲಿನಿಂದ ತಿರುವು ಮುರುವಾಗಿ ಹಾಯುತ್ತಿದ್ದು ತೀರಾ ಕಡಿದಾಗಿ ಒಬ್ಬನೇ ನಡೆಯುವಷ್ಟು ಅಗಲವಿತ್ತು. ಈ ಸಂದರ್ಭವನ್ನು ನೋಡಿ ಪೋಲೀಸನು ಥಕ್ಕನೆ ಧ್ವಜವನ್ನು ಕೆಳಕ್ಕೆಸೆದು ಓಡಹತ್ತಿದನು. " ಹಿಡಿಯಿರಿ " ಎನ್ನುತ್ತಾ ಹಿಂದಿನವರು ಹಿಂಬಾಲಿಸಿದರು. ಆಗ ಎದುರಿನಿಂದ ಬರುತ್ತಿದ್ದ ಕುಂಞಂಬು ನಾಯರನು ( ಇವನೂ ಗಲ್ಲಿಗೇರಿಸಲ್ಪಟ್ಟನು ) ಪೋಲೀಸನನ್ನು ತಡೆದನು. ಮೆರವಣಿಗೆಯವರು ಅಲ್ಲಿಗೆ ತಲುಪಿ ಅವನನ್ನು ಸುತ್ತುಗಟ್ಟಿದಾಗ ಕೈಕೈ ಹತ್ತಿತು. ಪೋಲೀಸನೂ ತನ್ನ ಬಳಿ ಇದ್ದ ವಿದ್ಯುತ್ ಟಾರ್ಚಿನಿಂದ ಅಪ್ಪುವನ್ನೂ ಇತರರನ್ನೂ ಬಡಿದನು. ಎಲ್ಲರೂ ಕೂಡಿ ತನ್ನನ್ನು ಕೊಲ್ಲಬಹುದೆಂಬ ಭೀತಿಯಿಂದ ಅವನು ಬಳಿಯಲ್ಲೆ ಹರಿಯುತ್ತಿದ್ದ ನದಿಗೆ ಹಾರಿದನು. ಅವನು ಉತ್ತಮ ಈಜುಗಾರನಿದ್ದರೂ ಮದಿರಾಸೇವನೆ ಹಾಗೂ ಧರಿಸಿದ ಸಮವಸ್ತ್ರದ ಭಾರದಿಂದ ದೂರದ ವರೆಗೆ ಈಜಲಾರದೆ ಮುಳುಗಿದನು. ಅವನು ಈಜಲು ಪ್ರಯತ್ನಿಸುತ್ತಿದ್ದಾಗ ಕೆಲವರು ಪರಿಹಾಸ್ಯಕ್ಕಾಗಿ ಅವನ ಕಡೆ ಕಲ್ಲು ಒಗೆದರು. ಆದರೆ ಒಂದೂ ಕಲ್ಲು ಅವನಿಗೆ ತಾಗಲಿಲ್ಲ.

ಪೋಲೀಸನು ಸಾಯಬಹುದೆಂದು ಮೆರವಣಿಗೆಯವರು ಎಣಿಸಿದ್ದಿಲ್ಲ. ಅವನ ಮರಣದಿಂದ ದಿಗಿಲುಗೊಂಡ ಹಳ್ಳಿಯವರೆಲ್ಲರೂ ಪಲಾಯನ ಸೂತ್ರವನ್ನೇ ಪಠಿಸಿ ಗುಡ್ಡಗಾಡುಗಳಲ್ಲಿ ಅಡಗಿಕೂತರು.

ಈ ಘಟನೆಯ ಸುದ್ದಿಯು ಬಾಯಿಯಿಂದ ಬಾಯಿಗೆ ಹಬ್ಬುವಾಗ ಪೋಲೀಸನನ್ನು ಕೊಂದರೆಂದು ರೂಪಾಂತರ ಹೊಂದಿ ಕೇಳಿಕೆಯ ಸುದ್ದಿಯಾಗಿ ಒಬ್ಬ ಫಾರೆಸ್ಟ ಗಾರ್ಡನ ಮುಖಾಂತರ ಪೋಲೀಸ ಠಾಣೆಗೆ ತಲುಪಿತು.

ಕರ್ಷಕ ಸಂಘವನ್ನು ಮುರಿಯಲು ಸರಕಾರಕ್ಕೆ ಈಗ ಅನಾಯಾಸವಾಗಿ ಸಂಧಿಯು ದೊರೆಯಿತು. ಕೂಡಲೇ ಕಯ್ಯೂರು ಹಾಗೂ ನೆರೆಯ ಗ್ರಾಮಗಳಲ್ಲಿ ಮಲಬಾರ ಸ್ಪೆಶಲ ಪೋಲೀಸ ಫೋರ್ಜು ತಳವೂರಿ ಒಂದೆರಡು ತಿಂಗಳ ತನಕ ಅತ್ಯಾಚಾರ, ದಬ್ಬಾಳಿಕೆ ನಿರಾತಂಕವಾಗಿ ನಡೆದವು. ಜನರ ವರದಿಯಂತೆ ಗ್ರಾಮಗಳಲ್ಲಿ ಒಂದು ಕೋಳಿಯ ಮರಿ ಕೂಡಾ ಉಳಿಯಲಿಲ್ಲ.

ಗ್ರಾಮಗಳಿಗೆ ಬಂದ ಸರಕಾರಿ ಆಫೀಸರರನ್ನೆಲ್ಲಾ ಕೊಲ್ಲುವ ಉದ್ದೇಶವನ್ನಿಟ್ಟುಕೊಂಡು

ಅದನ್ನನುಸರಿಸಿ ಈ ಪೋಲೀಸನನ್ನು ಬಡಿದು ಬಲಾತ್ಕಾರದಿಂದ ಅವನ ಕೈಯಲ್ಲಿ ಕೆಂಬಾವುಟ ಕೊಟ್ಟು ತುಸು ದೂರ ನಡೆಸಿ ಅವನನ್ನು ಅಲ್ಲಿ ಚೆನ್ನಾಗಿ ಥಳಿಸಿ ಎತ್ತಿ ನೀರಿಗೆ ಒಗದರೆಂದೂ ನೀರಲ್ಲಿರುವಾಗಲೂ ದೊಡ್ಡ ದೊಡ್ಡ ಕಲ್ಲು ಎಸೆದು ಅವನನ್ನು ಕೊಂದರೆಂತಲೂ ಕರ್ಷಕ ಸಂಘದ ಮುಂದಾಳುಗಳು, ಕಾರ್ಯಕರ್ತರು, ಕಾರ್ಯಕರ್ತರೆಂದು ಸಂಶಯವಿದ್ದವರು ಇವರೆಲ್ಲರನ್ನೂ ಕೂಡಿಸಿ ಒಟ್ಟು ೬೦ ಜನರ ಮೇಲೆ ದೊಂಬಿ, ಕೊಲೆ ಮಾಡುವ ಉದ್ದೇಶದಿಂದ ಬೇಕಾಯದೇಶೀರ ಮಂಡಳಿ, ಪ್ರತ್ಯಕ್ಷ ಖೂನಿ ಇತ್ಯಾದಿ ಆರೋಪಗಳನ್ನು ಹೊರಿಸಿ ಖಟ್ಲೆ ಹೂಡಿದರು.

ಕರ್ಷಕ ಸಂಘದ ಪ್ರಭಾವದಿಂಡ ತಮ್ಮ ಅಕ್ರಮ ಸುಲಿಗೆಯನ್ನು ಕಳೆದುಕೊಂಡ ಜಮೀನದಾರರ ಸಹಾಯದಿಂದ ಹಾಗೂ ಗ್ರಾಮಗಳಲ್ಲಿನ ಪಕ್ಷ-ಪ್ರತಿಪಕ್ಷಗಳಲ್ಲಿದ್ದ ವಿರೋಧದ ಕಾರಣದಿಂದ ಸುಳ್ಳು ಸಾಕ್ಷಿಗಾರರು ಬೇಕಾದಷ್ಟು ದೊರೆತರು.

ಈ ದುರಂತದ ನಂತರದ ಪರಿಸ್ಥಿತಿಯಿಂದ ಆ ಭಾಗದ ಕಾಂಗ್ರೆಸ್ ಸಂಸ್ಥೆಯಾಗಲಿ ಕರ್ಷಕ ಸಂಘವಾಗಲಿ ಸಂಪೂರ್ಣ ನಿಶ್ಚೇತನಗೊಂಡಿದ್ದವು. ಅನ್ಯಾಯ, ಅತ್ಯಾಚಾರಗಳನ್ನು ವಿರೋಧಿಸುವ ಹಾಗೂ ಸತ್ಯಕ್ಕೆ ರಕ್ಷಣೆ ಕೊಡುವ ಯಾವದೇ ಸಂಘಟನೆಯಾಗಲಿ ಮುಂದಾಳಾಗಲಿ ಇರಲಿಲ್ಲ. ಜನಸಾಮಾನ್ಯರಲ್ಲಿ ವಿಶ್ವಾಸವನ್ನು ಹುಟ್ಟಿಸಬಹುದಾದ ಯಾವದೇ ಸಂಸ್ಥೆಯಾಗಲಿ ಮುಂದಾಳುಗಳಾಗಲಿ ಮುಂದೆ ಬಂದಿದ್ದರೆ ಸತ್ಯ ನುಡಿಯುವ ಸಾಕ್ಷಿಗಾರರು ಕೆಲವರಾದರೂ ಸಿಗುತ್ತಿದ್ದರು. ಆದರೆ ಸಾಮಾಜಿಕ ಅರ್ಧಾಂಗವಾಯುವಿನ ಆ ಪರಿಸ್ಥಿತಿಯಲ್ಲಿ ಸತ್ಯದ ಸೊಲ್ಲೇ ಅಡಗಿಹೋಯಿತು.

ಎಲ್ಲ ವಿಧದಿಂದಲೂ ಪ್ರತಿಕೂಲವಾದ ಈ ಪರಿಸ್ಥಿತಿಯಲ್ಲಿ ಖಟ್ಲೆಯ ಚೌಕಶಿ ಪ್ರಾರಂಭವಾಯಿತು. ಇದಕ್ಕಾಗಿಯೇ ನೇಮಿಸಲ್ಪಟ್ಟ ಸ್ಪೆಶಲ ಮ್ಯಾಜಿಸ್ಟ್ರೇಟರು ಖಟ್ಲೆಯನ್ನು ಸೆಶ್ಯನ್ಸ್ ಕೋರ್ಟಿಗೆ ಕಮಿಟ್ ಮಾಡಿದ ಬಳಿಕ, ೧೯೪೧ನೇ ಇಸವಿ ಡಿಸೆಂಬರ ೧ ನೇ ದಿನಾಂಕದಲ್ಲಿ ಮಂಗಳೂರಿನ ಆಗಿನ ಸೆಶ್ಯನ್ಸ ಜಡ್ಜ ಪಾರ್ಥಸಾರಥಿ ಅಯ್ಯರ ಇವರ ಮುಂದೆ ಖಟ್ಲೆ ಸುರುವಾಗಿ ೧೯೪೨ ನೇ ಜಾನೆವಾರಿ ३೧ ಕ್ಕೆ ಚೌಕಶಿ ಕೊನೆಗೊಂಡಿತು. ಆರೋಪಿತರ ಕಡೆಯಿಂದ ಸಂಘಟಿತ ರೀತಿಯಲ್ಲಿ ಕೆಲಸ ಮಾಡಲು ಯಾರೂ ಇಲ್ಲದ್ದರಿಂದಲೂ ಆರೋಪಿತರು ಬಹುತೇಕ ಬಡವರಿದ್ದದ್ದರಿಂದಲೂ, ಅವರ ಪತಿಯಿಂದ ಖಟ್ಲೆ ನಡೆಸುವ ವಿಷಯದಲ್ಲಿ ವ್ಯವಸ್ಥಿತ ಪ್ರಯತ್ನಗಳೇನೂ ಆಗಲಿಲ್ಲ. ಆ ಹೊಣೆಯನ್ನು ನಾನೊಬ್ಬನೇ ಎಂಬಂತೆ ಹೊರಬೇಕಾಯಿತು. ಕೆಲವು ಆರೋಪಿತರ ಬಗ್ಗೆ ಸರಕಾರದಿಂದ ನೇಮಿಸಲ್ಪಟ್ಟ ಮಂಗಳೂರಿನ ವಕೀಲ ಶ್ರೀ ನರಸಪ್ಪಯ್ಯನವರು ತುಂಬಾ ನೆರವು ನೀಡಿದರು.

**ಸಾಕ್ಷಿಗಳ ಹಗರಣ.** ಮೊದಲಿಗೆ ಮರಣೋತ್ತರ ತಪಾಸಣೆ ಮಾಡಿದ ಡಾಕ್ಟರರ ಸಾಕ್ಷಿಯಾಯಿತು. ಅವರು ಮೃತನ ಜಾತಿಯವರೂ ಹತ್ತಿರದ ಪರಿಚಯವರೂ ಇದ್ದರು. ಅವರು ತಲೆಬುರುಡೆಯ ಎಲುಬು ಒಡೆದದ್ದರ ಕಾರಣದಿಂದಾಗಿ ಅವನು ಮೃತಪಟ್ಟಿರಬೇಕು ಎಂದು ಅಭಿಪ್ರಾಯಪಟ್ಟರು. ಇದು ಸರಿಯಲ್ಲವೆಂದು ತೋರಿಸುವದು ಕಠಿಣವಾಗಲಿಲ್ಲ. ಬರೇ ತಲೆಬುರುಡೆ ಒಂದೆಡೆ ಒಡೆದದ್ದರಿಂದ ಮನುಷ್ಯನು ಸಾಯುವದಿಲ್ಲ. ಅಲ್ಲದೆ ಅವನು ನದಿಯಲ್ಲಿ ಈಸಲು ಪ್ರಯತ್ನಿಸಿದನೆಂದು ಫಿರ್ಯಾದಿ ಪಕ್ಷದ ಅಂಬೋಣವಿತ್ತು. ತಲೆಬುರುಡೆ ಒಡೆದ ಪೆಟ್ಟು ಕೊಲ್ಲುವಷ್ಟು ಜೋರಿನದಿದ್ದರೆ, ಅವನು ಈಸಿದನೆಂಬುದು ಹೇಗೆ? ಈಸಾಡುವಾಗ ಕಲ್ಲು ಎಸೆದರೆಂದು ಸಾಕ್ಷಿಗಾರರು ಹೇಳಿದ್ದರು. ಆದರೆ, ಮೃತನ ಶರೀರದಲ್ಲಿ ಕಲ್ಲಿನಿಂದ ಆಗಬಹುದಾದ ಗಾಯ ಒಂದೂ ಇರಲಿಲ್ಲವೆಂದು ಡಾಕ್ಟರರೇ ಅಡ್ಡ ಸವಾಲಿನಲ್ಲಿ ಒಪ್ಪಿದರು.

ಶವವು ಎರಡು ದಿನಗಳ ನಂತರ ಸಿಕ್ಕಿದ್ದು ವೈದ್ಯಕೀಯ ತಪಾಸಣೆಯ ಕಾಲಕ್ಕೆ ಅದು

ಕೊಳೆತು ಹೋಗಿ ಮರಣದ ಕಾರಣವನ್ನು ಕಂಡುಹಿಡಿಯುವ ಪರಿಸ್ಥಿತಿ ಇರಲಿಲ್ಲ. ಶವದ ಮಹಾಜರಿನಲ್ಲಿ ( inquest ) ಚೂರಿಯ ಶಿವಿತವೆಂದು ಉಲ್ಲೇಖಿಸಲಾಗಿತ್ತು. ಡಾಕ್ಟರು ಅದನ್ನು ಸಮರ್ಥಿಸಲಿಲ್ಲ.

ಒಂದು ವೇಳೆ ತಲೆಬುರುಡೆ ಒಡೆದ ಪೆಟ್ಟು ಇತ್ತೆಂದರೂ ಆ ನದಿಯಲ್ಲಿ ತುಂಬಾ ಕಲ್ಲು ಬಂಡೆಗಳಿದ್ದದ್ದರಿಂದ ಆ ಪೆಟ್ಟು ನದಿಗೆ ಅವನು ಹಾರಿದಾಗ ಕಲ್ಲು ತಗಲಿ ಆಗಿದ್ದಿರಬೇಕೆಂದು ನಾನು ವಾದಿಸಿದೆನು. ಫಿರ್ಯಾದಿ ಪಕ್ಷದಷ್ಟು ಇದು ವಸ್ತುಸ್ಥಿತಿಗೆ ವಿಸಂಗತವಿರಲಿಲ್ಲ. ಆದರೆ ನ್ಯಾಯಾಧೀಶರು, "ಅತಿ ಚತುರ ಕಲ್ಪನೆ ಆದರೆ ಸ್ವೀಕಾರಾರ್ಹವಲ್ಲ" ವೆಂದು ಬರೆದರು.

ನದಿಯ ದಡದಲ್ಲಿ ನಡೆದ ಘಟನೆಗಳನ್ನು ಪ್ರತ್ಯಕ್ಷ ಕಂಡಿದ್ದೇವೆಂದು ಹೇಳಿದ ಸುಳ್ಳು ಸಾಕ್ಷಿಗಾರರಾರೂ ಅಡ್ಡಸವಾಲಿನ ಒರೆಗಲ್ಲಿನಲ್ಲಿ ಉತ್ತೀರ್ಣರಾಗಲಿಲ್ಲ.

ಕೆಲವು ಸಾಕ್ಷಿಗಾರರು ನದಿಯ ಆಚೆಯ ದಡದಿಂದ ಅಪರಾಧಿಗಳ ಗುರುತು ಹಿಡಿದಿದ್ದೆವೆಂದಿದ್ದರು. ಆದರೆ ಅಲ್ಲಿಂದ ಜನರ ಗುರುತು ಹಿಡಿಯುವದಿರಲಿ, ಆಚೆಯ ದಡದಲ್ಲಿ ನಡೆಯುವ ಘಟನೆಯನ್ನು ಸ್ಪಷ್ಟವಾಗಿ ಕಾಣುವದು ಸಹ ಸಾಧ್ಯವಿಲ್ಲವೆಂಬುದನ್ನು ತೋರಿಸಿಕೊಟ್ಟೆವು.

ಆರೋಪಿತರು ನಂಬರ ಪ್ರಕಾರ ನಿಲ್ಲಬೇಕಾಗಿರುವದರಿಂದ, ಸಂಖ್ಯೆಯನ್ನು ಎಣಿಸಿ ಅವರ ಗುರುತು ಹಿಡಿಯುವದು ಸುಲಭವಿತ್ತು. ಈ ರೀತಿ ಯಾಂತ್ರಿಕವಾಗಿ ಗುರುತು ಹಿಡಿಯುವದನ್ನು ತಪ್ಪಿಸಲು ಅವರನ್ನು ಕ್ರಮತಪ್ಪಿ ನಿಲ್ಲಿಸಲು ಅನುಮತಿಯನ್ನು ಪಡೆದೆವು. ಹಾಗಾಗಿ ಎಷ್ಟೋ ಸಾಕ್ಷಿಗಾರರು ಆರೋಪಿತರ ಹೆಸರುಗಳನ್ನು ಗಿಳಿಗಳಂತೆ ಉಚ್ಚರಿಸಿದರೂ ಅವರನ್ನು ತೋರಿಸಿಕೊಡುವಾಗ ಹಾಸ್ಯಾಸ್ಪದ ಪ್ರಮಾದಗಳನ್ನು ಮಾಡಿದರು.

ಇವುಗಳಿಂದ ಹಾಗೂ ಸಾಕ್ಷಿಗಾರರ ಜಬಾನಿಯಲ್ಲಿ ನಾವು ತೋರಿಸಿದ ಇತರ ದೋಷಗಳಿಂದ ನ್ಯಾಯಾಧೀಶರ ಮೇಲೆ ಅವರ ಪ್ರಾಮಾಣಿಕತೆಯ ಬಗ್ಗೆ ಸರಿಯಾದ ಪರಿಣಾಮವಾಯಿತೆಂದು ನಮಗೆ ಅನ್ನಿಸಿತು. ಹಾಗಾಗಿ ಖೂನಿಯ ಆರೋಪದಿಂದ ಎಲ್ಲರೂ ಬಿಡುಗಡೆಹೊಂದುವರೆಂದು ನಾವು ಧೈರ್ಯದಿಂದಿದ್ದೆವು. ಹಾಗೂ ತೀರ್ಪಿನ ದಿನ (ಫೆಬ್ರುವರಿ) ನಾವು ಹಗುರವಾದ ಮನಸ್ಸಿನಿಂದ ಕೋರ್ಟಿನಲ್ಲಿ ನ್ಯಾಯಾಧೀಶರ ದಾರಿ ಕಾಯುತ್ತಾ ಕುಳಿತೆವು.

**ಅನಿರೀಕ್ಷಿತ ತೀರ್ಪು.** ಆ ದಿನ ನ್ಯಾಯಾಧೀಶರು ಸಂಜೆ ೫-೩೦ ಕ್ಕೆ ಕೋರ್ಟಿಗೆ ಬಂದು ೭ ರ ತನಕ ತಮ್ಮ ೧೦೦ ಪುಟದ ತೀರ್ಪನ್ನು ಓದಿದರು. ನಾಲ್ಕು ಜನರಿಗೆ ಮರಣದಂಡನೆ ವಿಧಿಸಿದ್ದನ್ನು ಕೇಳಿ ನಮಗೆ ಆಕಾಶವೇ ಕಳಚಿ ಬಿದ್ದಂತಾಯಿತು.

ತೀರ್ಪಿನಲ್ಲಿ ಸಾಕ್ಷಿಗಾರರ ಕುರಿತು ನಾವು ಹೇಳಿದ್ದನ್ನೆಲ್ಲಾ ಸ್ವೀಕರಿಸಿ ಖೂನಿಯ ಸಾಕ್ಷಿಗಾರರಾರೂ ವಿಶ್ವಾಸಕ್ಕೆ ಪಾತ್ರರಲ್ಲವೆಂದು ಸ್ಪಷ್ಟವಾಗಿ ಬರೆದಿದ್ದರು. ಆದರೆ, ಐದು ಆರೋಪಿತರ ಮಟ್ಟಿಗೆ ಅದೇ ಸಾಕ್ಷಿಗಾರರನ್ನು ಅವರು ನಂಬಿದರು. ತಲೆಗೆ ಆದ ಪೆಟ್ಟಿನಿಂದ ಮೃತನು ಸತ್ತಿರಬೇಕೆಂಬ ಡಾಕ್ಟರರ ಅಭಿಪ್ರಾಯವನ್ನು ಸ್ವೀಕರಿಸಿದರೂ ತೀರ್ಪಿನಲ್ಲಿ "ಪ್ರಾಣಾಂತಿಕ ಪೆಟ್ಟನ್ನು ಕೊಟ್ಟವನು ಯಾರೆಂದು ಈ ಗುಂಪಿನೊಳಗಿಂದ ಹುಡುಕಿ ತೆಗೆಯುವದು ಸಾಧ್ಯವಿಲ್ಲ. ಅವನು ಕೋರ್ಟಿನ ಮುಂದೆ ಇಲ್ಲದಿರಬಹುದು" ಎಂದು ಉಲ್ಲೇಖಿಸಿದ್ದರು. ಹಾಗಿದ್ದರೂ, ಎಲ್ಲರ ಸಾಮೂಹಿಕ ಉದ್ದೇಶವು ಪೋಲೀಸನ ಕೊಲೆ ಮಾಡುವದಿದ್ದುದರಿಂದ, ಈ ಐದು ಮಂದಿ ಖೂನಿಯ ಅಪರಾಧಕ್ಕೆ ಹೊಣೆಯೆಂದು ನಿರ್ಣಯಿಸಿದರು.

ಇಂತಹ ವಿಸಂಗತ ಸಂಗತಿಗಳಿಂದ ಕೂಡಿದ ತೀರ್ಪು ಹೈಕೋರ್ಟಿನಲ್ಲಿ ಸ್ಥಿರವಾಗಲಾರದೆಂದು ನಾವು ಆಶಿಸಿದೆವು. ಹೈಕೋರ್ಟಿನಲ್ಲಿ ಅಪೀಲು ಮೊಕೆಟ ಹಾಗೂ ಹೆಪೆಲ ಎಂಬ ಆಂಗ್ಲ ನ್ಯಾಯಮೂರ್ತಿಗಳ ಮುಂದೆ ಬಂತು. ಆ ಕಾಲದಲ್ಲಿ ಮಹಾಯುದ್ಧದ ಪ್ರಕ್ಷುಬ್ಧ ವಾತಾವರಣ ಹಾಗೂ ಕಾಂಗ್ರೆಸಿನ ಯುದ್ಧ ವಿರೋಧ ಘೋರಣೆ

ಇವುಗಳಿಂದಾಗಿ ಬ್ರಿಟಿಷರ ನ್ಯಾಯ ದೇವತೆಯು ನಿರ್ಶ್ಚೇಷ್ಟಿತಳಾಗಿದ್ದಳು.

ನ್ಯಾಯಮೂರ್ತಿಗಳ ಪೂರ್ವಗ್ರಹವು ಮೊದಲಿನಿಂದಲೂ ಒಡೆದು ಕಾಣುವಂತಿತ್ತು. ಅಪರಾಧ ಪ್ರತ್ಯಕ್ಷ ಕಂಡೆವೆಂಬ ಸಾಕ್ಷಿಗಾರರು ವಿಶ್ವಾಸಕ್ಕೆ ಪಾತ್ರರಲ್ಲವೆಂದು ನಿರ್ಧರಿಸಿ ಅವರ ಸಾಕ್ಷಿಯನ್ನೇ ಆಧರಿಸಿ ಐದು ಮಂದಿಯನ್ನು ಅಪರಾಧಿಗಳೆಂದು ಹಿಡಿದದ್ದು ನ್ಯಾಯಕ್ಕೂ ನೀತಿಗೂ ಸಮ್ಮತವಲ್ಲವೆಂದು ಆರೋಪಿತರ ವಕೀಲ ಶ್ರೀ ಭಾಷ್ಯಂ (ಇವರು ಮದರಾಸಿನ ಪ್ರಸಿದ್ಧ ಕಾಂಗ್ರೆಸ ಕಾರ್ಯಕರ್ತರಿದ್ದು ಮುಂದೆ ಕಾಂಗ್ರೆಸ ಸರಕಾರದಲ್ಲಿ ನ್ಯಾಯ ಮಂತ್ರಿಗಳಾದರು) ವಾದಿಸಿದಾಗ "ಸಾಕ್ಷಿಗಾರರು ವಿಶ್ವಾಸಕ್ಕೆ ಪಾತ್ರರಲ್ಲವೆಂಬ ನ್ಯಾಯಾಧೀಶರ ತೀರ್ಮಾನ ಸರಿಯಲ್ಲ" ವೆಂದು ಒಬ್ಬ ನ್ಯಾಯಮೂರ್ತಿಗಳು ಉದ್ಗಾರತೆಗೆದರು! ಈ ಪರಿಸ್ಥಿತಿಯಲ್ಲಿ ವಾದವೆಲ್ಲವೂ ಅರಣ್ಯರೋದನವಾಗಿ ಮೂಲ ತೀರ್ಪೇ ಸ್ಥಿರವಾಯಿತು.

ಫಾಶಿ ಶಿಕ್ಷೆಯ ಬದಲಿಗೆ ಬೇರೆ ಶಿಕ್ಷೆ ಕೊಟ್ಟು ಅವರ ಜೀವವನ್ನಾದರೂ ಉಳಿಸುವ ಪ್ರಯತ್ನಗಳು ನಡೆದವು. ಸ್ವತಃ ರಾಜಾಜಿಯವರೇ ಮದರಾಸ ಗವರ್ನರರನ್ನು ಈ ಸಂಬಂಧದಲ್ಲಿ ಭೆಟ್ಟಿಯಾದರು. ಆದರೆ ಕಾಗದಪತ್ರಗಳು ಗವರ್ನರರ ಕೈಗೆ ಬರುವಷ್ಟರಲ್ಲಿ ಅಗಷ್ಟ ೯ ರ ಚಳವಳಿಯು ಪ್ರಬಲವಾಗಿ, ಮೊದಲಿಗೆ ಪರೋಕ್ಷವಾಗಿ ಆಶ್ವಾಸನ ಕೊಟ್ಟಿದ್ದರೂ ಗವರ್ನರರು ದಯೆಯ ಅರ್ಜಿಯನ್ನು ತಳ್ಳಿಹಾಕಿದರು.

ಈ ವಿಷಯದಲ್ಲಿ ನಾನು ಮಹಾತ್ಮಾಜಿಯವರಿಗೆ ಪತ್ರ ಬರೆದಿದ್ದನು. ೧೯೪೨ ರ ಅಗಷ್ಟ ೯ ರ ಠರಾವಿನ ಉಷಃಕಾಲದ ಸಮಯವದು. ಆ ಪರಿಸ್ಥಿತಿಯಲ್ಲಿ ಗಾಂಧೀಜಿಯವರೂ ಏನೂ ಮಾಡಲು ಸಮರ್ಥರಾಗಲಿಲ್ಲ. ಅವರಿಂದ ಬಂದ ಉತ್ತರವನ್ನೇ ಇಲ್ಲಿ (ಪುಟ ೫೯) ಕೊಟ್ಟಿದ್ದೇನೆ.

ಇದಾದ ಮೇಲೆ ಪ್ರೀವಿ ಕೌನ್ಸಿಲಿಗೆ ಅಪೀಲು ಮಾಡಿದೆವು. ಜಗತ್ಪ್ರಸಿದ್ಧ ಬ್ಯಾರಿಸ್ಟರ ಡಿ. ಎನ್. ಪ್ರಿಟರು ಪುಕ್ಕಟೆಯಾಗಿ ಅಪೀಲು ನಡೆಸಿದರು. ಅದೂ ನಿಷ್ಫಲವಾಯಿತು.

ಪಾರ್ಲಿಮೆಂಟ ಸದಸ್ಯರಾದ ರೆವರೆಂಡ್ ಸೊರೆನ್‌ಸನರು ಸಾರ್ವಭೌಮ ಚಕ್ರವರ್ತಿಗಳಿಂದ ಫಾಶಿ ಶಿಕ್ಷೆಯನ್ನು ರದ್ದು ಮಾಡಿಸಲು ಪ್ರಯತ್ನಿಸಿದರು. ಆದರೆ ಭಾರತಸರಕಾರಕ್ಕೆಸಂಬಂಧಪಟ್ಟ ವಿಷಯಗಳಲ್ಲಿ ಅವರು ಹಸ್ತಕ್ಷೇಪ ಮಾಡಲು ಸಿದ್ಧರಾಗಲಿಲ್ಲ.

ಮೇಲಿನ ಪ್ರಯತ್ನದಲ್ಲಿ ಯಶಸ್ವಿಯಾಗದಿದ್ದರೂ ಈ ನ್ಯಾಯದ ಕೊಲೆಯಿಂದ ನೊಂದ ರೆವರೆಂಡ್ ಸೊರೆನ್‌ಸನರೂ ಇತರ ಕೆಲವು ಪಾರ್ಲಿಮೆಂಟ ಸದಸ್ಯರೂ ಇಂಗ್ಲಂಡಿನಿಂದ, ಗಲ್ಲಿಗೇರಿಸಲ್ಪಡುವವರ ಕುಟುಂಬದವರ ಸಹಾಯಾರ್ಥವಾಗಿ, ೧,೫೦೦ ರೂಪಾಯಿ ಕಳಿಸಿದರು.

ಈ ನಾಲ್ಕು ಮಂದಿ ಗಲ್ಲಿಗೇರಿಸಲ್ಪಡುವ ಎರಡು ದಿನಗಳ ಮೊದಲು ನಾನು ಆಗಿನ ಕಮ್ಯುನಿಸ್ಟ್ ಪಾರ್ಟಿಯ ಕಾರ್ಯದರ್ಶಿ ಪೂರನಚಂದ್ರ ಜೋಶಿಯವರೊಂದಿಗೆ ಕಯ್ಯೂರಿಗೆ ಹೋಗಿದ್ದೆನು. ೧ ನೇ ಆರೋಪಿತ ಅಪ್ಪುವಿನ ಮನೆಗೆ ನಾವು ಮೊದಲು ಹೋದೆವು. ಅಲ್ಲಿ ನಮ್ಮಂಥವರ ಶುಷ್ಕಜೀವನವನ್ನು ಬೆಳಗಿಸುವ ದಿವ್ಯ-ದೃಶ್ಯವನ್ನು ಕಂಡೆವು. ಅಪ್ಪುವಿನ ೭೫ ವರ್ಷ ಪ್ರಾಯದ ತಂದೆಯು ಅಳಲಾರಂಭಿಸಿದ ತನ್ನ ಹೆಂಡತಿಯನ್ನು ಸಮಾಧಾನಗೊಳಿಸುತ್ತಿದ್ದನು.

"ಸುಮ್ಮನೆ ಅಳುವಿಯೇಕೆ? ಅಭಿಮನ್ಯುವಿನ ಕತೆ ಮೊನ್ನೆ ತಾನೆ ಕೇಳಿದಿಯಲ್ಲಾ. ನಮ್ಮ ಮಗ ಅಭಿಮನ್ಯುನಂತೆ ವೀರಯೋಧನಾಗಿ ಪ್ರಾಣ ಕೊಡುತ್ತಾನೆ. ಅದಕ್ಕೆ ಅಳಬಾರದು." ಅವನ ಈ ಶಬ್ದಗಳು ಭಾರತದ ವೀರಪರಂಪರೆಯನ್ನು ಸ್ಮರಣೆಗೆ ತರುತ್ತಿದ್ದವು.

ಆರು ವರ್ಷಗಳ ನಂತರ ನಾನು ಮಂಗಳೂರಿಗೆ ಹೋದಾಗ ಕಯ್ಯೂರಿಗೆ ಹೋಗಿ ಅವನನ್ನು ಸಂದರ್ಶಿಸಿದೆನು. ಆಗ ಅವನು ತೀರಾ ಅಶಕ್ತನಾಗಿದ್ದನು. ಪರಿಚಯ ಮಾಡಿಕೊಟ್ಟೊಡನೆ ಆನಂದದಿಂದ ನನ್ನನ್ನು ಸ್ವಾಗತಿಸಿ ಊಟ ಮಾಡದೆ ಹೋಗಬಾರದೆಂದು ಆಗ್ರಹತೊಟ್ಟನು.

ಅಪ್ಪುವಿನ ಸುದ್ದಿ ಎತ್ತಿ, "ಕರ್ಷಕ ಸಂಘ ಸ್ಥಾಪಿಸಲು ಬಂದ ಮುಂದಾಳುಗಳೊಬ್ಬರು, 'ಈ ಸಂಘಕ್ಕೆ ಸೇರುವವರು ಜೀವದಾಸೆ ಬಿಟ್ಟು ಬರಬೇಕು' ಎಂದಿದ್ದರು. ನನ್ನ ಮಗನು ಹಾಗೆಯೇ ಮಾಡಿದನು. ಆದರೆ ಆ ಮುಂದಾಳು ಮಾತ್ರ ಜೇಲಿಗೆಕೂಡ ಹೆದರಿ ಮಾಫಿ ಕೇಳಿ ಮನೆಯಲ್ಲಿ ಕೂತನು" ಎಂದು ನಗುತ್ತ ಹೇಳಿದನು.

ಇದೇ ಕಯ್ಯೂರ ಖಟ್ಲೆಯ ಅಮರ ವೃತ್ತಾಂತ. ತಾವು ಮಾಡದ ಕೊಲೆಯ ಆರೋಪಕಾಗಿ ಇಪ್ಪತ್ತೈದು ವರ್ಷಗಳನ್ನೂ ಮೀರದ ಈ ನಾಲ್ಕು ಧೀರ ಯುವಕರು ಮರಣವನ್ನು ಸ್ವೀಕರಿಸಬೇಕಾಯಿತು. ರಾಜಕಾರಣಕ್ಕಾಗಿ ನ್ಯಾಯದ ಕೊಲೆಯಾದ ಮಹತ್ವದ ಉದಾಹರಣೆಗಳಲ್ಲಿ ಆಧುನಿಕ ಭಾರತದಲ್ಲಿ ಇದು ಒಂದು.



## ಹುತಾತ್ಮ ಪದವಿ

ನಾನು ಹುತಾತ್ಮನಾಗಲು ಆತುರನಿಲ್ಲ. ಆದರೆ ಶ್ರದ್ಧೆಗನುಸರಿಸಿ ನಡೆಯುತ್ತಿರುವಾಗ, ನನ್ನ ಆತ್ಯಂತಿಕ ಶ್ರೇಷ್ಠ ಕರ್ತವ್ಯವನ್ನು ಆಚರಿಸುತ್ತಿರುವಾಗ, ಸಾವು ಬಂದರೆ ನಾನು ಹುತಾತ್ಮನಾಗಲು ಸಿದ್ಧನೆಂದೇ ಹೇಳಬಲ್ಲೆ. ನನ್ನನ್ನು ಕೊಲ್ಲಬೇಕೆನ್ನುವ ಪ್ರಾಣಘಾತಕ ಪ್ರಯತ್ನಗಳು ಹಲವು ಆಗಿವೆ. ಆದರೆ ದೇವರು ಈ ವರೆಗೆ ನನ್ನನ್ನು ಕಾಪಾಡಿರುವನು. ಆದರೆ ನಾನೊಬ್ಬ ಖಳನೆಂದು ಭಾವಿಸಿ ಯಾರಾದರೂ ಗುಂಡಿಕ್ಕಿದರೆ ಅವರು ತಮ್ಮ ಕಲ್ಪನೆಯಲ್ಲಿಯ ಖಲನನ್ನು ಕೊಂದಂತಾಗುವದು ಹೊರತು ನಿಜ ಗಾಂಧಿಯನ್ನಲ್ಲ.

—ಮಹಾತ್ಮಾ ಗಾಂಧಿ

## ಹುತಾತ್ಮಪದವಿಯ ಲೋಭ

ಕ್ರಿಸ್ತನಿಗೆ ಸೈತಾನನು ಮೂರು ಪ್ರಲೋಭನಗಳನ್ನು ತೋರಿಸಿದನು. ಮೂರನೇ ಪ್ರಲೋಭನವು "ನನ್ನನ್ನು ಪೂಜಿಸಿದರೆ ನಿನಗೆ ಇಡೀ ಭೂಲೋಕವನ್ನೇ ಕೊಡುವೆನು" ಎಂದಾಗಿತ್ತು. ಮೂರಕ್ಕೂ ಯೇಸು ಮಣಿಯಲಿಲ್ಲ. ಇಲ್ಲಿಗೆ ಬೈಬಲು ಕಥೆಯನ್ನು ಮುಗಿಸಿದೆ.

ಆದರೆ ಅನಂತರದ ಕಥೆ ಹೀಗಿದೆ:

ಸೈತಾನನು ನಾಲ್ಕನೇ ಸಾರೆ ಬಂದನು. ಆಗ ಅವನು ಕ್ರಿಸ್ತನಿಗೆ ಹುತಾತ್ಮ ಪದವಿಯ ಲೋಭ ತೋರಿಸಿದನು. ಆ ಲೋಭವನ್ನು ಮಾತ್ರ ತಡೆದುಕೊಳ್ಳಲು ಕ್ರಿಸ್ತನಿಂದಾಗಲಿಲ್ಲ!

—ಸೋಮರಸೆಟ್ ಮಾಮ್

ಮೊದಲನೇ ಮಹಾಯುದ್ಧಕ್ಕಿಂತ ಮೊದಲು ಒಬ್ಬ ದೇಶಪ್ರೇಮಿ ಇಂಗ್ಲೀಷನು ಒಬ್ಬ ಫ್ರೆಂಚನಿಗೆ "ಬ್ರಿಟಿಶ ಸಾಮ್ರಾಜ್ಯದಲ್ಲಿ ಸೂರ್ಯನು ಮುಳುಗುವುದೇ ಇಲ್ಲ" ಎಂದು ಜಂಭ ಕೊಚ್ಚಿದನು. ಅದಕ್ಕೆ ಫ್ರೆಂಚನ ಉತ್ತರ: "ಇದರಲ್ಲಿ ಆಶ್ಚರ್ಯವೇನಿದೆ? ನಿಮ್ಮಂಥ ದಗಲ್‌ಬಾಜಿಗಳ ಮೇಲೆ ಸೂರ್ಯನು ಸದಾ ಕಣ್ಣಿಡಲೇಬೇಕಾಗುತ್ತದೆ."

# ವಿಧ್ವಂಸಕ ಕಲಾವಿದ : ಕ್ಷೌರಿಕ

ಕೀರ್ತಿ ಕುರ್ತಕೋಟಿ



ಗಂಡಸಾಗಿ ಹುಟ್ಟಿದ ಮೇಲೆ ಕಷ್ಟ ತಪ್ಪಿದ್ದಲ್ಲ ಎಂಬ ಹಿರಿಯರು ಹೇಳುತ್ತಿದ್ದ ನುಡಿ ನನ್ನ ಮನಸ್ಸಿನ ಮೇಲೆ ಅದ್ಭುತ ಪ್ರಭಾವ ಬೀರಿದೆ. ಯಾವ ಕಷ್ಟಕ್ಕೂ ತಲೆ ಗೊಟ್ಟು ಸಿಲ್ಲಬೇಕು ಎಂಬ ಮಾತನ್ನು ನೆನಪಿನಲ್ಲಿಟ್ಟು ಕೊಂಡೇ ನಾನು ಹೇರ-ಕಟಿಂಗ ಸಲೂನನ್ನು ಪ್ರವೇಶಿಸುತ್ತೇನೆ. ಅದೇಕೋ ಸಲೂನೆಂದ ಕೂಡಲೇ ನನ್ನ ಮನಸ್ಸಿನ ಧೈರ್ಯವೇ ಉಡುಗಿಹೋಗುತ್ತದೆ. ಸಲೂನಿಗೆ ಬಂದ ಕೂಡಲೇ ಎಂಥ ವೀರನೂ ಹೇಡಿಯಾಗುತ್ತಾನೆ; ಎಂಥ ಮೇಧಾವಿಯ ತಲೆಯೂ ಭಾರವಾಗುತ್ತದೆ. ತನ್ನ ತಲೆಯನ್ನು ಕೂಡ ತಾನೇ ಕತ್ತರಿಸಿಕೊಳ್ಳಲಾರದ ಮಾನವನ ಅಸಹಾಯತೆಯನ್ನು ಕಂಡು ಒಂದು ಬಗೆಯ ಜುಗುಪ್ಸೆ ಹುಟ್ಟುತ್ತದೆ.

ನಾನು ಸ್ವಭಾವತಃ ತಿಂಗಳಿಗೊಮ್ಮೊಮ್ಮೆ ನಿಯಮಿತವಾಗಿ ತಲೆಯನ್ನು ಕತ್ತರಿಸಿಕೊಳ್ಳುವವರ ಜಾತಿಗೆ ಸೇರಿದವನಲ್ಲ. ಅಂಥವರನ್ನು ನೋಡಿದಾಗ ನನ್ನ ಮನಸ್ಸಿನಲ್ಲಿ ಭಯ, ಆಶ್ಚರ್ಯ, ಆದರ, ಅಸೂಯೆ ಹೀಗೆ ಏನೇನೋ ಭಾವನೆಗಳ ಅಪೂರ್ವ ತಾಕಲಾಟ ನಡೆಯುತ್ತದೆ. ನಿಜವಾಗಿ ಜೀವನವನ್ನು ಗೆದ್ದವರು ಅವರೇ ಎಂದೆನಿಸುತ್ತದೆ.

ತಲೆ ಬೆಳೆದು, ಕೂದಲು ಕಿವಿಯ ತೀರ ಹತ್ತಿರ ಬಂದು, ಇನ್ನು ನಮಗೆ ಅಪ್ಪಣೆ ಕೊಡು ಎಂದು ಕೇಳಿದಾಗ, ನಾನು ಮನೆಗೆ ಬಂದ ಪ್ರಿಯ

ಅತಿಥಿಗಳಿಗೆ ಹೇಳುವಂತೆ 'ಆಗಲಿ ನೋಡೋಣ' ಎನ್ನುತ್ತೇನೆ. ಕೊನೆಗೆ ಕೂದಲು ಬೆಳೆದೂ ಬೆಳೆದೂ ಅವು ದುರ್ವಿನೀತವಾಗಿ 'ಬಾಕಿ ತೀರಿಸದಿದ್ದರೆ ಬಿಡುವವನಲ್ಲ' ಎಂಬ ಸಾಲಗಾರನ ನಿರ್ಧಾರದಿಂದ ಕೇಳಿದಾಗ ಮಾತ್ರ ನನಗೆ ಎಚ್ಚರ ಹುಟ್ಟುತ್ತದೆ. ಆ ಮೇಲೆ ಸಲೂನಿಗೆ ಹೋಗುವದು ಅಪರಿಹಾರ್ಯವಾಗುತ್ತದೆ. ನನಗೋ ಹಿಂದಿನ ನೂರಾರು 'ಕಷ್ಟ'ಗಳ ನೆನಪಾಗಿ, ಬಾಲ್ಯದಲ್ಲಿ ಅದರ ಬಗ್ಗೆ ಇದ್ದ ಭಯ ಮರುಕಳಿಸಿ ಬಂದು, ಮೊದಲೇ ಬೆಳೆದ ತಲೆ ಮತ್ತಷ್ಟು ಭಾರವಾಗುತ್ತದೆ; ಕಣ್ಣಿಗೆ ಕತ್ತಲೆ ಬರುತ್ತದೆ. ನಾಳಿನ ವೈಜ್ಞಾನಿಕ ಯುಗದಲ್ಲಿ ಕ್ಲೋರೊಫಾರ್ಮು ಸೋಪಿದರಪಿಂದ ಪೇಟಿಯಲ್ಲಿ ಸಿಗುವಂತಾದರೆ, ಪ್ರಜ್ಞೆ ತಪ್ಪಿಸಿಕೊಂಡು ಕ್ಷೌರ ಮಾಡಿಸಿಕೊಳ್ಳಬೇಕೆಂಬ ಮಧುರ ವಿಚಾರ ನನ್ನಲ್ಲಿ ಆಗಾಗ್ಗೆ ಸುಳಿದುಹೋಗಿದೆ. ಸಲೂನಿನ ಮಾಲಕ ಕಷ್ಟಪಟ್ಟು (ಅಥವಾ ಮಾಡಿ) ಅಲ್ಲಿಯ ವಾತಾವರಣದಲ್ಲಿ ಮನೋರಂಜಕತೆಯನ್ನು ತರಲು ತನ್ನ ಬುದ್ಧಿಗೆ ತಿಳಿದಷ್ಟು ಪ್ರಯತ್ನಿಸಿರುತ್ತಾನೆ. ಆದರೆ ನಿಮ್ಮ ಅಭಿರುಚಿಗೂ ಅವನ ಅಭಿರುಚಿಗೂ ಹೊಂದದಿದ್ದರೆ ಉಪಾಯವಿಲ್ಲ.

ನಾಟಕವೊಂದೇ ಜನರ ಭಿನ್ನರುಚಿಗಳನ್ನು ತೃಪ್ತಿಗೊಳಿಸುವ ಸಾಧನ ಎಂದು ಹೆಮ್ಮೆಪಟ್ಟುಕೊಂಡ ಕಾಳಿದಾಸ ಸಲೂನನ್ನು ನೋಡಿರಲಿಲ್ಲ. ಸಲೂನಿನಲ್ಲಿಯ ಚಿತ್ರಪ್ರದರ್ಶನವನ್ನು ಯಾವ ಯಾವ ದೃಷ್ಟಿಕೋನಗಳಿಂದ ನೋಡಿ ರಸಿಕತೆಯನ್ನು ತೃಪ್ತಿಗೊಳಿಸಬೇಕೋ ನನಗಿನ್ನೂ ತಿಳಿದಿಲ್ಲ. ರವಿವರ್ಮನ ಮೂವತ್ತುಮೂರು ಕೋಟಿ ದೇವತೆಗಳೂ ನಿಮ್ಮನ್ನು ಕ್ಷೌರಭಯದಿಂದ ಕಾಪಾಡಲು ಸಿದ್ಧರಾಗಿರುತ್ತಾರೆ. (ಅದರಲ್ಲಿ ಒಂದು ಕ್ಷೌರಿಕನ ಇಷ್ಟದೇವತೆಯಾಗಿರುತ್ತದೆ!) ಸಿನಿಮಾ ತಾರೆಯರ ಬೇಸರ ತರಿಸುವ ಮುಗುಳುನಗೆಗೂ ಅಲ್ಲಿ ಅವಕಾಶವಿದೆ. ಕನಸಿನಲ್ಲಿಯೂ ಊಹಿಸಲಾಗದ ಪ್ರಕೃತಿ ಚಿತ್ರಗಳು, ಅಸಂಭವ ಸೀಯಪಾದ ನಿಲುವುಗಳಲ್ಲಿರುವ ಲಾವಣ್ಯವತಿಯರು (ಇವರಿಗೆ ಸಲೂನಿನಲ್ಲಿ ಸ್ಥಾನವೇಕೋ ತಿಳಿಯದ ವಿಷಯ.) ನಿಮ್ಮನ್ನು ಸ್ವಾಗತಿಸುತ್ತಾರೆ. ಇದೂ ಅಲ್ಲದೆ ಕ್ಯಾಲೆಂಡರುಗಳಿಂದ ಹಿಡಿದು ಕೆ. ವ್ಹಿ. ಅಯ್ಯರರ ವ್ಯಾಯಾಮಚಿತ್ರಗಳ ವರೆಗೂ ಅಲ್ಲಿಯ ಚಿತ್ರಗಳ ವ್ಯಾಪ್ತಿಯಿದೆ. ಪಾಶ್ಚಾತ್ಯ ದೇಶಗಳಲ್ಲಿ ಆರ್ಟ ಗ್ಯಾಲರಿಗಳಲ್ಲಿ ಕಲಾಪ್ರದರ್ಶನಗಳು ನಡೆಯುತ್ತವಂತೆ. ಆದರೆ ನಮ್ಮಲ್ಲಿ ಮಾತ್ರ ಕ್ಷೌರಿಕನೇ ಕಲಾವಿದರಿಗೆ ಆಶ್ರಯದಾತನಾಗಿದ್ದಾನೆ.

ಇನ್ನು ಮಾನವಪ್ರಪಂಚದ ಅನೇಕ ಪ್ರದರ್ಶನೀಯ ವ್ಯಕ್ತಿಗಳನ್ನು ಅಲ್ಲಿ ಕಾಣಬಹುದು. ಬೆಳೆದ ತಲೆ, ಪಾಲಿಶ್ ಇಲ್ಲದ ಮುಖ, ಅಸಹಾಯತೆಯಿಂದ ತುಂಬಿದ ಕಣ್ಣುಗಳು, ಅಸ್ತವ್ಯಸ್ತವಾದ ವೇಷ, ಕಾಯುವ ಬೇಸರ ಇವುಗಳಿಂದ ಎಂಥ ಮನ್ಮಥನೂ ಸೆರೆಮನೆಯಲ್ಲಿಯ ಕೈದಿಯಂತೆಯೂ ಗುಣವಾಗಲಾರದ ರೋಗಿಷ್ಠನಂತೆಯೂ ಕಾಣುತ್ತಾನೆ. ಕೆಲವರು ಈ ವಿಕಾರಗಳನ್ನೆಲ್ಲ ವರ್ತಮಾನಪತ್ರಗಳಲ್ಲಿ ಮುಚ್ಚುವ ಪ್ರಯತ್ನದಲ್ಲಿರುತ್ತಾರೆ. ಆದರೆ ಬೇಡವೆಂದರೂ ಗೋಡೆಗಳ ತುಂಬ ಕನ್ನಡಿಗಳಿರುವದರಿಂದ (ಅವೂ ಭಂಗಮಯ, ಅಂದರೆ ಒಡಕಲಿತಗಳಿಂದ ಕೂಡಿರುತ್ತವೆ.) ನಮ್ಮ ಮುಖಭಂಗ ಒಂದಕ್ಕೆ ನೂರಾಗಿ ವಿಕೃತವಾಗಿ ಮೂಡುತ್ತದೆ. ಇದನ್ನೆಲ್ಲ ನೋಡಿದರೆ ಹೃದಯದಲ್ಲಿ ಪ್ರಯತ್ನಪೂರ್ವಕವಾಗಿ ಬೆಳೆಸಿಕೊಂಡು ಬಂದ ಆಶಾವಾದ ಕ್ಷಣಾರ್ಧದಲ್ಲಿ ನುಚ್ಚುನೂರಾಗುತ್ತದೆ.

ನನಗೆ ಒಮ್ಮೊಮ್ಮೆ ವಿಚಾರ ಬಂದಿದೆ—ಒಂದು ದಿನದ ನೋಟವೇ ನನ್ನನ್ನು ಇಷ್ಟು ನಿರುತ್ಸಾಹಗೊಳಿಸಿದರೆ, ದಿನವೂ ಅದನ್ನೇ ನೋಡುವ ಆ ಕ್ಷೌರಿಕನ ಗತಿ ಏನು? ಜೀವನವನ್ನು ನೋಡುವ ಅವನ ದೃಷ್ಟಿ ಎಷ್ಟು ಕಲುಷಿತವಾಗಿರಬೇಕು? ಮಾನಸಶಾಸ್ತ್ರಜ್ಞರಿಗೆ ಇದೊಂದು ಗಂಭೀರವಾದ ಸಮಸ್ಯೆ. ಅವರವರ ವೃತ್ತಿ ಅವರವರ ಜೀವನ ದೃಷ್ಟಿಯ ಮೇಲೆ ಅದ್ಭುತ ಪರಿಣಾಮಗಳನ್ನುಂಟುಮಾಡಬಹುದು. ಡಾಕ್ಟರ ಹಾಗೂ ಕ್ಷೌರಿಕ ಇವರಿಬ್ಬರ ವೃತ್ತಿಗಳ ಬಗ್ಗೆ ನನಗೆ

ಬಹಳ ಚಿಂತೆ ಇದೆ. ಇಬ್ಬರೂ ಜೀವನದಲ್ಲಿಯ ವಿಕಾರಕ್ಕೇ ಅಂಟಿಕೊಂಡವರು. ಮನುಷ್ಯ ಆಶಾವಾದಿಯಾಗಬೇಕಾದರೆ ಫೋಟೋಗ್ರಾಫರ ನಾಗಬೇಕು. ಯಾವ ವಿಕಾರವೂ ಅವನ ಹತ್ತಿರ ಹಾಯುವದಿಲ್ಲ. ಬುದ್ಧನಂತೆ ವೈರಾಗ್ಯಶೀಲ ನಾಗಬೇಕಾದರೆ ಮಾತ್ರ ಡಾಕ್ಟರನೋ ಕ್ಷೌರಿ-ಕನೋ ಆಗಬಹುದು.

. . . ಇದಾದ ಮೇಲೆ ಅಲ್ಲಿಯೇ ನೀವು ನಿಮ್ಮ ಸರತಿಗಾಗಿ ಕಾಯಬೇಕು. ತಲೆ ಮಾಡಿಸಿ ಕೊಳ್ಳುವವರು ಒಂದು ಮಾತನ್ನು ಮಾತ್ರ ತಲೆ ಯಲ್ಲಿಟ್ಟುಕೊಳ್ಳಬೇಕು. ಹೊರಗಿನ ಜಗತ್ತಿಗೂ ಸಲೂನಿಗೂ ಸಂಬಂಧವೇ ಇಲ್ಲ. ಹೊರಗೆ ನೀವು ಸ್ವತಂತ್ರರು. ಸಲೂನಿನಲ್ಲಿ ಮಾತ್ರ ನೀವು ಪರಾ ಧೀನರು. ಕ್ಷೌರಿಕನ ಕರುಣೆಯ ಮೇಲೆಯೇ ಅವಲಂಬಿಸಿ ಅಲ್ಲಿ ಕುಳಿತು ತಪಿಸಬೇಕು. ಆಫೀಸಿನ ಅವಸರ, ಪೇಟೆಯಲ್ಲಿಯ ಕೆಲಸ, ಚಹದ ಚಟ, ಮನೆಗೆ ಬಂದ ಅತಿಥಿಗಳ ಸತ್ಕಾರ ಇವಾವ ವಿಚಾರಗಳಿಂದಲೂ ತಲೆಕೆಡಿಸಿಕೊಳ್ಳದೆ ಕುಳಿತುಕೊಳ್ಳಬೇಕು. ನಡುನಡುವೆ ಕ್ಷೌರಿಕ ಕ್ಷೌರ ಮಾಡುತ್ತಲೆ ನಿಮ್ಮ ಕಡೆಗೆ ಕನಿಕರದಿಂದ ನೋಡುತ್ತಿರುತ್ತಾನೆ; ಮುಗುಳು ನಗೆ ಬೀರು ತ್ತಾನೆ. ದೇವರು ಭಕ್ತನನ್ನು ಪರೀಕ್ಷಿಸಿದಂತೆ ಪರೀಕ್ಷಿಸುತ್ತಾನೆ. ಆ ಮೇಲೆ ನಿಮ್ಮ ಸಹನೆ ಮೀರುತ್ತದೆ; ಜ್ವರ ಕುದಿಯುತ್ತವೆ. ಏನಾದರೂ ಅವನು ಬಗ್ಗುವದಿಲ್ಲ. ಕೊನೆಗೊಮ್ಮೆ ದೇವರು ಕಣ್ಣುಬಿಟ್ಟು ನಿಮ್ಮ ಸರತಿ ಬಂದಾಗ ಜನ್ಮ ಕೃತಾರ್ಥವಾಯಿತೆನ್ನಿಸುತ್ತದೆ, ಆ ಒಂದು ಕ್ಷಣ ದಲ್ಲಿ.

ಆದರೆ ಇಷ್ಟಾದ ಮೇಲೂ ಮೋಕ್ಷಪ್ರಾಪ್ತಿಯ ಸುಖವಿಲ್ಲ. ನಿಮ್ಮನ್ನು ಕರೆದು ಎತ್ತರವಾದ ಖುರ್ಚಿಯ ಮೇಲೆ ಕೂಡಿಸಿ, ನಿಮಗೂ ಎದುರಿಗಿನ ಕನ್ನಡಿಗೂ ಮೌನ ಸಂಭಾಷಣೆ ಮಾಡುವದಕ್ಕೆ ಬಿಟ್ಟು, ತಾನು ಕೆಲಸದ ದಣಿ ವಾರಿಸಿಕೊಳ್ಳಲು ಬೀಡಿ ಹಚ್ಚಿ ಇನ್ನೊಬ್ಬರ ಜೊತೆಗೆ ಮಾತಿಗೆ ತೊಡಗುತ್ತಾನೆ. ನಿಮ್ಮ ಮುಖಕ್ಕೆ ಸಾಬಾಣದ ಬುರುಗನ್ನು ಬಡಿದು ಚಹ ಕುಡಿಯಲು ಹೋಗುವ ಪುಣ್ಯಾತ್ಮರಿದ್ದಾರೆ.

ಇಷ್ಟಾದ ಮೇಲೆ ನಿಮ್ಮ ತಲೆ ಅವನ ಕೈಯಲ್ಲಿ ಸಿಗುತ್ತದೆ. ತಲೆ ನಿಮ್ಮದಲ್ಲ ತನ್ನದೇ ಎನ್ನುವ ಅಧಿಕಾರದಿಂದ ಅವನು ಅದರ ಜೊತೆಗೆ ಆಟ ಮಾಡುತ್ತಾನೆ. ಇನ್ನು ಮುಂದೆಲ್ಲ ಸಹನೆಯೊಂದೇ ನಿಮ್ಮ ಜೀವನಕ್ಕೆ ಆಧಾರ. ನಾನಂತೂ ಈ ಹೊತ್ತಿನಲ್ಲಿ ಕಣ್ಣುಮುಚ್ಚಿಕೊಂಡೇ ಇರುತ್ತೇನೆ. ಗೋಣು ಎಡಕ್ಕೋ ಬಲಕ್ಕೋ ಹೊರಳುತ್ತಿರು ತ್ತದೆ; ಕುತ್ತಿಗೆಯ ಹಿಂಭಾಗದಲ್ಲಿ, ಕಿವಿಯ ಹತ್ತಿರ ಅವನ ಕೈಬೆರಳುಗಳು ಸೊಳ್ಳೆಗಳಂತೆ ಹರಿದಾಡುತ್ತವೆ; ಮುಖಕ್ಕೆ ಅಡ್ಡವಾಗಿ ಅವನ ಕೈ ಹಾಯುತ್ತದೆ; ಅರ್ಥವಾಗದ ಅವನ ಆಯುಧಗಳ ಕಿಣಿ ಕಿಣಿ ಸಪ್ಪಳ ಅನಂತ ಕಾಲದ ವರೆಗೂ ನಡೆಯುತ್ತದೆ; ನಡುವೆ ಒಮ್ಮೊಮ್ಮೆ 'ಮಿಶನ್ನು' (ಕ್ಷೌರಿಕನ ಕಾಪಿ ರಾಯಿಟ್‌ನಿಂದ) ಹಿಡಿದು, ಕೂದಲು ಜಗ್ಗಿ ಮುಚ್ಚಿದ ಕಣ್ಣು ತಾವಾಗಿ ತೆರೆಯುತ್ತವೆ. ಇದಕ್ಕೆ ಕೊನೆಯಿಲ್ಲವೇ ಎಂದೆನಿಸುತ್ತದೆ.

ಕೊನೆ ಇದೆ, ಅದನ್ನು ತಿಳಿಸುವದಕ್ಕೇ ಕ್ಷೌರ ವಿಧಾನವೂ ಒಂದು ಇದೆ. ತಲೆಗೆ ಎಣ್ಣೆ ಹಚ್ಚಿ ಎರಡೂ ಕೈಗಳಿಂದ ಮದ್ದಲೆ ಬಡಿಯುವಂತೆ ಬಡಿಯುತ್ತಾನೆ. ತಲೆಯ ಮೇಲೆ ಸಾವಿರಾರು ಕುದುರೆ ಸವಾರರು ವಾಯುವೇಗದಿಂದ ಓಡು ತ್ತಿರುವಂತೆ ಅಪೂರ್ವ ಅನುಭವವಾಗುತ್ತದೆ. ಇದು ಕ್ಷೌರನಾಟಕದಲ್ಲಿ ಅತ್ಯಂತ ಮರ್ಮಸ್ಪರ್ಶಿ ಯಾದ, ಹೃದಯಭೇದಕವಾದ, ರೋಮಾಂಚ ಕಾರಿಯಾದ ಸನ್ನಿವೇಶವೆಂದು ಹೇಳಬಹುದು. ಇಷ್ಟು ಮಾಡಿ ತನ್ನ ದಿವ್ಯ ವಸ್ತ್ರದಿಂದ ನಿಮ್ಮ ಮುಖ ಒರಸಿ ಕನ್ನಡಿ ತೋರಿಸಿದನೆಂದರೆ ಮುಗಿ ಯಿತು.

ಹೌದು, ಇನ್ನೊಂದು ಮಹತ್ವದ ಭಾಗವನ್ನು ಮರೆತೆ. ಇಲ್ಲಿಯ ವರೆಗೆ ನಾನು ಬಣ್ಣಿಸಿದ್ದೆಲ್ಲ 'ಮೂಕಿ'. ಆದರೆ ಕ್ಷೌರಕರ್ಮ ಸಂಪೂರ್ಣ ಟಾಕೀ. ಕ್ಷೌರಿಕನ ಕೈಯಂತೆಯೇ ಅವನ ನಾಲಿಗೆಯೂ ಅಸಾಧ್ಯ ಚುರುಕು. ನೀವು ಹೊಸ ದಾಗಿ ಹೊಲಿಸಿದ ಕೋಟಿನ ಫ್ಯಾಶನ್ನು, ನೀವು

ಕೊಂಡ ಶರ್ಟಿಂಗಿನ ಬೆಲೆ, ನೀವು ಮದುವೆಯಾಗಿದ್ದರೆ ಮಕ್ಕಳೆಷ್ಟು, ಇತ್ತೀಚೆಗೆ ನಿಮ್ಮ ಆದಾಯ ಕಡಿಮೆಯಾಗಿದೆಯೇ ಮೊದಲಾದವುಗಳ ಬಗ್ಗೆ ನಿಮ್ಮಿಂದಲೇ ಮಾಹಿತಿ ಹೊರಡಿಸುತ್ತಾನೆ. ನೀವು ಸುಮ್ಮನಿದ್ದರೆ ದೇಶದ ರಾಜಕಾರಣದ ವಿಷಯವಾಗಿ ಮಾತನಾಡುತ್ತಾನೆ. ತನ್ನ ಅಭಿಪ್ರಾಯಗಳನ್ನೂ ತಿಳಿಸುತ್ತಾನೆ, ಸ್ವಾನುಭವದ ಉದಾಹರಣೆಗಳಿಂದ. ನೀವು ವಿರೋಧಿಸಿದರೆ, ಕ್ಷೌರ ಮಾಡುವದನ್ನು ಬಿಟ್ಟು ಟೇಬಲ್ಲಿನಿಂದ ವರ್ತಮಾನಪತ್ರವೊಂದನ್ನು ತಂದು ನಿಮ್ಮ ಮೇಲೆ ತೂರುತ್ತಾನೆ. ನೀವು ಓದಬೇಕೆಂದಲ್ಲ, ಆದರೆ ತಾನು ಹೇಳಿದ್ದು ಸರಿ ಎಂಬುದನ್ನು ಸಿದ್ಧಗೊಳಿಸಲಿಕ್ಕೆ. ಅವನ ಕತ್ತಿ ಮೊಂಡಾಗಿರಬಹುದು; ಆದರೆ ನಾಲಿಗೆ ಮಾತ್ರ ಯಾವಾಗಲೂ ಹದನಾಗಿರುತ್ತದೆ. ವಾದದಲ್ಲಿ ಸೋತೇ ಗೊತ್ತಿಲ್ಲ ಅವನಿಗೆ.

ಆದರೆ ಇಂಥ ಕ್ಷೌರಿಕನ ಸ್ಥಿತಿಯೂ ಶೋಚನೀಯವಾದದ್ದನ್ನು ನಾನು ನೋಡಿದ್ದೇನೆ. ಒಂದೇ ಸಲೂನಿಗೆ ಹೋಗುವ ಅಭ್ಯಾಸ ನನಗೆ. ಒಮ್ಮೆ ನನ್ನ ಕ್ಷೌರ ಕ್ಷೌರಿಕನ ಅಲಕ್ಷ್ಯದಿಂದ ಕೆಟ್ಟುಹೋಗಿತ್ತು. ಮುಂದೆ ಎರಡು ತಿಂಗಳ ನಂತರ ಅಲ್ಲಿ ಹೋದೆ. ಆಗ ಅವನು ನನ್ನ ತಲೆಯನ್ನು ದಿಟ್ಟಿಸಿ ನೋಡಿ 'ಯಾರು ಮಾಡಿದ್ದು ರಾಯರ, ನಿಮ್ಮ ತಲಿ? ಅವಾ ಎಲ್ಲೋ ನಮ್ಮ ಕಸುಬಿಗೇ ಕುಂದು ತರುವವ ಕಾಣತಾನ' ಎಂದ. ನಾನು ನಿಜ ಸಂಗತಿಯನ್ನು ಹೇಳಿದಾಗ ಮಾತ್ರ ಅವನ ಮುಖ ನೋಡುವಂತಹದಿತ್ತು. ಮುಂದೆ ಇಡೀ ಅರ್ಧ ತಾಸು ಅವನು ಮಾತನಾಡಲೇ ಇಲ್ಲ.

ಇಷ್ಟೆಲ್ಲ ಹೇಳಿದ ಮೇಲೂ ಒಂದು ಮಾತನ್ನು ಒಪ್ಪಲೇ ಬೇಕು. ಕ್ಷೌರಿಕ ಕಲಾವಿದ; ಅವನ ಕಲೆ ವಿಧ್ವಂಸಕ ಕಲೆ, ಅಂದರೆ ವಿನಾಶವನ್ನು ಕಲಾತ್ಮಕವಾಗಿ ಮಾಡುವ ಪ್ರತಿಭೆ ಅವನದೇ. ಕಟ್ಟುವದಕ್ಕಿಂತ ಹಾಳು ಮಾಡುವದು ಸುಲಭ ಎನ್ನುವವರು, ಸುಲಭವಾಗಿ ಕೂದಲನ್ನು ಕತ್ತರಿಸಿಕೊಳ್ಳಲಿ. ಕ್ಷೌರಿಕ ನನ್ನ ಕಣ್ಣಿಗೆ ಬೇರೆ ಬೇರೆ ಘನತೆಗಳಿಂದ ವಿರಾಜಿಸುತ್ತಾನೆ. ಒಮ್ಮೆ ಹಳೆಯ ಸಂಪ್ರದಾಯಗಳನ್ನು ಬೇರುಸಹಿತ ಕಿತ್ತೊಗೆಯುವ ಸುಧಾರಕನಂತೆ ಕಾಣುತ್ತಾನೆ. ಮತ್ತೊಮ್ಮೆ ಬೇಡವಾದ ಭಾವನೆಗಳನ್ನು ತ್ಯಜಿಸುವ ತಪಸ್ವಿಯಂತೆ ಕಾಣುತ್ತಾನೆ. ಜೀವನದಲ್ಲಿ ಹೆಜ್ಜೆಹೆಜ್ಜೆಗೆ ವಿನಾಶದ ಅವಶ್ಯಕತೆ ಕಂಡು ಬರುತ್ತದೆ. ಬೇಡವಾದ ರೂಢಿಗಳು, ಬೇಡವಾದ ಸ್ನೇಹಿತರು, ಓದಲಾರದ ಪುಸ್ತಕಗಳು, ಕೇಳಲಾರದ ಸಂಗೀತ, ಒಂದೇ ಎರಡೇ, ಇವುಗಳ ಮಧ್ಯದಲ್ಲಿ ನಾವು ಮೂಕಸಂಕಟವನ್ನು ಅನುಭವಿಸುತ್ತೇವೆ. ಇವನ್ನೆಲ್ಲ ಇಲ್ಲದಂತೆ ಮಾಡಿ ಬಾಳುವ ಧೈರ್ಯ ಯಾರಿಗಿದೆ? ಹಾಗೆ ಮಾಡುವ ಪ್ರಯತ್ನದಲ್ಲಿ ಕೂಡ ಎಷ್ಟು ಆಕ್ರೋಶ, ಎಂಥ ಅಸಮಾಧಾನ! ಅಂತಲೇ ನಾನು ಹೇಳಿದ್ದು, ವಿನಾಶ ಮಾಡುವದೂ ಒಂದು ಕಲೆ. ಬರೆದು, ಅಳಿಸಿ, ಮತ್ತೆ ಬರೆಯುವ ಕವಿಗಿಂತ, ಒಮ್ಮೆ ಒಂದು ಕೂದಲನ್ನು ಕತ್ತರಿಯಿಂದ ಮುಟ್ಟಿದರೆ ಅದೇ ಕೊನೆಯದು ಎಂಬ ಎಚ್ಚರಿಕೆಯಿಂದ ಕೆಲಸ ಮಾಡುವ ಕ್ಷೌರಿಕ ಶ್ರೇಷ್ಠನಾದ ಕಲಾವಿದ.

ಕೆಳಮಟ್ಟದ ಮನುಷ್ಯನಿಗೆ ಹೆಚ್ಚು ವಿರಾಮ ವೇಳೆ ಒದಗಿಸುವದರಿಂದ ಪ್ರಯೋಜನವಾದೀತೆಂಬುದು ಬರಿ ಭ್ರಮೆ. ಮೂಢನು ಹೆಚ್ಚಿನ ವಿರಾಮವನ್ನು ಮೂಢ ರೀತಿಯಲ್ಲೇ ಕಳೆಯುತ್ತಾನೆ.

— ಎಚ್. ಎಲ್. ಮೆಂಕೆನ್

**ಬಸಿರಿಯರು ಗಂಡು ಹುಟ್ಟಬೇಕೆಂದು**
**ಅಶ್ವತ್ಥ ಪ್ರದಕ್ಷಿಣೆ ಹಾಕುವುದರಿಂದ**
**ವ್ಯಾಯಾಮ ಹೊರತು ಬೇರೆ ಲಾಭವಿಲ್ಲ**

# ಹೆಣ್ಣೊ - ಗಂಡೊ ?

**ಲೇಖಕ : ಶಂ. ವೆಂ. ಪಾಟೀಲ**

ಗಂಡೋ ? ಹೆಣ್ಣೊ ?

ಪ್ರತಿಯೊಬ್ಬ ಬಸಿರಿಯ ತಲೆಯಲ್ಲಿ ಸುಳಿಯುವ ಈ ಪ್ರಶ್ನೆ ಇಂದುನಿನ್ನೆಯದಲ್ಲ. ಹೆಚ್ಚು ತಾಯಂದಿರಿಗೆ ಗಂಡು ಬೇಕು; ಕೆಲವರು ಹೆಣ್ಣೇ ಬೇಕೆನ್ನುವವರೂ ಇದ್ದಾರೆ.

ಈ ಅಭಿಲಾಷೆಯ ಫಲವಾಗಿ ಅನಾದಿಯಿಂದಲೂ ಇಚ್ಛಾಸಂತಾನದ ಉಪಾಯಗಳನ್ನು ಪುರೋಹಿತರಿಂದ ಹಿಡಿದು ವೈದ್ಯರ ವರೆಗೆ, ಸಂನ್ಯಾಸಿಗಳಿಂದ ಹಿಡಿದು ಮುದುಕಮ್ಮನ ವರೆಗೆ ಎಲ್ಲರೂ ಯೋಜಿಸಿದ್ದುಂಟು. ಉದಾಹರಣೆಗೆ, ಸುಶ್ರುತನೆಂಬ ಪ್ರಾಚೀನ ಹಿಂದೂ ವೈದ್ಯನು ಪುರುಷ ಸಂತಾನ ಬೇಕಾದರೆ ಹೆಂಗಸು ಮುಟ್ಟಾದ ೪-೬-೮-೧೦-೧೨ನೇ ದಿನಗಳಲ್ಲಿ ಗರ್ಭಾಧಾನ ಮಾಡಬೇಕೆನ್ನುತ್ತಾನೆ. ಗರ್ಭ ನಿಂತ ಮೇಲೆ ಕೆಲ ಜಾತಿಯ ಪುಷ್ಪಗಳನ್ನು ಹಾಲಿನಲ್ಲಿ ಅರೆದು ಮೂರುನಾಲ್ಕು ಬಿಂದುಗಳನ್ನು ಪುತ್ರೇಪ್ಸೆಯುಳ್ಳ ಬಸಿರಿಯ ಬಲ ಮೂಗಿನಲ್ಲಿ ಬಿಡಬೇಕೆಂದೂ ಸೂಚಿಸುತ್ತಾನೆ. ಅಶ್ವತ್ಥ ಪ್ರದಕ್ಷಿಣೆ ಮೊದಲಾದ ಧಾರ್ಮಿಕ ಉಪಾಯಗಳಂತೂ ಇದ್ದೇ ಇವೆ.

ಬಸಿರೊಳಗಿನ ಶಿಶುವಿನ ಲಿಂಗವನ್ನು ಇಚ್ಛೆಯಂತೆ ಮಾರ್ಪಡಿಸಲು ಸಾಧ್ಯವೇ ? ಆಧುನಿಕ ಜನನ ವಿಜ್ಞಾನವು ಈ ಪ್ರಶ್ನೆಗೆ ಕೊಡುವ ಉತ್ತರ ನಿರಾಶಾದಾಯಕವಾಗಿದೆ. ನಿಮ್ಮ ಮಗುವಿನ ಲಿಂಗವನ್ನು ಗರ್ಭ ನಿಲ್ಲುವ ಮೊದಲು ಕೂಡ ನೀವು ನಿಯಂತ್ರಿಸಲಾರಿರಿ! ಗರ್ಭ ನಿಂತ ಮೇಲಂತೂ ಅದು ಅಸಾಧ್ಯವೇ ಸೈ. ಸಾಲದ್ದಕ್ಕೆ ಭಾವಿ ಸಂತಾನದ ಲಿಂಗನಿರ್ಣಯ ತಾಯಿಯಿಂದಲ್ಲ, ತಂದೆಯಿಂದಲೇ ಆಗುತ್ತದೆ.

ಪ್ರತಿಯೊಂದು ಶಿಶುವಿನ ಉದ್ಭವವೂ ತಾಯಿಯ ಅರ್ಧ ಮತ್ತು ತಂದೆಯ ಅರ್ಧ ಅಂಶದಿಂದ ಆಗುತ್ತದೆ. ತಾಯಿಯ ಅಂಶದಲ್ಲಿ ಅವಳ ಆನುವಂಶಿಕ ಗುಣಗಳ ೨೪ ವರ್ಣರೇಷೆಗಳು ( ಇಂಗ್ಲೀಷಿನಲ್ಲಿ–Chromosomes ) ಮತ್ತು ತಂದೆಯ ಅಂಶದಲ್ಲಿ ಅವನ ಆನುವಂಶಿಕ ಗುಣಗಳ ೨೪ ವರ್ಣರೇಷೆಗಳು ಇರುತ್ತವೆ. ತಾಯಿಯ ಅಂಶವು ಅವಳ ಋತುಕಾಲದಲ್ಲಿ ಗರ್ಭಾಶಯದಲ್ಲಿ ಹುಟ್ಟುವ "ಅಂಡ"ಗಳಲ್ಲಿ ಮತ್ತು ತಂದೆಯ ಅಂಶವು ಅವನ ವೀರ್ಯದಲ್ಲಿರುವ ಸೂಕ್ಷ್ಮ "ಬೀಜ"ಗಳಲ್ಲಿ ಸೇರಿರುತ್ತವೆ. ಇವೆರಡರ ಸಂಯೋಗದಿಂದ ಗರ್ಭದಲ್ಲಿ ಮೊದಲನೇ ಜೀವಕೋಶ ( Cell ) ಉಂಟಾಗುತ್ತದೆ. ಈ ಕೋಶದಲ್ಲಿ ಹೀಗೆ ತಂದೆ ತಾಯಿಗಳ ಒಟ್ಟು ೪೮ ಆನುವಂಶಿಕ ರೇಷೆಗಳು ಸೇರಿವೆಯೆಂದಾಯಿತು. ಈ

ಕೋಶಗಳೇ ವಿಭಜನೆ ಹೊಂದಿ ಇಮ್ಮಡಿಯಾಗುತ್ತಾಗುತ್ತ ಸಂಖ್ಯೆಯಲ್ಲಿ ಬೆಳೆದು ಪ್ರತಿಯೊಬ್ಬ ಮಾನವನ ಶರೀರವು ರೂಪಿತವಾಗುತ್ತದೆ.

ಒಟ್ಟಿನ ಮೇಲೆ ಹೇಳುವುದಾದರೆ ಗಂಡಸು ಹೆಂಗಸರಿಬ್ಬರ ದೇಹದ ಜೀವಕೋಶಗಳೂ ಏಕರೂಪವಾಗಿವೆ; ಅಂದರೆ ಪ್ರತಿಯೊಂದರಲ್ಲಿ ೨೪-೨೪ ಜೋಡಿ ಆನುವಂಶಿಕ ಗುಣಗಳ ವರ್ಣರೇಷೆಗಳಿರುತ್ತವೆ. ಆದರೆ ಹೆಂಗಸಿನ ದೇಹದ ಕೋಶಗಳ ರಚನೆಗೂ ಗಂಡಸಿನದಕ್ಕೂ ಒಂದು ಮೂಲಭೂತ ಭೇದವಿದೆ ಮತ್ತು ಅದೇ ಅವರಿಂದ ಹುಟ್ಟುವ ಮಕ್ಕಳ ಲಿಂಗಭೇದಗಳಿಗೆ ಕಾರಣವಾಗಿದೆ.

ಹೆಂಗಸಿನ ದೇಹದ ಪ್ರತಿ ಕೋಶದಲ್ಲಿರುವ ೨೪ ಜತೆ ವರ್ಣರೇಷೆಗಳಲ್ಲಿ ಪ್ರತಿಯೊಂದು ಜತೆಯೂ ಅವಳಿಗಳಂತೆ ಏಕರೂಪವಾಗಿರುತ್ತದೆ. ಗಂಡಸಿನ ದೇಹದ ಪ್ರತಿ ಕೋಶದಲ್ಲಿರುವ ೨೪ ಜತೆ ವರ್ಣರೇಷೆಗಳಲ್ಲಿ ೨೩ ಜತೆ ಮಾತ್ರ ಅವಳಿಗಳಂತಿದ್ದು ೨೪ ನೇ ಜತೆಯು ಒಂದನ್ನೊಂದು ಹೋಲುವುದಿಲ್ಲ. ಆ ಜತೆಯ ಎರಡು ರೇಷೆಗಳಲ್ಲಿ ಒಂದು ಸ್ವಲ್ಪ ದೊಡ್ಡದು ಇನ್ನೊಂದು ಸ್ವಲ್ಪ ಚಿಕ್ಕದಾಗಿರುತ್ತವೆ. ಈ ರೇಷೆಗಳ ಜೋಡಿಗಳಲ್ಲಿ ಪ್ರತಿಯೊಂದಕ್ಕೂ A ಅಕ್ಷರದಿಂದಾರಂಭಿಸಿ ಸಂಕೇತಗಳನ್ನು ಕೊಡುವುದಾದರೆ ಹೆಂಗಸಿನ ಕೋಶಗಳಲ್ಲಿ AA, BB.... ಹೀಗೆ XX ವರೆಗೆ ಸಜಾತೀಯ ಜೋಡಿಗಳಿರುತ್ತವೆ. ಆದರೆ ಗಂಡಸಿನಲ್ಲಿರುವ ವರ್ಣರೇಷೆಗಳಿಗೆ ಹೀಗೇ ಸಂಕೇತಗಳನ್ನಿತ್ತರೆ A A, B B... WW ವರೆಗೆ ಮಾತ್ರ ಸಜಾತೀಯ ಜೋಡಿಗಳಿದ್ದು ೨೪ನೇ X ಜೋಡಿಯಲ್ಲಿ ಭೇದ ಕಾಣಿಸುವುದರಿಂದ ಅದು XX ಆಗದೆ XY ಎಂಬ ವಿಜಾತೀಯ ಜೋಡಿಯಾಗುತ್ತದೆ

ಈಗ ಈ ಅಲ್ಪ ವ್ಯತ್ಯಾಸವು ಹೇಗೆ ಶಿಶುವಿನ ಲಿಂಗವನ್ನು ನಿರ್ಣಯಿಸುವುದೆಂದು ನೋಡುವಾ.

ಸ್ತ್ರೀಯ ಗರ್ಭದಲ್ಲಿ ಉತ್ಪನ್ನವಾಗುವ ಅಂಡವು ಅವಳ ಜೀವಕೋಶದ ೨೪ ಜೋಡಿ ರೇಷೆಗಳಲ್ಲಿ ಪ್ರತಿಯೊಂದರಿಂದಲೂ ಒಂದೊಂದು ಒಂಟಿ ರೇಷೆಯನ್ನು ಒಳಗೊಂಡು ರೂಪಿತವಾಗಿರುತ್ತದೆ. ಗಂಡಸಿನ ಬೀಜವೂ ಅದೇ ರೀತಿ ತಯಾರಾಗುತ್ತದೆ. ಆದರೆ ಸ್ತ್ರೀಯ ೨೪ ಜೋಡಿ ವರ್ಣರೇಷೆಗಳೂ ಸಜಾತೀಯವಾಗಿರುವುದರಿಂದ XX ಜೋಡಿಯಲ್ಲಿ ಯಾವ ಒಂದು ವರ್ಣರೇಷೆಯನ್ನು ಕೊಟ್ಟರೂ ಉಂಟಾಗುವ ಅಂಡ ಒಂದೇ ತರಹದ್ದಾಗುವುದು. ಪುರುಷನದು ಹಾಗಲ್ಲ. ಅವನ ೨೪ನೇ (XY) ಜೋಡಿ ವರ್ಣರೇಷೆ ವಿಜಾತೀಯವಾಗಿದೆ. ಆದ್ದರಿಂದ ಅವನ ವೀರ್ಯದ ಬೀಜಗಳಲ್ಲಿ ಕೆಲವು A, B, C.... X ಮಾದರಿಯವು ಮತ್ತು ಕೆಲವು A, B, C.... Y ಮಾದರಿಯವು ಎಂಬ ಎರಡು ಜಾತಿಗಳಾಗುವವು.

ಅಂದರೆ ಹೆಂಗಸಿನ ಅಂಡಗಳೆಲ್ಲವೂ ಒಂದೇ ಜಾತಿಯವಿರುತ್ತವೆ. ಆದ್ದರಿಂದ ತಾಯಿ ಮಗುವಿನ ಲಿಂಗನಿರ್ಣಯ ಮಾಡಲಾರಳು. ಗಂಡಸಿನ ಬೀಜಗಳು ಎರಡು ಜಾತಿ. ಅವುಗಳಲ್ಲಿ X ರೇಷೆಯುಳ್ಳದ್ದು ಹೆಣ್ಣಿನ ಮತ್ತು Y ಉಳ್ಳದ್ದು ಗಂಡಿನ ಉತ್ಪತ್ತಿಗೆ ಕಾರಣವಾಗುತ್ತದೆ.

ಒಂದು ಸಾಮಾನ್ಯ ಉದಾಹರಣೆ ಕೊಡಬೇಕಾದರೆ ಎರಡು ಹಣ್ಣಿನ ಬುಟ್ಟಿಗಳಿವೆಯೆಂದುಕೊಳ್ಳಿರಿ. ಒಂದು ಬುಟ್ಟಿಯಲ್ಲಿ ಸೇಬು, ಮೂಸಂಬಿ ಇತ್ಯಾದಿ ೨೪ ಜಾತಿಗಳ ಹಣ್ಣುಗಳ ಎರಡೆರಡು ಹೋಳುಗಳಿವೆ. ಕೊನೆಯದು ಕಿತ್ತಳೇ ಹಣ್ಣಿನ ಒಂದು ಜತೆ ಹೋಳು. ಇನ್ನೊಂದು ಬುಟ್ಟಿಯಲ್ಲಿಯೂ ಅವೇ ಹಣ್ಣುಗಳ ಜೋಡಿಜೋಡಿಗಳಿವೆ. ಆದರೆ ೨೩ ಮಾತ್ರ. ಅದರ ೨೪ ನೇ ಜೋಡಿಯಲ್ಲಿ ಒಂದು ಹೋಳು ಕಿತ್ತಳೆ ಇನ್ನೊಂದು ನಿಂಬೇ ಹೋಳು ಇದೆ. ಈಗ ನೀವು ಪ್ರತಿ ಬುಟ್ಟಿಯಲ್ಲಿರುವ ಪ್ರತಿ ಹಣ್ಣಿನ ಜೋಡಿ ಹೋಳುಗಳಲ್ಲಿ ಒಂದೊಂದನ್ನು ತೆಗೆದುಕೊಂಡು ಬೇರೆ ಎರಡು ಹೊಸ ಬುಟ್ಟಿಗಳಿಗೆ ಹಾಕಿದಿರಾದರೆ ಹೊಸ ಬುಟ್ಟಿಗಳಲ್ಲಿ ಒಂದು ಮೊದಲನೇ ಬುಟ್ಟಿಯ ಸ್ವರೂಪದ್ದಾಗುವುದು ಮತ್ತು ಇನ್ನೊಂದು ಎರಡನೇ ಬುಟ್ಟಿಯಂತಾಗುವುದು, ಅರ್ಥಾತ್ ಒಂದು ಬುಟ್ಟಿಯಲ್ಲಿ ಕಿತ್ತ

ಳೆಯ ಎರಡು ಹೋಳು ಮತ್ತು ಇನ್ನೊಂದರಲ್ಲಿ ಒಂದು ಹೋಳು ಕಿತ್ತಳೆ ಇನ್ನೊಂದು ಹೋಳು ನಿಂಬೆ ಆಗುವುದು. ಗಂಡು ಮತ್ತು ಹೆಣ್ಣು ಗರ್ಭವಾಗುವುದು ಹೀಗೆಯೇ.

ಗರ್ಭೋತ್ಪತ್ತಿ ಆಗುವ ರೀತಿ ಇಂತು: ಗಂಡಸಿನ ವೀರ್ಯದಲ್ಲಿ ತೇಲುತ್ತಿರುವ ಅಸಂಖ್ಯ ಬೀಜಗಳಲ್ಲಿ ಅರ್ಧಪಾಸಿ X ಗುಣದವುಗಳೂ ಅರ್ಧಪಾಸಿ Y ಗುಣದವೂ ಇರುತ್ತವೆ. ಪ್ರತಿಯೊಂದು ಸಂಯೋಗದಲ್ಲಿಯೂ ವೀರ್ಯಸ್ಖಲನವಾದಾಗ ಸುಮಾರು ೨೦ ಕೋಟಿಯಿಂದ ೫೦ ಕೋಟಿಯ ವರೆಗೂ ಬೀಜಗಳು ಸ್ತ್ರೀಯ ಯೋನಿಯಲ್ಲಿ ಬೀಳುತ್ತವೆ. ಅವುಗಳಲ್ಲಿ ಅರ್ಧ X ಗುಣದವೂ ಅರ್ಧ Y ಗುಣದವೂ ಆಗಿರುತ್ತವೆ.

ವೀರ್ಯಸ್ಖಲನವಾದೊಡನೇ ಅದರಲ್ಲಿರುವ ಬೀಜಗಳೆಲ್ಲ ರಭಸದಿಂದ ಗರ್ಭಕೋಶದತ್ತ ಧಾವಿಸತೊಡಗುತ್ತವೆ. ಅವುಗಳಲ್ಲಿ ಯಾವುದಾದರೊಂದು ಬೀಜವು ಓಟದಲ್ಲಿ ಗೆದ್ದು ಮೊದಲು ಗರ್ಭಾಶಯದೊಳಗಿನ ಅಂಡವನ್ನು ಪ್ರವೇಶಿಸಿದೊಡನೆ ಅಂಡವು "ಬಾಗಿಲನ್ನು ಮುಚ್ಚಿ" ಇತರ ಬೀಜಗಳಿಗೆ ಪ್ರವೇಶವನ್ನು ನಿರಾಕರಿಸುತ್ತದೆ. ಉಳಿದವು ಹಾಗೇ ಸತು ಹೋಗುತ್ತವೆ

ಓಟ ಗೆದ್ದ ಬೀಜವು X ಗುಣಯುಕ್ತವಾದರೆ ಅಂಡದೊಳಗಿನ X ನೊಡನೆ ಬೀಜದ X ಸೇರಿ XX ಜೋಡಿಯಾಗಿ ಹೆಣ್ಣೂ Y ಗುಣದ್ದಾದರೆ XY ಜೋಡಿಯಾಗಿ ಗಂಡೂ ಉತ್ಪತ್ತಿಯಾಗುತ್ತದೆ. ಇದು ಶಾಶ್ವತ ನಿರ್ಣಯ. ಹೀಗೆ ಒಮ್ಮೆ ಲಿಂಗ ನಿರ್ಧಾರವಾದ ಮೇಲೆ ಬದಲಾವಣೆ ಶಕ್ಯವಿಲ್ಲ. [ಚಿತ್ರ ನೋಡಿರಿ, ಪು. ೭೧]

ಸೃಷ್ಟಿಯ ಈ ಅನಾದಿ ರಹಸ್ಯವನ್ನು ಭೇದಿಸುವಲ್ಲಿ ಬೇರೆ ಅನೇಕ ರಹಸ್ಯಗಳೂ ಬಿಡಿಸಲ್ಪಟ್ಟಿವೆ.

**ಗಂಡು ಮಕ್ಕಳು ಏಕೆ ಹೆಚ್ಚು?** ಜನನ ವರದಿಗಳಿಂದ ಪ್ರತಿ ೧೦೦ ಹೆಣ್ಣುಗಳಿಗೆ ೧೦೫ ರಂತೆ ಗಂಡು ಮಕ್ಕಳು ಹುಟ್ಟುವವೆಂದು ಗೊತ್ತಾಗಿದೆ. ಇದಕ್ಕೆ ಕಾರಣವಿದೆ. ವೀರ್ಯದಲ್ಲಿ X ಮತ್ತು Y ಬೀಜಗಳ ಸಂಖ್ಯೆ ಸಮವಾಗಿದ್ದರೂ Y ಬೀಜಗಳು ಹಗುರವಾಗಿರುವುದರಿಂದಲೋ ಏನೋ ಅವುಗಳ ಓಟದ ರಭಸ ಸ್ವಲ್ಪ ಹೆಚ್ಚಾಗಿರುವುದರಿಂದ ಅವು ಓಟದಲ್ಲಿ ಗೆದ್ದು ಅಂಡವನ್ನು ಮೊದಲು ಸೇರುವ ಸಂಭವ ಹೆಚ್ಚಾಗುತ್ತದೆ.

ಜನನದಲ್ಲಿ ಗಂಡುಗಳ ಸಂಖ್ಯೆ ನೂರಕ್ಕೆ ೫ ರಷ್ಟು ಹೆಚ್ಚಾಗಿದ್ದರೂ ಗರ್ಭೋತ್ಪತ್ತಿಯಲ್ಲಿ ಅವುಗಳ ಸಂಖ್ಯೆ ಇನ್ನೂ ಹೆಚ್ಚಾಗಿರುತ್ತದೆ. ಗಂಡು ಗರ್ಭೋತ್ಪತ್ತಿಯ ಪ್ರಮಾಣ ಹೆಣ್ಣಿಗಿಂತ ನೂರಕ್ಕೆ ೨೫ರಿಂದ ನೂರಕ್ಕೆ ೧೦೦ರ ವರೆಗೂ ಹೆಚ್ಚಾಗಿರಬೇಕೆಂದು ತರ್ಕಿಸಲಾಗಿದೆ. ಆದರೆ ಗಂಡು-ಗರ್ಭಕ್ಕೆ ಬರುವ ಕುತ್ತುಗಳೂ ಹೆಚ್ಚು. ಅದರಿಂದ ಪ್ರಸವ ಕಾಲ ಬರುವುದರೊಳಗೆ ಗರ್ಭದಲ್ಲಿ ಸತ್ತು ಹೋಗುವ ಭ್ರೂಣಗಳಲ್ಲಿ ಗಂಡು ಭ್ರೂಣಗಳ ಸಂಖ್ಯೆ ಹೆಣ್ಣು ಭ್ರೂಣಗಳ ಸಂಖ್ಯೆಗಿಂತ ಬಹಳ ಅಧಿಕವಾಗಿರುತ್ತದೆ.

**ಹೆಣ್ಣು ಅಬಲೆಯಲ್ಲ.** ಇದರಿಂದ ಹೆಣ್ಣು ಅಬಲೆಯೆಂಬ ಲೋಕವಾರ್ತೆ ನಿರಾಧಾರವೆಂದು ಸಿದ್ಧವಾಗಿದೆ. ಗರ್ಭಾಶಯದ ಪ್ರವೇಶದ ಶರ್ಯತ್ತಿನಲ್ಲಿ ಗೆಲ್ಲುವುದೊಂದೇ ಗಂಡು ಬೀಜದ ಹೆಚ್ಚಳ. ಆ ಮೇಲೆ ಹೆಜ್ಜೆಹೆಜ್ಜೆಗೂ ಅದಕ್ಕೆ ಮೃತ್ಯುಭಯ ಹೆಣ್ಣಿಗಿಂತ ಹೆಚ್ಚು. ಗಂಡು ಗರ್ಭಗಳ ಸಂಖ್ಯೆ ನೂರಕ್ಕೆ ೨೫ ರಿಂದ ೧೦೦ ರ ವರೆಗೂ ಹೆಚ್ಚಾಗಿದ್ದರೂ ಅವುಗಳಲ್ಲಿ ಅಸಂಖ್ಯ ಭ್ರೂಣಗಳು ಎರಡು ತಿಂಗಳಾಗುವ ಮೊದಲೇ ಸತ್ತು ಹೋಗುತ್ತವೆ. ಗರ್ಭನಿಂತು ಎರಡು ತಿಂಗಳ ವರೆಗೆ ಪಾತವಾಗಿ ಹೋಗುವ ಹೆಣ್ಣು ಭ್ರೂಣಗಳ ಸಂಖ್ಯೆಯೂ ಬಹಳವಾಗಿದ್ದರೂ ಗಂಡಿನಷ್ಟಿರುವುದಿಲ್ಲೆಂದು ತರ್ಕಿಸಲಾಗಿದೆ. ಈ ಅವಧಿಯಲ್ಲಿ ಭ್ರೂಣವು ಅವರೆ ಬೀಜಕ್ಕಿಂತ ದೊಡ್ಡದಾಗಿರುವದಿಲ್ಲವಾದ್ದರಿಂದ ಗರ್ಭಪಾತದ ಸಂಗತಿ ಸ್ವತಃ ತಾಯಿಗೂ ತಿಳಿಯುವದು ಅಪರೂಪ.

**ಮೂರನೇ ತಿಂಗಳಿಂದ ತಜ್ಞರು ಭ್ರೂಣದ ಲಿಂಗವನ್ನು ಗುರುತಿಸಬಲ್ಲರು.** ಮತ್ತು ಅನಂತರ ಆದ ಗರ್ಭಪಾತಗಳಲ್ಲಿ ಬಿದ್ದು ಹೋದ

## ಗರ್ಭದಲ್ಲಿ ಹೆಣ್ಣು—ಗಂಡು ಹೇಗಾಗುತ್ತವೆ ?

ಸ್ತ್ರೀ ಪುರುಷರಿಬ್ಬರ ದೇಹಗಳ ಕೋಶಗಳಲ್ಲಿ ಪ್ರತಿಯೊಂದರಲ್ಲಿ ೨೪ ಜೋಡಿ ವರ್ಣ ರೇಷೆಗಳು ಇದ್ದರೂ ಅವರ ಕೋಶಗಳ ರಚನೆಯಲ್ಲಿ ಈ ಮೂಲ ಅಂತರವಿರುತ್ತದೆ:





ಸ್ತ್ರೀದೇಹದ ಪ್ರತಿ ಕೋಶದಲ್ಲಿನ ವರ್ಣ ರೇಷೆಗಳ ಪೈಕಿ X ಎಂಬ ಇಂಥ ವರ್ಣರೇಷೆಗಳು ಎರಡು ಇವೆ.

ಪುರುಷ ದೇಹದ ಪ್ರತಿ ಕೋಶದಲ್ಲಿ X ಎಂಬ ಒಂದೇ ವರ್ಣರೇಷೆ ಇದ್ದು ಅದರ ಜತೆಗಿರುವುದು Y ಎಂಬ ಚಿಕ್ಕ ರೇಷೆಯಾಗಿದೆ.





ಸಂತಾನೋತ್ಪತ್ತಿಗೆ ಅಣಿಯಾದಾಗ ಸ್ತ್ರೀದೇಹವು ಅಂಡವನ್ನೂ ಪುರುಷ ದೇಹವು ಬೀಜವನ್ನೂ ಉತ್ಪಾದಿಸುತ್ತವೆ. ಪ್ರತಿ ಅಂಡ ಮತ್ತು ಬೀಜದಲ್ಲಿ ಆಯಾ ದೇಹದ ಕೋಶದಲ್ಲಿನ ವರ್ಣರೇಷೆಗಳ ಅರ್ಧಾಂಶ ಅಂದರೆ ಪ್ರತಿ ಜೋಡಿಯಲ್ಲಿನ ಒಂದೊಂದು ರೇಷೆ ಮಾತ್ರ ಸೇರಿಕೊಳ್ಳುತ್ತದೆ. ಹೀಗೆ—

ಸ್ತ್ರೀ ಕೋಶದಲ್ಲಿ ಎರಡೂ X ಇರುವುದರಿಂದ ಪ್ರತಿ ಅಂಡಕ್ಕೂ ಒಂದೊಂದು X ದೊರೆಯುತ್ತದೆ. ಹೀಗೆ ಎಲ್ಲ ಅಂಡಗಳೂ ಏಕರೂಪವಾಗುತ್ತವೆ:




ಆದರೆ ಪುರುಷ ಕೋಶದಲ್ಲಿ X ಮತ್ತು Y ಎಂಬ ಎರಡು ತರದ ರೇಷೆಗಳಿರುವುದರಿಂದ ಅವನು ಎರಡು ಬಗೆಯ ಬೀಜಗಳನ್ನು ತಯಾರಿಸುತ್ತಾನೆ:







ಗರ್ಭದಲ್ಲಿ ಪುರುಷ-ಸ್ತ್ರೀ ಭೇದ ಹೀಗಾಗುತ್ತದೆ. X ಇರುವ ಬೀಜವು ಅಂಡವನ್ನು ಹೊಕ್ಕರೆ XX ಜತೆಯಾಗಿ ಹೆಣ್ಣು ಹುಟ್ಟುತ್ತದೆ.




Y [illegible] ಹುಟ್ಟುತ್ತದೆ.



ಭ್ರೂಣವು ಗಂಡೋ ಹೆಣ್ಣೋ ಎಂದು ಗುರುತಿಸಲು ಶಕ್ಯವಿದೆ. ಇಂಥ ಗರ್ಭಪಾತಗಳಲ್ಲಿ ಹೆಣ್ಣು ಗಂಡುಗಳನ್ನು ವಿಂಗಡಿಸಿದಾಗ ಈ ಕೆಳಗಿನ ಸಂಗತಿಗಳು ತಿಳಿದುಬಂದಿವೆ.

೩ ನೇ ತಿಂಗಳಲ್ಲಿ ಪ್ರತಿ ೧೦೦ ಹೆಣ್ಣು ಗರ್ಭಪಾತಗಳಿಗೆ ೪೦೦ ಗಂಡು ಗರ್ಭಗಳಂತೆ ನಾಶವಾಗುತ್ತವೆ.

೪ ನೇ ತಿಂಗಳಲ್ಲಿ ೧೦೦ ಹೆಣ್ಣು ಗರ್ಭಪಾತಗಳಿಗೆ ೨೦೦ರಂತೆ ಗಂಡುಗರ್ಭಗಳು ಹೋಗುತ್ತವೆ.

ಮುಂದೆ ಗಂಡು ಗರ್ಭಗಳ ಪಾತದ ಪ್ರಮಾಣ ಇಳಿಮುಖವಾದರೂ ಹೆಣ್ಣಿಗಿಂತ ಯಾವಾಗಲೂ ಹೆಚ್ಚೇ ಇರುತ್ತದೆ. ಕೊನೆಯ ಎರಡು ತಿಂಗಳಲ್ಲಿ ಗಂಡು ಗರ್ಭದ ಗಾತ್ರ ಹೆಚ್ಚಾಗಿರುವುದು ಅದಕ್ಕೆ ಹೊಸ ಆತಂಕವಾಗುತ್ತದೆ. ಈ ಕಾರಣದಿಂದ ಹುಟ್ಟುವಾಗ ಸಾಯುವ ಮಕ್ಕಳಲ್ಲಿ ಗಂಡುಗಳ ಸಂಖ್ಯೆ ಹೆಣ್ಣುಗಳಿಗಿಂತ ೧೦೦ ಕ್ಕೆ ೩೮ ರಷ್ಟು ಹೆಚ್ಚಾಗಿರುತ್ತದೆ.

ಹುಟ್ಟಿದ ಮೇಲೂ ಗಂಡು ಸಾವುಗಳ ಸಂಖ್ಯೆ ಹೆಣ್ಣು ಸಾವುಗಳಿಗಿಂತ ಹೆಚ್ಚಾಗಿಯೇ ಇರುತ್ತದೆ. ಮುದಿ ವಯಸ್ಸಿಗೆ ಬರುವಷ್ಟರಲ್ಲಿ ಭೂಮಿಯಲ್ಲಿ ಉಳಿಯುವ ಗಂಡಸರ ಸಂಖ್ಯೆ ಹೆಂಗಸರಿಗಿಂತ ಕಡಿಮೆಯಾಗಿಹೋಗುತ್ತದೆ.

**ಗಂಡು ಸಂತಾನದ ಸಂಭವವನ್ನು ಹೆಚ್ಚಿಸಿಕೊಳ್ಳಲು ಸಾಧ್ಯವಿಲ್ಲವೆ?** ಇಷ್ಟೆಲ್ಲ ಹೇಳಿದ ಮೇಲೆ ಗರ್ಭದಲ್ಲಿರುವ ಹೆಣ್ಣನ್ನು ಗಂಡಾಗಿ ಮಾಡಲು ಸಾಧ್ಯವಿಲ್ಲೆಂದಾಯಿತು. ಆದರೂ ಗಂಡು ಸಂತಾನದ **ಸಂಭವ**ವನ್ನು ಹೆಚ್ಚಿಸಿಕೊಳ್ಳುವುದು ಶಕ್ಯವಿದೆ.

ಗಂಡು ಗರ್ಭಗಳ ಉತ್ಪತ್ತಿಯ ಸಂಖ್ಯೆ ಹೆಚ್ಚೆಂದು ಮೇಲೆ ಹೇಳಿದೆಯಷ್ಟೇ. ಅವುಗಳ ಪಾತ ಹೆಚ್ಚಾಗಲು ಎರಡು ಕಾರಣಗಳಿವೆ. ಒಂದು ಭ್ರೂಣದಲ್ಲೇ ಇರುವ ಸಹಜ ದೋಷ. ಅದಕ್ಕೇನೂ ಉಪಾಯವಿಲ್ಲ. ಇನ್ನೊಂದು ಕಾರಣ ಬಸಿರಾಗಿರುವಾಗಿನ ತಾಯಿಯ ದೇಹಸ್ಥಿತಿ. ತಾಯಿಯ ಸ್ಥಿತಿ ಚೆನ್ನಾಗಿಲ್ಲದಿದ್ದರೆ ಸಹಜ ದುರ್ಬಲವಾದ ಗಂಡುಗರ್ಭದ ಪಾತವಾಗುವ ಸಂಭವವೇ ಹೆಚ್ಚು. ಅವಳು ಸದೃಢಳಾಗಿದ್ದರೆ ಅದು ಉಳಿಯುವ ಆಸೆ ಹೆಚ್ಚು. ಹೆಂಗಸಿನ ದೇಹದಾರ್ಢ್ಯ ಉತ್ತಮವಾಗಿರುವ ೨೦—೩೦ರ ನಡುವಣ ವಯಸ್ಸಿನಲ್ಲಿ ಗಂಡು ಮಕ್ಕಳ ಜನನವು ಆ ಅವಧಿಯ ಹಿಂದುಮುಂದಿಗಿಂತ ಹೆಚ್ಚಾಗಿರುವುದೂ ಹೆಂಗಸರ ಆರೋಗ್ಯಕ್ಕೆ ವಿಶೇಷ ಲಕ್ಷ್ಯವೀಯುವ ಮುಂದುವರಿದ ದೇಶಗಳಲ್ಲಿ ಗಂಡು ಹುಟ್ಟುವುದು ಹಿಂದುಳಿದ ದೇಶಗಳಿಗಿಂತ ಹೆಚ್ಚಾಗಿರುವುದೂ ಇದನ್ನೇ ತೋರಿಸುತ್ತದೆ.

**ಇಷ್ಟಸಂತತಿಯ ಸಂಭಾವ್ಯತೆ.** ವಿಜ್ಞಾನಿಗಳು ಈಗ ಸಂತತಿಯ ಲಿಂಗನಿರ್ಣಯ ರಹಸ್ಯವನ್ನು ಕಂಡುಹಿಡಿದು ಬೀಜಗಳ X ಮತ್ತು Y ಭೇದವನ್ನು ಗುರುತಿಸಲು ಸಮರ್ಥರಾಗಿರುವುದರಿಂದ ವೀರ್ಯದೊಳಗಿನ ಈ ಎರಡು ಜಾತಿಯ ಬೀಜಗಳನ್ನು ಬೇರ್ಪಡಿಸಿ ಕೃತಕ ಗರ್ಭಾಧಾನದಿಂದ ಇಷ್ಟ ಲಿಂಗದ ಸಂತತಿಯನ್ನು ಕೊಡಿಸಲಾರರೆ? ತತ್ವತಃ ಖಂಡಿತವಾಗಿ ಸಾಧ್ಯವಿದೆ. ಆದರೆ ಇನ್ನೂ ಇದರ ವ್ಯವಹಾರ್ಯವಾದ ತಂತ್ರ ಶಕ್ಯವಾಗಿಲ್ಲ. ಕಾಲಾಂತರದಲ್ಲಿ ಇದು ಕೈಗೂಡಲೇಬೇಕು. ಆಗ ತಾಯಂದಿರು ಬಯಸಿದಂತೆ ಹೆಣ್ಣು-ಗಂಡು ಪಡೆಯಲಾಪರು.

ಒಬ್ಬ ಮನುಷ್ಯನ ಏಳನೇ ಮಗನಿಗೆ ಹುಟ್ಟಿದ ಏಳನೇ ಗಂಡಸು ಮಗನಿಗೆ "ಡಾಕ್ಟರ" ಎಂದು ನಾಮಕರಣ ಮಾಡಬಹುದು. ಏಳರ ಸಂಖ್ಯಾಬಲದಿಂದ ಅವನಿಗೆ ತಾನಾಗಿ ವೈದ್ಯವಿದ್ಯೆ ಬರುವದೆಂಬ ನಂಬಿಕೆ ಪಾಶ್ಚಾತ್ಯರಲ್ಲಿದೆ.

ನೆನೆವರೆ ಮೈಗೆ ಮುಳ್ಳು ತರುವಂಥ
ಆಕಾಶಬಾಣ ಸಿದ್ಧವಾಗುತ್ತಿದೆ

# ಆಧುನಿಕ ಬ್ರಹ್ಮಾಸ್ತ್ರ

**ಕೋಲಿಯರ್ಸ ಮತ್ತು ಲೈಫ ಪತ್ರಿಕೆಗಳ ಆಧಾರದಿಂದ**

ಇನ್ನು ಬಹಳ ಕಾಲ ಹಿಡಿಯಲಾರದು. ಹತ್ತು ವರ್ಷ—ಐದು ವರ್ಷ, ಅಥವಾ ಎರಡು ಮೂರೇ ವರ್ಷಗಳಲ್ಲಿ ಇರಬಹುದು—ಭೂಮಿಯ ಮೇಲೆ ಹೊಸ ಪರಿಯ ಘೋರ ಯುದ್ಧಪದ್ಧತಿ ಪ್ರಾರಂಭವಾಗಲಿದೆ.

ದೃಶ್ಯ ಇದು: ಕೆಲ ವಿಜ್ಞಾನಿಗಳು ಮತ್ತು ಇಂಜನಿಯರರು ತಮ್ಮ ನೆಲ ಮಾಳಿಗೆಯಲ್ಲಿ ಕುಳಿತು ಸಮಯ ಕಾಯುತ್ತಿದ್ದಾರೆ; ನಿಶ್ಚಿತ ಮುಹೂರ್ತದಲ್ಲಿ ಅವರಲ್ಲೊಬ್ಬನು ಎದ್ದು ಒಂದು ಸ್ವಿಚ್ ಒತ್ತುತ್ತಾನೆ; ಆಕ್ಷಣ ಹೊರಗೆ ಸಿಡಿಲಿನಂಥ ಸಪ್ಪಳದೊಡನೆ ಉರಿ ನಾಲಿಗೆ ಚಾಚುತ್ತ ೧೩೫ ಫೂಟು ಎತ್ತರದ ಆಕಾಶಬಾಣ ವೊಂದು ಊರ್ಧ್ವ ಮುಖವಾಗಿ ಹಾರಿ ಕೆಲ ಕ್ಷಣ ಗಳಲ್ಲಿ ಆಕಾಶದಲ್ಲಿ ಕಣ್ಮರೆಯಾಗುತ್ತದೆ; ಇಪ್ಪತ್ತು ಮೂವತ್ತು ನಿಮಿಷಗಳಲ್ಲಿ ೫,೦೦೦ ಮೈಲು ದೂರವಿರುವ ನಗರವೊಂದು - ಲಂಡನ್, ನ್ಯೂ ಯಾರ್ಕ್, ಮಾಸ್ಕೋ, ಪೆಕಿಂಗ್, ಮುಂಬಯಿ ಅಥವಾ ಕಲಕತ್ತಾ ಇರಬಹುದು-ಹೇಳಹೆಸರಿಲ್ಲದಂತೆ ನೆಲಸಮವಾಗಿರುತ್ತದೆ. ಲಕ್ಷಾಂತರ ಜನ ಕ್ಷಣಾರ್ಧದಲ್ಲಿ ಸಾಯುತ್ತಾರೆ.

ದುಃಸ್ವಪ್ನ? ಅಲ್ಲ. ರಶಿಯ ಮತ್ತು ಅಮೇರಿಕಗಳು ಇಂಥ ಒಂದು ಆಯುಧದ ತಯಾರಿಗಾಗಿ ಕೋಟ್ಯಂತರ ಹಣವನ್ನೂ ಸಾವಿರಾರು ವಿಜ್ಞಾನಿಗಳನ್ನೂ ತೊಡಗಿಸಿವೆ. ಅವರು ಯಶಸ್ವಿಗಳಾಗುವುದರಲ್ಲಿ ಸಂಶಯವಿಲ್ಲ. ಯಾರು ಮೊದಲು ಅದನ್ನು ಸಾಧಿಸುವರೋ ಅವರು ಅಂಗೈಯಲ್ಲಿ ಜಗತ್ತಿನ ಭವಿಷ್ಯತ್ತನ್ನು ಹಿಡಿಯುವರು.

ಈ ಆಯುಧವನ್ನು "ಚರಮ ಆಯುಧ" ವೆಂದು ಕರೆಯಲಾಗಿದೆ. ಬ್ರಹ್ಮಾಸ್ತ್ರವೆಂದು ಬೇಕಾದರೆ ಕರೆಯಿರಿ. ಅದು ಒಮ್ಮೆ ಹಾರಿದ ಮೇಲೆ ಅದನ್ನು ತಡೆಯುವ ಶಕ್ತಿ ಪ್ರಪಂಚದಲ್ಲೇ ಇಲ್ಲವೆನ್ನಬಹುದು. ಯಾಕಂದರೆ ಅದರ ವೇಗ ತಾಸಿಗೆ ೧೨ ರಿಂದ ೧೬ ಸಾವಿರ ಮೈಲುಗಳಷ್ಟಿರುವುದು. ರೇಡಾರ ಉಪಕರಣಗಳೂ ಅದನ್ನು ತಡೆಯಲಾರವು.

ಇಂಥ ೫೦ ಆಕಾಶ ಬಾಣಗಳು ಗುರಿ ತಲುಪಿದರೆ ಅಮೇರಿಕದ ಮುಖ್ಯ ನಗರಗಳೆಲ್ಲ ಧ್ವಂಸವಾಗಿ ೧ ಕೋಟಿಯಿಂದ ೫ ಕೋಟಿ ಜನರಿಗೆ ಸಾವು ನೋವು ಆಗಬಹುದೆಂದು "ಕೋಲಿಯರ್ಸ್" ಎಂಬ ಅಮೇರಿಕನ್ ಪತ್ರಿಕೆಯಲ್ಲಿ ಹ್ಯಾನ್ಸನ್ ಬಾಲ್ಡವಿನ್ನರೆಂಬ ತಜ್ಞರು ತರ್ಕಿಸಿದ್ದಾರೆ. ಇಂಥ ಯುದ್ಧದಲ್ಲಿ ಅಮೇರಿಕ ಮತ್ತು ಬ್ರಿಟನ್ ಮೊದಲಾದ ಅದರ ಮಿತ್ರರನ್ನು ಹಣಿಯಲು ರಶಿಯಕ್ಕೆ ಹೆಚ್ಚು ಸುಲಭ; ಅಮೇರಿಕಕ್ಕೆ ರಶಿಯವನ್ನು ಹಣಿಯುವದು ಅಷ್ಟು ಸುಲಭವಲ್ಲ ಎಂದೂ ಅವರ ಮತ.

"ಖಂಡೋತ್ತರ ಆಕಾಶ ಬಾಣ" ಅಥವಾ ಐ. ಸಿ. ಬಿ. ಎಂ. ( Inter Continental Ballistic Missile ) ಎಂದು ನಾಮಕರಣ ಹೊಂದಿದ ಈ ಭಾವಿ ಬ್ರಹ್ಮಾಸ್ತ್ರವು ಸ್ವತಃ ಸ್ಫೋಟಕವಲ್ಲ. ಅದು ಜಲಜನಕಬಾಂಬುಗಳನ್ನು ಚುಂಚುವಿನಲ್ಲಿ ಹೊತ್ತು ಗುರಿಯನ್ನು ಅಪ್ಪಳಿಸುವ ಒಂದು ಆಕಾಶ ಬಾಣ. ಎರಡನೇ



ಮಹಾಯುದ್ಧ ಕಾಲದಲ್ಲಿ ಜರ್ಮನ್ನರು ಬ್ರಿಟನದ ಮೇಲೆ ಹಾರಿಸಿ ಸಾವಿರಾರು ಸಾವು ನೋವು ಮತ್ತು ಅಪರಿಮಿತ ಹಾನಿಯನ್ನುಂಟುಮಾಡಿದ V2 ಆಕಾಶ ಬಾಣದ ಮೊಮ್ಮಗುವಾಗಿದೆ ಅದು.

ಜರ್ಮನಿಯ ಶರಣಾಗತಿಯ ನಂತರ ಅದರ ಆಕಾಶಬಾಣ ಯೋಜನೆಯ ಪ್ರಮುಖರಾಗಿದ್ದ ಹಲವು ವಿಜ್ಞಾನಿಗಳಲ್ಲಿ ಕೆಲವರು ಅಮೇರಿಕಕ್ಕೂ ಕೆಲವರು ರಶಿಯಕ್ಕೂ ಹೋಗಿ ಅಲ್ಲಿನ ಸರಕಾರಗಳಿಂದ ಪ್ರೋತ್ಸಾಹಿಸಲ್ಪಟ್ಟು ಎಂದಿನಿಂದಲೂ ಯುದ್ಧಕೋವಿದರ ಕನಸಾಗಿದ್ದ ಈ ಬ್ರಹ್ಮಾಸ್ತ್ರಗಳನ್ನು ರೂಪಿಸಲು ದುಡಿಯತೊಡಗಿದರು. ಜರ್ಮನ್ ಆಕಾಶ ಬಾಣ ಯೋಜನೆಯ "ಮಿದುಳು" ಎನಿಸಿದ್ದ ಡಾ. ವರ್ನರ್ ವಾನ್ ಬ್ರೌನರು ಅಮೇರಿಕದ ಕಡೆಗೆ ಬಂದರೂ V2 ಕಾರಖಾನೆಗಳು ರಶಿಯನ್ನರ ಕೈಗೆ ಬಿದ್ದವು. ಇದರಿಂದ ಈ ರಂಗದಲ್ಲಿ ರಶಿಯವು ಅಮೇರಿಕಕ್ಕಿಂತ ಸ್ವಲ್ಪ ಮುಂದಾಗಿದೆಯೆಂದು ನಂಬಲಾಗಿದೆ. ಅಮೇರಿಕವು ಇದರಿಂದ ಗಾಬರಿಯಾಗಿ ಇಮ್ಮಡಿ ಹಟದಿಂದ ಐ ಸಿ ಬಿ ಎಂ ಶರ್ಯತ್ತಿನಲ್ಲಿ ರಶಿಯವನ್ನು ಹಿಂದೆ ಹಾಕಬೇಕೆಂದು ಹವಣಿಸಿದೆ.

ಅಮೇರಿಕದ ಹತ್ತಿರ ಆಗಲೇ ಹಲ ಬಗೆಯ ಆಕಾಶ ಬಾಣಗಳು ಇವೆ. ನೈಕ ಅಥವಾ ಟೆರಿಯರ್, ಕಾರ್ಪೊರಲ್, ಸ್ನಾರ್ಕ್, ನವಾಹೊ ಮೊದಲಾದ ಹೆಸರಿನ ಬಾಣಗಳನ್ನು ಉಲ್ಲೇಖಿಸಬಹುದು. ಇವು ಹಲವು ನೂರುಮೈಲು ದೂರ ಅದ್ಭುತವೇಗದಿಂದ ಹಾರಬಲ್ಲವು. ಆದರೆ ಅವು ಎಲ್ಲವೂ ಭೂಮಿಯ ವಾಯುಮಂಡಲದೊಳಗೇ (೫೦,೦೦೦ ಫೂಟು ಎತ್ತರದೊಳಗೆ) ಅಡ್ಡಲಾಗಿ ಹಾರುವ ಅಸ್ತ್ರಗಳು. ಅವು ನಿಜವಾಗಿ ವೈಮಾನಿಕನಿಲ್ಲದ ವಿಮಾನಗಳೇ. ಅವನ್ನು ತಡೆಯಬಹುದು.

ರಶಿಯವು ಅದಕ್ಕಿಂತ ಮುಂದೆ ಹೋಗಿದೆ. ಕಳೆದ ವರ್ಷವೇ ೮೦೦ ಕ್ಕಿಂತಲೂ ಹೆಚ್ಚು

ಮೈಲು ದೂರ ಹಾರಬಲ್ಲ ದೂರಗಾಮಿ ಅಸ್ತ್ರವೊಂದನ್ನು ರಶಿಯನ್ನರು ಪ್ರಾಯೋಗಿಕವಾಗಿ ಹಾರಿಸಿದರೆಂದು ಖಂಡಿತವಾಗಿ ಗೊತ್ತಾಗಿದೆ. ಈ ವರ್ಷದ ಕೊನೆಯೊಳಗೆ ೧,೫೦೦ ಮೈಲು ದೂರದ ಗುರಿಗಳನ್ನು ತಲುಪಬಲ್ಲ ಅಸ್ತ್ರಗಳನ್ನು ಪ್ರಾಯೋಗಿಕವಾಗಿ ಅವರು ಹಾರಿಸಲಿದ್ದಾರೆಂದು ನಂಬಲಾಗಿದೆ. ರಶಿಯನ್ ನಾಯಕ ನಿಕಿತಾ ಕ್ರುಶ್ಚೇವರು ಇಂಗ್ಲಂಡಿಗೆ ಬಂದಾಗ ಈ ಊಹೆಯನ್ನು ದೃಢಪಡಿಸಿದರು. ಅಮೇರಿಕವು ೧೯೫೭ ರಲ್ಲಿ ಇಂಥ ಅಸ್ತ್ರವೊಂದನ್ನುಹಾರಿಸುವ ಭಗೀರಥ ಪ್ರಯತ್ನದಲ್ಲಿದೆ. ಇವು ಈ ಲೇಖದ ಪ್ರಾರಂಭದಲ್ಲಿ ಹೇಳಿದ "ಬ್ರಹ್ಮಾಸ್ತ್ರ"ದ ಅಣ್ಣಂದಿರೇ ಸೈ.

೫,೦೦೦ ಮೈಲು ದೂರ, ೧೨—೧೬ ಸಾವಿರ ಮೈಲು ವೇಗದಿಂದ, ಹಾರುವ ಈ ಯಂತ್ರಾಸ್ತ್ರ ೧೦೦ ರಿಂದ ೧೩೫ ಪೂಟೆತ್ತರದ ಪೆನ್ಸಿಲಿನ ಆಕಾರದ ಕೊಳವೆಯಾಗಿರಬೇಕಾಗುವುದು ಅದು ತನ್ನ ಗರ್ಭದೊಳಗೆ ಆಕಾಶಬಾಣದ ಎಂಜಿನ್ನು, ದಾರಿ ಖರ್ಚಿಗೆ ಬೇಕಾದ ಉರುವಲು ದ್ರವ್ಯ ಇವುಗಳನ್ನು ಮಾತ್ರವಲ್ಲದೆ, ವಾಯುಮಂಡಲದಾಚೆ ನಿರ್ವಾತ ಪ್ರದೇಶದಲ್ಲಿಯೂ ಹೋಗಬೇಕಾಗುವುದರಿಂದ ಉರುವಲು ಸುಡಲು ಅಗತ್ಯವಾದ ಪ್ರಾಣವಾಯುವನ್ನೂ ಶತ್ರು ಸ್ಥಾನವನ್ನು ಧ್ವಂಸ ಮಾಡಲು ಬೇಕಾದ ಜಲಜನಕ ಬಾಂಬನ್ನೂ ಒಯ್ಯಬೇಕಾಗುವುದು. ಹೀಗಾಗಿ ಈ ರಕ್ಕಸನ ತೂಕ ೧೦೦ ಟನ್ನಿಗಿಂತ ಕಡಿಮೆಯಿರಲಾರದು.



ಭೂಮಿಯಿಂದ ಹಾರಿಸಲ್ಪಟ್ಟೊಡನೆ ಅದು ನೆಟ್ಟಗೆ ಮೇಲೆ ೬೦೦ - ೮೦೦ ಮೈಲು ಹಾರುವುದು. ಅನಂತರ ಅದರ ಮೂತಿ ತಾನಾಗಿಯೇ ಭೂಮಿಯ ಕಡೆ ಬಾಗಿಸಲ್ಪಡುವುದು. ಆ ದಿಶೆಯಲ್ಲಿ ಅದು ತಾಸಿಗೆ ೧೫,೦೦೦ ಮೈಲು ವೇಗದಿಂದ ತನ್ನ ಗುರಿಯತ್ತ ಸಾಗುವುದು.

ಇಷ್ಟು ದೊಡ್ಡ ಬಾಣವನ್ನು ೫,೦೦೦ ಮೈಲು ದೂರ ಒಯ್ಯಬಲ್ಲಂಥ ಇಂಜನ್ನು ಇನ್ನೂ ಹುಟ್ಟಿಲ್ಲ. ಆದರೆ ಈಗಿರುವ ರಾಕೆಟ್ (ಆಕಾಶ ಬಾಣ) ಇಂಜನ್ನುಗಳಲ್ಲಿ ಹಲವನ್ನು ಅದರೊಳಗಿರಿಸಿ ಅವುಗಳ ಸಾಮೂಹಿಕ ಶಕ್ತಿಯಿಂದ ಬಾಣದ ಅದ್ಭುತ ಪ್ರಯಾಣಕ್ಕೆ ಬೇಕಾದ ಒತ್ತಡವನ್ನು ಕೊಡಬಹುದಾಗಿದೆ. ಬರುವ ವರ್ಷ (೧೯೫೭) ಪ್ರಮುಖ ರಾಷ್ಟ್ರಗಳು ಹಾರಿಸಲಿರುವ "ಕೃತಕ ಚಂದ್ರ"ದ ಯೋಜನೆಯು ಈ "ಬ್ರಹ್ಮಾಸ್ತ್ರ"ಕ್ಕೆ ರಂಗತಾಲೀಮಿನಂತಿದೆ.

ಐ ಸಿ ಬಿ ಎಂ ಆಕಾಶಬಾಣವನ್ನು ಹಾರಿಸುವ ವಿಧಾನ ಸಂಕ್ಷಿಪ್ತವಾಗಿ ಹೀಗಿದೆಯೆಂದು ಊಹಿಸಲಾಗಿದೆ: ಅದರಲ್ಲಿ ಮೂರು ವಿಭಾಗಗಳಿದ್ದು ಪ್ರತಿಯೊಂದಕ್ಕೂ ಅದರದೇ ಇಂಜನ್ ಹಾಗು ಉರುವಲು ಪೂರೈಕೆ ಇಡಲಾಗುವದು. ಮೊದಲನೇ ನೆಗೆತಕ್ಕೆ ಇಡೀ ಆಕಾಶ ಬಾಣವು ವಾಯುಮಂಡಲದ ಬಹು ಭಾಗವನ್ನು ದಾಟಿ ಹೋಗುವುದು. ಅಷ್ಟರಲ್ಲಿ ಮೊದಲನೇ ಭಾಗದ ಉರುವಲು ತೀರಿಹೋಗುವುದು. ಆಗ ಅದರೊಳಗಿರುವ ಯಾಂತ್ರಿಕ ಸಲಕರಣೆಯು ಬಾಣದ ನಿರುಪಯುಕ್ತವಾದ ಮೊದಲನೇ ಭಾಗವನ್ನು ಕಳಚಿ ಕೆಳಗೆ ಉದುರಿಸಿ ಬಿಡುವುದು. ಅನಂತರ ಎರಡನೇ ಭಾಗವು ಕೆಲಸ ಆರಂಭಿಸಿ ಬಾಣವನ್ನು ಭೂಮಿಯಿಂದ ೨೦೦-೩೦೦ ಮೈಲೆತ್ತರದವರೆಗೆ ಮೇಲೆತ್ತುವುದು. ಅಷ್ಟರಲ್ಲಿ ಎರಡನೇ ಭಾಗವೂ ತನ್ನ ಕೆಲಸ ತೀರಿಸಿರುವುದರಿಂದ ಅದೂ ಕೆಳಗುದುರುವುದು. ಆ ಕ್ಷಣದಲ್ಲಿ ಮೂರನೇ ಭಾಗದಲ್ಲಿರುವ ಯಂತ್ರವು ಬಾಣವನ್ನು ಊರ್ಧ್ವಮುಖದಿಂದ ಅಡ್ಡಲಾಗಿ ತಿರುಗಿಸಿ ಸೆಕಂದಿಗೆ ೩೦,೦೦೦ ಪೂಟಿನ ವೇಗದ "ಒದಿಕೆ"ಯನ್ನು ಜಲಜನಕ ಬಾಂಬುಳ್ಳ ಮೂರನೇ ಭಾಗಕ್ಕೆ ಕೊಡುವುದು.

ಆ ಮೇಲೆ ಬಾಣವು ಮತ್ತಾವ ಯಂತ್ರದ ಸಹಾಯವಿಲ್ಲದೆ ನ್ಯೂಟನ್ನನ ತತ್ವದ ಮೇರೆಗೆ ಯಾವುದೊಂದು ಗ್ರಹದಂತೆ ತನ್ನ ಸ್ವಂತ ವೇಗದಿಂದ ಸಾಗುವದು. ತಾಸಿಗೆ ೧೨ ರಿಂದ ೧೬

ಸಾವಿರ ಮೈಲು ವೇಗದಲ್ಲಿ ಸಾಗುವ ಈ ಬಾಣವು ತನ್ನ ಅರ್ಧ ದಾರಿಯನ್ನು ಸಾಗುವಷ್ಟರಲ್ಲಿ ಅದು ಭೂಮಿಯಿಂದ ೬೦೦-೮೦೦ ಮೈಲು ಎತ್ತರವನ್ನು ಮುಟ್ಟಿರುವುದು. ಅನಂತರ ಅದು ಭೂಮಿಯ ಕಡೆಗೆ ಮುಖತಿರುಗಿಸಿ ತನ್ನ ಮುಂದಿನ ೨,೫೦೦ ಮೈಲು ಯಾತ್ರೆ ಸಾಗಿಸಿ ಗುರಿಯನ್ನು ಮುಟ್ಟು ವುದು. (ಚಿತ್ರ ನೋಡಿರಿ, ಪು. ೭೪).

ಇದು ಮಾತಿನಲ್ಲಿ ಹೇಳಿದಷ್ಟು ವಾಸ್ತವಿಕದಲ್ಲಿ ಸುಲಭವಾಗಿಲ್ಲ. ಪ್ರಚಂಡ ಸಮಸ್ಯೆಗಳನ್ನು ಮೊದಲು ಬಿಡಿಸಬೇಕಾಗುವುದು. ಅತಿ ಕಠಿಣ ಸಮಸ್ಯೆಗಳು ಎರಡು: ಒಂದು, ಉಷ್ಣತೆಯದು, ಎರಡು, ಬಾಣವನ್ನು ಗುರಿ ಮುಟ್ಟುವಂತೆ ನಿಯಂತ್ರಿಸುವುದು.

ಉಷ್ಣತೆಯ ಸಮಸ್ಯೆ—ಆಕಾಶ ಬಾಣವು ಭೂಮಿಯ ವಾಯುಮಂಡಲವನ್ನು ಎರಡು ಸಲ ದಾಟುವಾಗ ಉದ್ಭವಿಸುವದು—ಒಮ್ಮೆ ಏರು ವಾಗ, ಇನ್ನೊಮ್ಮೆ ಇಳಿಯುವಾಗ. ಏರುವಾಗ ಬಾಣವು ಪರಮಾವಧಿ ವೇಗವನ್ನು ಮುಟ್ಟದಿರುವು ದರಿಂದ ಅದು ಅಷ್ಟು ದೊಡ್ಡ ಸಮಸ್ಯೆಯಲ್ಲ. ಆದರೆ ಇಳಿಯುವಾಗ ಅದು ತಾಸಿಗೆ ೧೨-೧೬ ಸಾವಿರ ಮೈಲಿನ ಭೀಷಣ ವೇಗದಲ್ಲಿರುವುದ ರಿಂದ ತನ್ನ ಪ್ರಯಾಣದ ಕೊನೆಗೆ ಭೂಮಿಯ ವಾತಾವರಣದಲ್ಲಿ ಪ್ರವೇಶಿಸಿದೊಡನೆ ಘರ್ಷಣೆ ಯಿಂದ ಅದು ೫,೦೦೦ ಡಿಗ್ರಿ ಫೆರನ್ಹೈಟ ವರೆಗೂ ಕಾವೇರಬಹುದು. ಆಗ ಇಡೀ ಬಾಣವೇ ಉಲ್ಕೆ ಗಳಂತೆ ಕರಗಿ ಸುಟ್ಟುಹೋಗಬಹುದು. ಇಷ್ಟು ಕಾವನ್ನು ತಡೆದುಕೊಳ್ಳಬಲ್ಲ ಯಾವ ಕವಚವೂ ಈ ವರೆಗೆ ಸಿದ್ಧವಾಗಿಲ್ಲ. ಆದರೆ ಹಲವು ಉಪಾ ಯಗಳಿಂದ ಅದನ್ನು ಸಾಧಿಸಬಹುದೆಂದು ವಿಜ್ಞಾನಿಗಳು ನಂಬಿದ್ದಾರೆ.;

ಎರಡನೆಯದು ನಿಯಂತ್ರಣದ್ದು. ಬಾಣವು ನಿಶ್ಚಿತ ಗುರಿ ಮುಟ್ಟಬೇಕಾದರೆ ಹೇಗೆ ಸಾಗ ಬೇಕೆಂಬುದನ್ನು ಮೊದಲೇ ಗಣಿತ ಯಂತ್ರಗಳ ಮೂಲಕ ಗುಣಿಸಿಟ್ಟುಕೊಳ್ಳಬೇಕಾಗುವುದು. ೨೦೦-೩೦೦ ಮೈಲಿನ ವರೆಗೆ ಅದರ ಓಟವು ಇಂಜ ನ್ನಿನ ಶಕ್ತಿಯಿಂದ ಸಾಗುತ್ತದಾದ್ದರಿಂದ ರೇಡಾರ ಉಪಕರಣಗಳ ಸಹಾಯದಿಂದ ಅದರ ಗತಿ ಯನ್ನು ಸರಿಯಾದ ಮಾರ್ಗದಲ್ಲಿ ಭೂಮಿಯಿಂದ ನಿಯಮಿಸಲು ಸಾಧ್ಯವಿದೆ. ಆದರೆ ಮುಂದಿನ ೪,೭೦೦ ಮೈಲನ್ನು ಅದು ಸ್ವತಂತ್ರವಾಗಿ ಹಾರು ವುದರಿಂದ ಅದರ ಗತಿಯನ್ನು ನಿಯಂತ್ರಿಸುವುದು ಅತ್ಯಂತ ಕಠಿಣವಾದ ಕೆಲಸ. ಬಾಂಬು ಇರುವ ಅದರ ಚುಂಚುವಿನಲ್ಲೇ ವಿಶಿಷ್ಟ ಉಪಕರಣ ಗಳನ್ನಿಟ್ಟು ಅದು ದಾರಿ ತಪ್ಪಿದಾಗ ತಾನೇ ತಿದ್ದಿ ಕೊಳ್ಳುವಂತೆ ಮಾಡಲು ಶಕ್ಯವಾದೀತು.

ನಿಯಂತ್ರಣದಲ್ಲಿರುವ ಬೇರೆ ತೊಡಕುಗಳೆಂ- ದರೆ ವಾಯುಮಂಡಲದ ಒತ್ತಡದ ಅನಿಶ್ಚಿತತೆ, ಭೂಮಿಯ ಬೇರೆ ಬೇರೆ ಭಾಗಗಳಲ್ಲಿ ಗುರುತ್ವಾ. ಕರ್ಷಣದ ಪ್ರಮಾಣ ಹೆಚ್ಚುಕಡಿಮೆಯಾಗಿರು ವುದು- ಭೂಭಾಗಗಳ ನಕಾಶಗಳಲ್ಲಿರುವ ತಪ್ಪು ತಡೆಗಳು ಇತ್ಯಾದಿ. ಇವುಗಳಲ್ಲಿ ಪ್ರತಿಯೊಂದೂ ಬಾಣವನ್ನು ಗುರಿ ತಪ್ಪಿಸಲು ಸಮರ್ಥವಾಗ ಬಲ್ಲದು. ಗುರಿ ಸೇಕಡಾ ೧ ರಷ್ಟು ತಪ್ಪಿದರೂ ಗುರಿಯಿಂದ ೫೦ ಮೈಲು ದೂರದಲ್ಲಿ ಬಾಣವು ಬಡಿದು ವ್ಯರ್ಥವಾಗುವುದು.

ಆದರೆ ಅನುಭವದಿಂದಲೂ ಕೃತಕ ಚಂದ್ರ ನಿಂದ ಪಡೆದ ವಿವರಜ್ಞಾನದಿಂದಲೂ ಈ ತೊಡಕುಗಳನ್ನೆಲ್ಲ ಗೆಲ್ಲಬಹುದೆಂಬ ವಿಶ್ವಾಸ ವಿಜ್ಞಾನಿಗಳಿಗಿದೆ. ಅವರಿಗೆ ಇದರಲ್ಲಿ ಯಶ ಸಿಕ್ಕಿ ದರೆ ಇತಿಹಾಸದ ಗತಿಯೇ ಬದಲಾದೀತು.

ರಶಿಯ, ಅಮೇರಿಕಗಳಲ್ಲಿ ಯಾವುದೊಂದು ಈ ಬ್ರಹ್ಮಾಸ್ತ್ರವನ್ನು ಮೊದಲು ವಶಪಡಿಸಿಕೊಂಡಿ ತೆನ್ನೋಣ. ಆಗ ಅದರ ಬೆದರಿಕೆ ಹಾಕಿ ಅದು ದುರ್ಬಲ ರಾಷ್ಟ್ರಗಳನ್ನು ತನ್ನ ಕೂಟದಲ್ಲಿ ಎಳೆದು ತರಬಲ್ಲದು. ಒಬ್ಬ ಲೇಖಕನು ಹೇಳಿ ದಂತೆ ಜಗತ್ತಿನಲ್ಲಿ ದುರ್ಬಲ ರಾಷ್ಟ್ರಗಳು ಗೆದ್ದೆ ತ್ತಿನ ಬಾಲ ಹಿಡಿಯುವ ಗುಣದವು. ರಶಿಯವು ೫,೦೦೦ ಮೈಲಿನದಲ್ಲ, ೧,೫೦೦ ಮೈಲು ಹಾರುವ ಸ್ವಯಂಚಾಲಿತ ಬ್ರಹ್ಮಾಸ್ತ್ರವನ್ನು ಮೊದಲು ಸಾಧಿಸಿದರೆ ಕೂಡ ಇಡೀ ಯುರೋಪಿನ ರಾಷ್ಟ್ರ ಗಳನ್ನು ಹೆದರಿಸಿ ಅಮೇರಿಕದ ಪಕ್ಷದಿಂದ ಅವುಗಳನ್ನು ಹೊರಗೆಳೆಯಬಲ್ಲದು. ಯಾವ ರಾಷ್ಟ್ರವೂ ಸಂಪೂರ್ಣ ಧ್ವಂಸವಾಗಲು ಅಪೇಕ್ಷಿ ಸುವುದಿಲ್ಲವಷ್ಟೆ?

ಅವನು ಗಂಭೀರನಾಗಲು ಹಂಬಲಿಸುತ್ತಿದ್ದ. ಆದರೆ ಜನರು ಕೇಳಬೇಕಲ್ಲ !

# ಹಾಸ್ಯಗಾರನ ಪಶ್ಚಾತ್ತಾಪ

ಬ್ರೇಜಿಲಿನ ಒಂದು ಕಥೆ

ಫ್ರಾನ್ಸಿಸ್ಕೊ ತೆಕ್ಸೆರಾ ಡಿ ಸೋಜನು ಜೀವನದ ಬಗ್ಗೆ ಗಂಭೀರವಾಗಿ ಪರ್ಯಾಲೋಚಿಸತೊಡಗಿದಾಗ ಅವನಿಗಾಗಲೇ ಮೂವತ್ತೆರಡು ವರ್ಷ ಕಳೆದುಹೋಗಿತ್ತು.

ಅವನು ಹುಟ್ಟಾ ಹಾಸ್ಯಗಾರ. ಅವನು ಆ ವರೆಗೂ ತನ್ನ ಹೊಟ್ಟೆ ಬಟ್ಟೆ ವಸತಿಗಳ ಅಗತ್ಯಗಳನ್ನು ಪೂರೈಸಲು ಈ ವಿಕಟ ಹಾಸ್ಯವೃತ್ತಿಯನ್ನೇ ಬಂಡವಳವಾಗಿ ಮಾಡಿಕೊಂಡಿದ್ದ. ಅವನ ನಾಣ್ಯಗಳೆಂದರೆ ವಿಕಟ ಮುಖಭಂಗಿಗಳು, ನಕಲಿಗಳು, ಇಂಗ್ಲೀಷ ಜನರ ಮೇಲಿನ ಕಥೆಗಳು ಇತ್ಯಾದಿ. ಸಂಕ್ಷೇಪವಾಗಿ, ಮನುಷ್ಯನೆಂಬ ಆ ನಗುವ ಪ್ರಾಣಿಯ ಮುಖದ ಸ್ನಾಯುಗಳನ್ನು ಹಿಗ್ಗಿಸಿ ಅಟ್ಟಹಾಸಗಳನ್ನು ಹೊರಡಿಸಲು ಬೇಕಾದ ವಿದ್ಯೆಗಳೆಲ್ಲ ಅವನಿಗೆ ಕರತಲಾಮಲಕವಾಗಿದ್ದವು.

ಮನುಷ್ಯರನ್ನಾಗಲಿ ಪ್ರಾಣಿಗಳನ್ನಾಗಲಿ ನಕಲು ಮಾಡುವುದರಲ್ಲಿ ಅವನು ನಿಸ್ಸೀಮನಾಗಿದ್ದನು. ಶುನಕ ಜಾತಿಯ ಕಂಠದಿಂದ ಹೊರಡುವ ಸರ್ವಪ್ರಕಾರದ ಸ್ವರಗಳನ್ನೂ ಅವನು ನಾಯಿಗಳು ಕೂಡ ಮೋಸಹೋಗುವಂತೆ ಅನುಕರಿಸಬಲ್ಲವನಾಗಿದ್ದನು. ಹಂದಿಯಂತೆ ಗುರುಟು ಹಾಕಲಿಕ್ಕೆ, ಕೋಳಿಯಂತೆ ಕೂಗಲಿಕ್ಕೆ, ಕಪ್ಪೆಯಂತೆ ಒದರಲಿಕ್ಕೆ, ಮುದುಕಿಯಂತೆ ಜರೆಯಲಿಕ್ಕೆ, ವಿಧಾನಸಭೆಯ ಅಧ್ಯಕ್ಷನಂತೆ '' ಸದ್ದು '' ಎಂದು ಗರ್ಜಿಸಲಿಕ್ಕೆ, ಗಿಳಿಯಂತೆ ಕೆಲೆಯಲಿಕ್ಕೆ ಅವನಂಥ ಪ್ರವೀಣ ಅವನೇ. ಅನುಕೂಲ ಶ್ರೋತೃಗಳಿದ್ದರೆ ಅವನು ಅನುಕರಿಸಲಾರದ ದ್ವಿಪಾದ, ಚತುಷ್ಪಾದ ಪ್ರಾಣಿಜಾತಿ ಯಾವುದೂ ಇರಲಿಲ್ಲ.

ಬೀದಿಯ ಪಕ್ಕದಲ್ಲಿ ಮಾತಾಡುತ್ತ ನಿಂತ ಗೆಳೆಯರ ಗುಂಪೊಂದನ್ನು ಕಂಡನೋ, ಸದ್ದಿಲ್ಲದೆ ಅವರ ಬೆಂಬದಿ ನುಸುಳಿ, ಒಳ್ಳೇ ದಷ್ಟಪುಷ್ಟ ಹಿಂಗಾಲನ್ನು ಆರಿಸಿ ಮುಂಗೈಯಿಂದ-ಠಕ್-ಎಂದು ಒಂದು ಧಡಿಕೆ ಕೊಟ್ಟನೇ. ಧಡಿಕೆ ತಿಂದ ಬಡಪಾಯಿ ಬೆಚ್ಚಿ ಬಿದ್ದು ಜಗಿಯುವಾಗ ಎಂಥ ಮೋಜು! ಅದಾದ ಮೇಲೆ ಉಳಿದೆಲ್ಲರ ಅಟ್ಟಹಾಸದ ಕೋಲಾಹಲದಲ್ಲಿ ಡಿ ಸೋಜನ ಸ್ವಂತ ಛಾಟಿನ ವಿಚಿತ್ರ, ಸ್ವರಮೇಳವಾದ ನಗುವಿನ ತರಂಗಗಳೇಳುತ್ತಿದ್ದವು. ಡಿ ಸೋಜನ ನಗೆಯೆಂದರೆ ಮನುಷ್ಯನ ಸ್ವಾಭಾವಿಕ ನಗೆಯ ನಕಲಿಯಾಗಿತ್ತು. ಅಮಲೇರಿದ ನರಿಯೊಂದನ್ನು ಬಿಟ್ಟರೆ ಆ ಮಾದರಿಯ ಸ್ವರವನ್ನು ಹೊರಡಿಸಬಲ್ಲ ಜಂತು ಅವನೊಬ್ಬನೇ. ಆದರೆ ಅವನು ನಗೆಯನ್ನು ನಿಲ್ಲಿಸುತ್ತಿದ್ದ ಬಗೆ ಇನ್ನಷ್ಟು ನಗು ಬರಿಸುವಂತಿತ್ತು. ಸಾವಕಾಶವಾಗಿ ಅವನ ನಗೆ ಶಾಂತವಾಗುವ ಬದಲು ಒಮ್ಮೆಗೇ ನಿಂತುಬಿಡುತ್ತಿತ್ತು. ಅವನು ನಗೆ ನಿಲ್ಲಿಸಿ ಒಮ್ಮೆಲೇ ಗಂಭೀರ ಮುಖಭಾವ ತಂದುಕೊಂಡನೆಂದರೆ ನಗು ತಡೆದುಕೊಳ್ಳುವ ನಿಗ್ರಹಿ ಯಾರಿದ್ದಾನು!

ಕಡೆಕಡೆಗೆ ಡಿ ಸೋಜನು ಬಾಯಿಬಿಟ್ಟನೆಂದರೆ

ಸಾಕು, ಸುತ್ತಲೂ ಅಟ್ಟಹಾಸವೇಳುವಂತಾಯಿತು. ಅವನು ಇದ್ದರೇ ಸಾಲುತ್ತಿತ್ತು. ಅವನನ್ನು ನೋಡನೋಡುತ್ತಲೇ ಜನರ ಮುಖದಲ್ಲಿ ನಗೆಯ ನಿರಿಗಳು ಅರಳುತ್ತಿದ್ದವು; ಅವನು ಚಲಿಸಿದರೆ ಖೊಳ್ಳೆಂಬ ನಗೆಯ ಸೋಂಕು ಜಾಡ್ಯ ಹಬ್ಬುತ್ತಿತ್ತು. ಅವನು ಬಾಯಿ ತೆರೆದನೆಂದರೆ ಕೆಲವರು ಬಿದ್ದು ನಗುತ್ತಿದ್ದರು, ಮತ್ತೆ ಕೆಲವರು ಟೊಂಕಪಟ್ಟಿ ಸಡಿಲಿಸಿಕೊಳ್ಳುತ್ತಿದ್ದರು. ಅವನು ಮಾತಾಡತೊಡಗಿದರಂತೂ ದೇವರೇ ಗತಿ!

ಮೂವತ್ತು ದಾಟುವ ವರೆಗೂ ಡಿ ಸೋಜನ ಬಾಳು ಈ ಬಗೆಯ ನಗುವಿನ ಸುಳಿಯಲ್ಲಿ ಸುತ್ತುತ್ತಿತ್ತೆನ್ನಬಹುದು. ತಾನು ನಕ್ಕು, ಪರರನ್ನೂ ನಗಿಸಿ, ಯಾತರ ಗೊಡವೆಯನ್ನೂ ಹಚ್ಚಿಕೊಳ್ಳದೆ, ಮುಖಚೇಷ್ಟೆಯ ನಾಣ್ಯ ಕೊಟ್ಟು ಅನ್ನ ಋಣ ತೀರಿಸುವವನಾಗಿ, ನಗೆ ಮಾತುಗಳಿಂದ ಚಿಲ್ಲರೆ ಸಾಲ ತೆರುವವನಾಗಿ ಪರೋಪಜೀವಿ ಬಾಳುವೆಯನ್ನು ಅವನು ಸಾಗಿಸಿದ್ದನು.

ಒಂದು ಸಲ ಅವನ ಹಾಸ್ಯದಿಂದ ಕಚುಕುಳಿಗೊಂಡು ನಗುತ್ತ ಡಿ ಸೋಜನಿಂದ ಹಣ ಬರಬೇಕಾಗಿದ್ದ ಒಬ್ಬ ಸೆಟ್ಟಿ, "ನೀನು ಸಾಲ ತೀರಿಸದಿದ್ದರೂ ನಗಿಸಿಯಾದರೂ ನಗಿಸುತ್ತಿ. ಪರವಾಯಿಲ್ಲ ಬಿಡು. ಆ ಹುಳಿಯಪ್ಪ ಇದ್ದಾನಲ್ಲ, ಹುಬ್ಬು ಗಂಟುಹಾಕಿಕೊಂಡೇ ಸಾಲ ಮುಳುಗಿಸುತ್ತಾನೆ ಪ್ರಾಣಿ" ಎಂದ.

ಈ ವ್ಯಾಜಸ್ತುತಿ ನಮ್ಮ ತೆನ್ನಾಲಿ ರಾಮನಿಗೆ ಮನಸಿಗೆ ತಾಗಿತು. ಆದರೆ ಸೆಟ್ಟಿಗೆ ಅವನು ಹದಿನೈದು ರೂಪಾಯಿ ಕೊಡಬೇಕಾಗಿತ್ತು. ಆದ್ದರಿಂದ ಗುಳಿಗೆಯನ್ನು ನುಂಗದೆ ವಿಧಿಯಿದ್ದಿಲ್ಲ. ಆದರೂ ಅವನ ಸ್ವಾಭಿಮಾನದ ಕುಶನ್ನಿನಲ್ಲಿ ಈ ಹಂಗುನುಡಿಯ ಸೂಜಿ ಆಳವಾಗಿ ನಟ್ಟು ನಿಂತುಬಿಟ್ಟಿತು. ಇದಾದ ಮೇಲೆ ಇಂಥ ಸೂಜಿಗಳು; ಕೆಲವು ಹಗುರಾಗಿ, ಕೆಲವು ಆಳವಾಗಿ, ಮೇಲಿಂದ ಮೇಲೆ ಚುಚ್ಚುತ್ತಿರುವಂತೆ ಅವನಿಗೆ ಭಾಸವಾಗತೊಡಗಿತು.

ಕೊನೆಗೆ ಅವನಿಗೆ ಸಹಿಸಲಸದಳವಾಯಿತು. ತಾನು ನಡೆಸುತ್ತಿರುವ ಬಾಳಿನ ಮೇಲೆ ಅವನಿಗೆ ಜುಗುಪ್ಸೆ ಬಂತು. ಹುಡುಗಾಟಿಕೆಯ ಚೊಚ್ಚಲ ಮಗನಾದ ಅವನಿಗೆ ತನ್ನನ್ನು ಜನರು ಮರ್ಯಾದೆಯಿಂದ ಕಂಡರೆ ಎಷ್ಟು ಹಿತ; ತಾನು ಬಾಯಿ ಬಿಚ್ಚಿದೊಡನೆ ಜನರು ಮುಖದ ಸ್ನಾಯುಗಳನ್ನು ವಿಕೃತಗೊಳಿಸದೆ ಕೇಳುವಂತಾದರೆ, ತಾನು ಅಂಗ ವಿನ್ಯಾಸ ಮಾಡಿದೊಡನೆ ಮಿತ್ರರು ಧೃತಿಗೆಡದಂತಾದರೆ, ಬೀದಿಯಲ್ಲಿ ತನ್ನ ತಲೆ ಕಾಣಿಸಿದೊಡನೆ ಜನರು ಹೊಟ್ಟೆಹಿಡಿದುಕೊಂಡು "ಅಕೋ ಡಿ ಸೋಜ ಬಂದ"ಎಂದು ನಗಲು ಸನ್ನಾಹ ಮಾಡದಿದ್ದರೆ, ತನಗೆಷ್ಟು ಹಾಯೆನಿಸುತ್ತಿತ್ತು! ಎಂದು ಅನಿಸತೊಡಗಿತು.

ಈ ಅಭಿಲಾಷೆಯ ಫಲವಾಗಿ ಡಿ ಸೋಜ ಗಂಭೀರನಾಗಲು ಯತ್ನಿಸಿದ.

ಆದರೆ ಅದರಿಂದ ಅನಾಹುತವೇ ಆಯಿತು. ಗಂಭೀರವಾಗಿ ಮಾತಾಡುವ ಡಿ ಸೋಜನು ಈಗ ಇಂಗ್ಲೀಷ ಪದ್ಧತಿಯ ಹಾಸ್ಯಕ್ಕೆ ಕೈಹಾಕಿದ್ದಾನೆಂದು ಜನರು ತಿಳಿದುಕೊಂಡರು.

೨

ಡಿ ಸೋಜನ ಹಾಸ್ಯಕೌಶಲದಲ್ಲಿ ಹೊಸ ಅಧ್ಯಾಯವೆಂದು ಜನರು ಬಗೆದ ಪರಿಯು ಅವರ ಕಲ್ಪನೆಯಲ್ಲಿ ಅದ್ಭುತ ಯಶಸ್ಸೇ ಆಗಿತ್ತು. ಆದರೆ ಅದರಿಂದ ನಮ್ಮ ಪಶ್ಚಾತ್ತಪ್ತ ವಿದೂಷಕನ ಜೀವ ಮತ್ತಷ್ಟು ವಿಷಣ್ಣವಾಯಿತು. ಹಾಗಾದರೆ ತಾನು ಈ ವರೆಗೆ ಅನುಸರಿಸಿ ಈಗ ಜುಗುಪ್ಸೆಗೊಂಡ ಮಾರ್ಗವನ್ನು ಬಿಟ್ಟು ಹೊಸ ದಿಕ್ಕು ಹಿಡಿಯುವ ಉಪಾಯವೇ ಇಲ್ಲವೆ? ನಗು, ಕುಚೇಷ್ಟೆ; ಕುಚೇಷ್ಟೆ, ನಗು ಇದೇ ತನ್ನ ಹಣೆಯಲ್ಲಿ ಬರೆದ ಚಿರ ಶಾಸನವಾಯಿತೆ?

ಪ್ರಾಯ ಹೆಚ್ಚಾದಂತೆ ಡಿ ಸೋಜನ ಬುದ್ಧಿ ಬಲಿತಿತು, ಅವನ ಸ್ವಾಭಿಮಾನ ಸ್ಥಿರವಾಯಿತು, ಹಂಗಿನ ಅನ್ನ ಕಹಿಯೆನಿಸತೊಡಗಿತು. ಅವನು ಜನರಿಂದ ದೂರವಾಗಿರತೊಡಗಿದನು. ಯಾವುದಾದರೂ ಪ್ರಾಮಾಣಿಕ ಜೀವನೋಪಾಯ ಮಾಡಬೇಕಾದರೆ ತನ್ನ ಚರ್ಯೆಯಲ್ಲಿ ಏನೇನು ಬದಲಾ

ಯಿತ್ತ, ತಿಳಿಸಿ ಹೇಳಿದ, ಅಂಗಲಾಚಿದ. ಆದರೆ ಅವನ ಪ್ರತಿಯೊಂದು ಕೃತಿಯೂ ಅಭೂತ ಪೂರ್ವವಾದ ಹೊಸ ಕುಚೇಷ್ಟೆಯೆಂದೇ ಸರ್ವಾನುಮತದಿಂದ ತೀರ್ಮಾನವಾಯಿತು.

ವ್ಯಾಪಾರೋದ್ಯಮದಲ್ಲಿ ನಿರಾಶನಾಗಿ ಅವನು ಒಕ್ಕಲತನದ ಕಡೆ ಹೊರಳಿದನು. ಅಂದೇ ಕೆಲಸದವನನ್ನು ತೆಗೆದುಹಾಕಿದ್ದ ಒಬ್ಬ ಒಕ್ಕಲಿಗನ ಕಡೆ ಹೋಗಿ ತನ್ನ ಅಹವಾಲನ್ನು ಬಿನ್ನವಿಸಿಕೊಂಡನು.

ಅವನ ಹೇಳಿಕೆಯನ್ನು ಎಚ್ಚರದಿಂದ ಆಲಿಸಿದ ನಂತರ ಆ ನಿವೃತ್ತ ಸೈನಿಕ ಒಕ್ಕಲಿಗ ಉದ್ದಾಮವಾದ ಅಟ್ಟಹಾಸ ಮಾಡಿ, "ಡಿ ಸೋಜನಿಗೆ ಒಕ್ಕಲತನದ ಆಳಿನ ಕೆಲಸ, ಹಹ್ಹಹ್ಹ!" ಎಂದ.

"ಆದರೆ—"

"ಮೊದಲು ಸ್ವಲ್ಪ ನಗಲಿಕ್ಕೆ ಬಿಡು ಮಹಾರಾಯಾ! ಈ ಹಳ್ಳಿಗಾಡಿನಲ್ಲಿ ಇಂಥ ಮೋಜು ನನಗೆ ಎಲ್ಲಿ ಸಿಗುತ್ತದೆ? ಹಹ್ಹಹ್ಹ! ಎಂಥಾ ಚೇಷ್ಟೆ! ನಗಿಸುವುದರಲ್ಲಿ ನಿನ್ನನ್ನು ಮೀರಿಸುವವರೇ ಇಲ್ಲ ನೋಡು!"

ಹೊಟ್ಟೆ ಬಿರಿಯುವಂತೆ ನಗುತ್ತ ಆ ಒಕ್ಕಲಿಗ ಮನೆಯಾಕೆಯನ್ನು ಕೂಗಿ "ನೋಡೇ ಮೇರಿ! ಇಲ್ಲಿ ಹೊರಗೆ ಬಾ ಒಂದು ಸಲ. ಡಿ ಸೋಜನ ಹೊಸಾ ಕುಚೇಷ್ಟೆಯನ್ನೊಮ್ಮೆ ಕೇಳು. ಅದ್ಭುತವಾಗಿದೆ!" ಎಂದ.

ಆ ದಿನ ನಮ್ಮ ದುರ್ದೈವಿ ಹಾಸ್ಯಗಾರ ಗಳಗಳ ಅತ್ತುಬಿಟ್ಟ. ವರ್ಷಗಟ್ಟಳೆ ಕಟ್ಟಿದ್ದನ್ನು ಕ್ಷಣದಲ್ಲಿ ಅಳಿಸಿಹಾಕುವುದು ಶಕ್ಯವಿಲ್ಲೆಂದು ಅವನಿಗೆ ಅಂದು ಖಂಡಿತವಾಯಿತು.

೩

ಆದರೂ ಅವನಿಗೆ ತನ್ನ ಜೀವನ ಪದ್ಧತಿಯನ್ನು ಬದಲಿಸಲೇಬೇಕೆಂಬ ಹಂಬಲ ಹೋಗಲಿಲ್ಲ. ಈಗ ಅವನು ರಾಜಕೀಯ ಉದ್ಯೋಗದ ಕಡೆ ದೃಷ್ಟಿ ಹೊರಳಿಸಿದ. ಸರಕಾರ ಉದಾರ ಯಜಮಾನ. ಅದು ವ್ಯಕ್ತಿಯಲ್ಲ. ಅದಕ್ಕೂ ನಗೆಗೂ ಏನೂ ಸಂಬಂಧವಿಲ್ಲ. ತನ್ನ ವಿವಿಧ ಅಂಗಗಳ ಸರಿಯಾದ ಪರಿಚಯ ಕೂಡ ಅದಕ್ಕಿಲ್ಲ. ಇಂಥ ಯಜಮಾನನು ಮಾತ್ರ ತನ್ನನ್ನು ಗಂಭೀರವಾಗಿ ನಡೆಸಿಕೊಳ್ಳಬಲ್ಲನು. ಹೌದು, ತನ್ನ ವಿಮೋಚನೆಗೆ ಇದೊಂದೇ ಹಾದಿ.

ಯಾವ ಖಾತೆಯಲ್ಲಿ ನೌಕರಿ ಮಾಡುವುದು ತನಗೆ ಶ್ರೇಯಸ್ಕರವಾದೀತೆಂದು ದೀರ್ಘವಿಚಾರ ಮಾಡಿದ ನಂತರ ಡಿ ಸೋಜನು ಫೆಡರಲ್ ಕಂದಾಯ ಇಲಾಖೆಯ ಕಚೇರಿಯೇ ತನಗೆ ಯೋಗ್ಯವಾದದ್ದೆಂದು ನಿರ್ಧರಿಸಿಕೊಂಡನು. ಆ ಕಚೇರಿಯ ಮುಖ್ಯಾಧಿಕಾರಿಯಾದ ಮೇಜರ ಬೆಂಟೀಸನು ಇನ್ನು ಬಹುಕಾಲ ಬದುಕುವಂತಿರಲಿಲ್ಲ. ಅವನಿಗೆ ವಯಸ್ಸೂ ಮೀರಿತ್ತು, ಹೃದಯ ರೋಗವೂ ಇತ್ತು. ಅವನ ರಕ್ತನಾಳವೊಂದರಲ್ಲಿ ಎದ್ದಿದ್ದ ಗಂಟು ಯಾವ ಗಳಿಗೆಯಲ್ಲಿಯೂ ಸಿಡಿದು ಅವನನ್ನು ಕೊನೆಗಾಣಿಸಬಹುದೆಂದು ವದಂತಿ ಇತ್ತು.

ರಾಜಧಾನಿ ರಿಯೋದಲ್ಲಿ ರಾಜಕೀಯದಲ್ಲಿ ವರ್ಚಸ್ವಿಯಾಗಿದ್ದ ತನ್ನ ಸಂಬಂಧಿಕನೊಬ್ಬನನ್ನು ಡಿ ಸೋಜ ಹಿಡಿದನು. ಅವನನ್ನು ತರತರದ ಸೇವೆಯಿಂದ ಒಲಿಸಿಕೊಂಡನು. ಕೊನೆಗೆ ಆ ಶ್ರೀಮಂತನು ಇವನಿಗೆ ಮಾತು ಕೊಟ್ಟನು.

"ಚಿಂತಿಸಬೇಡ, ಈಗಿನ ಸರಕಾರ ನಾನು ನಿರೀಕ್ಷಿಸಿದಂತೆ ಉರುಳಿದರೆ ಮತ್ತು ನಿನ್ನ ಕರಾಧಿಕಾರಿಯ ರಕ್ತನಾಳ ಯೋಗ್ಯಕಾಲದಲ್ಲಿ ಸ್ಫೋಟ ಹೊಂದಿದರೆ ಆ ಮೇಲೆ ನಿನ್ನನ್ನು ಕಂಡು ಯಾರೂ ನಗಲಾರರು. ಇನ್ನು ಹೊರಡು. ಆ ಮನುಷ್ಯ ಸತ್ತ ಕ್ಷಣ, ಅವನ ಹೆಣ ಎತ್ತುವ ಮೊದಲೇ ನನಗೆ ತಿಳಿಸಲು ಮಾತ್ರ ಮರೆಯಬೇಡ." ಡಿ ಸೋಜನು ಆನಂದತುಂದಿಲನಾಗಿ ಸ್ವಗ್ರಾಮಕ್ಕೆ ಮರಳಿದನು. ಅಂದಿನಿಂದ ಅವನು ಒಂದು ಕಣ್ಣನ್ನು ರಾಜಕೀಯ ಬಿಕ್ಕಟ್ಟಿನ ಮೇಲೂ ಇನ್ನೊಂದನ್ನು ಕರಾಧಿಕಾರಿಯ ರಕ್ತನಾಳದ ಮೇಲೂ ಇಟ್ಟು ತನ್ನ ಸಂಧಿಗಾಗಿ ಕಾಯುತ್ತ ಕುಳಿತನು.

ರಾಜಕೀಯ ಬಿಕ್ಕಟ್ಟು ಬಂದೇ ಬಂತು. ಮಂತ್ರಿಗಳು ಪದಚ್ಯುತರಾದರು, ಹೊಸಬರು

ಅವರ ಸ್ಥಾನಕ್ಕೆ ಬಂದರು. ಅಂಥವರಲ್ಲಿ ಡಿ ಸೋಜನ ಶ್ರೀಮಂತ ಸಂಬಂಧಿಕನ ಸಹಕಾರಿಯೂ ಒಬ್ಬನಾಗಿದ್ದನು. ಅಲ್ಲಿಗೆ ಅರ್ಧ ಕೆಲಸ ಕೈಗೂಡಿದಂತಾಯಿತು. ಇನ್ನರ್ಧ ಮಾತ್ರವೇ ಉಳಿದಿತ್ತು.

ದುರ್ದೈವದಿಂದ, ಮೇಜರ ಬೆಂಟೀಸನ ಆರೋಗ್ಯ ಚನ್ನಾಗಿಯೇ ಇತ್ತು. ಅಲೋಪಥಿಯಿಂದ ರೋಗಿಗಳನ್ನು ಕೊಲ್ಲುವ ಡಾಕ್ಟರರು ಅವನ ರಕ್ತನಾಳದ ಗಂಟು ಗಂಡಾಂತರದ್ದೆಂದೂ ಅತ್ಯಲ್ಪ ಶ್ರಮದಿಂದಲೂ ಅದು ಸ್ಫೋಟವಾಗಬಹುದೆಂದೂ ಹೇಳಿದ್ದರು. ಹೀಗೆ ಎಚ್ಚರಿಸಲ್ಪಟ್ಟ ಮೇಜರನು ಉತ್ತಮ ಸುಖದ ಪರಲೋಕವನ್ನು ಸೇರಲು ಯಾವ ಆತುರವನ್ನೂ ತೋರಿಸಲಿಲ್ಲ. ಅವನು ಯಮರಾಯನನ್ನು ಮೋಸಗೊಳಿಸಲು ನಿರ್ಧರಿಸಿ ವ್ಯವಸ್ಥಿತ ಜೀವನ ನಡೆಸತೊಡಗಿದ್ದನು. ತೀವ್ರ ಪರಿಶ್ರಮದಿಂದ ಸಾವು ಬರುವಂತಿದ್ದರೆ ಅವನು ಅಂಥ ಶ್ರಮವನ್ನು ಮಾಡಲೇ ಇಲ್ಲ.

ಆಗಲೇ ತನ್ನ ಮನಸ್ಸಿನಲ್ಲಿ ಕರಾಧಿಕಾರಿಯಾಗಿಬಿಟ್ಟಿದ್ದ ಡಿ ಸೋಜನು ತನ್ನ ಯೋಜನೆಗೆ ಹೀಗೆ ಅಡ್ಡಗಾಲು ಬೀಳುತ್ತಿರುವುದನ್ನು ಕಂಡು ಸಹಜವಾಗಿ ಸೈರಣೆಗೆಟ್ಟನು. ಈ ಕಂಟಕವನ್ನು ಹೇಗೆ ದೂರೀಕರಿಸಲಿ? ಡಿ ಸೋಜ ವೈದ್ಯ ಗ್ರಂಥಗಳನ್ನು ಹುಡುಕಿ ತೆಗೆದು ಅವುಗಳಲ್ಲಿ ಗಂಟುಗಳಿಗೆ ಸಂಬಂಧಪಟ್ಟ ವಿಷಯಗಳನ್ನೆಲ್ಲ ಅಭ್ಯಸಿಸಿದನು—ಏಕೆ, ಬಾಯಿ ಪಾಠ ಮಾಡಿಕೊಂಡನೆಂದೇ ಹೇಳಬೇಕು. ಗಂಟುಗಳ ಬಗ್ಗೆ ಯಾರುಯಾರು ಏನೇನು ಹೇಳಿದ್ದಾರೆ, ಬರೆದಿದ್ದಾರೆಂಬುದೆಲ್ಲ ಅವನಿಗೆ ಜಿತಪಾಠವಾಗಿ ಹೋಯಿತು.

ಹೀಗೆ ವಿಜ್ಞಾನದ ಆವಿಷವನ್ನು ಸವಿದಂತೆಲ್ಲ ಡಿ ಸೋಜನಿಗೆ ತನ್ನ ಹಾದಿಯ ಮುಳ್ಳಿನಂತಿದ್ದ ಆ ಮುದುಕನ ಮರಣವನ್ನು ಹತ್ತಿರ ತರಲು ತನಗೆ ಶಕ್ಯವಿದೆಯೆಂದು ಅನಿಸಿತು. ಪರಿಶ್ರಮದಿಂದ ಅವನು ಸಾಯುಬಹುದೆ? ಹಾಗಾದರೆ ಅವನಿಂದ ಆ ಶ್ರಮವನ್ನು ಮಾಡಿಸಲು ತಾನು ಪ್ರಯತ್ನಿಸಿಯೇ ಬಿಡುವೆನೆಂದು ಡಿ ಸೋಜ ಗಟ್ಟಿ ಮಾಡಿಕೊಂಡ.

"ಒಮ್ಮೆಲೇ ಅಟ್ಟಹಾಸ ಮಾಡುವುದೂ ಶ್ರಮ ತಾನೆ? ಅದರಿಂದ ಜೀವ ಹಾರಿಹೋಗಬಲ್ಲದು. ಅಂದ ಮೇಲೆ ತನ್ನಂಥ ನಗೆತಜ್ಞನಿಗೆ ಇದು ಸಾಧ್ಯವಾಗಲೇ ಬೇಕು....." ಡಿ ಸೋಜನು ಸೈತಾನನಂತೆ ಯೋಚಿಸಿದನು.

ಡಿ ಸೋಜನು ಈ ವಿಚಾರವನ್ನು ಏಕಾಂತದಲ್ಲಿ ಬಹಳ ದಿನ ಮೆಲುಕು ಹಾಕಿದನು. "ಇದು ಅಪರಾಧವೆ? ಅಲ್ಲ! ನಗೆ ಬರಿಸುವುದು ಅಪರಾಧವೆಂದು ಯಾವ ಶಾಸ್ತ್ರ ಹೇಳುತ್ತದೆ? ಅದರಿಂದ ಯಾರಾದರೂ ಸತ್ತರೆ ತಪ್ಪು ಅವರ ರಕ್ತನಾಳದ್ದೇ ಸೈ."

ಅವನ ಹೃದಯದ ದ್ವಂದ್ವದಲ್ಲಿ ಕೊನೆಗೂ ಸೈತಾನನೇ ಗೆದ್ದನು. ಅವನು ಮೊದಲಿಗಿಂತ ಕೃಶನಾಗಿ ಪುನಃ ಸಮಾಜದಲ್ಲಿ ಬೆರೆಯಲಾರಂಭಿಸಿದನು. ಆದರೆ ಅವನ ಕಣ್ಣಲ್ಲಿ ಹೊಸ ನಿರ್ಧಾರದ ಗೆಲವಿನ ಕಳೆ ಮಿಂಚುತ್ತಿತ್ತು. ಸೂಕ್ಷ್ಮವಾಗಿ ನೋಡುವವರಿಗೆ ಅವನ ಚರ್ಯೆಯಲ್ಲಿ ಏನೋ ಒಂದು ಅಳುಕು ಕಾಣಿಸಬಹುದಾಗಿತ್ತು. ಆದರೆ ಡಿ ಸೋಜನ ಸಮಾಜದಲ್ಲಿ ಸೂಕ್ಷ್ಮ ದೃಷ್ಟಿ ಅಷ್ಟು ಸಮೃದ್ಧ ಗುಣವಾಗಿರಲಿಲ್ಲ.

ಭಾವಿ ಕರಾಧಿಕಾರಿಯು ಜಾಗರೂಕತೆಯಿಂದ ತನ್ನ ಹಂಚಿಕೆಯನ್ನು ಪ್ರಾರಂಭಿಸಿದನು. ಅವನು ಒಂದಲ್ಲ ಒಂದು ನೆವದಿಂದ ಮೇಜರ ಬೆಂಟೀಸನ ಕಚೇರಿಗೆ ಮೇಲಿಂದ ಮೇಲೆ ಹೋಗಿಬರತೊಡಗಿದನು. ಮುದುಕನ ಉಗ್ರ ಗಾಂಭೀರ್ಯವನ್ನು ಮೃದುಗೊಳಿಸಲು ಒಳ್ಳೇ ಕೌಶಲದಿಂದ ಅವನೊಡನೆ ಹರಟುವ ಸಂಧಿಗಳನ್ನು ಅವನು ನಿರ್ಮಿಸಿಕೊಳ್ಳುತ್ತಿದ್ದನು.

ಡಿ ಸೋಜನ ಈ ಯಾತಾಯಾತವು ಮುದುಕನನ್ನು ಅಚ್ಚರಿಗೊಳಿಸದಿರಲಿಲ್ಲ. ಅವನು ಅದನ್ನು ಆಡಿಯೂ ತೋರಿಸಿದನು. ಆದರೆ ಡಿ ಸೋಜನು ಪ್ರಶ್ನೆಗಳನ್ನೆಲ್ಲ ಪರಿಷ್ಕಾರವಾದ ನೆವಗಳಿಂದ ಸಮಾಧಾನಪಡಿಸಿ ಹಂಚಿಕೆಯನ್ನು ಮುಂದೊತ್ತಿಯೇ ಒತ್ತಿದನು.

ಎರಡು ತಿಂಗಳೊಳಗಾಗಿ ಮೇಜರ ಬೆಂಟೀಸನಿಗೆ ಡಿ ಸೋಜನ ಆಗಮನಗಳು ಚಿರಪರಿಚಿತವಾಗಿಬಿಟ್ಟವು. ಇವನೊಬ್ಬ ನಿರುಪದ್ರವಿ ಜೀವಿಯೆಂದು ಬಗೆದು ಮುದುಕನು ಅವನಿಗೆ "ಮೋಜುಗಾರ ಅಳಿಲು" ಎಂದು ಅಡ್ಡ ಹೆಸರಿಟ್ಟಿದ್ದನು. ಅನಂತರ ಒಂದು ದಿನ ಕೆಲಸ ಬಹಳ ರಾಶಿಗೂಡಿದ್ದಾಗ ಯಾವಾಗಲೂ ಉಪಕಾರ ಮಾಡಲು ಸಿದ್ಧನಿದ್ದ ಡಿ ಸೋಜನನ್ನು ಆ ಅಧಿಕಾರಿಯು ಸಹಾಯಕ್ಕೆ ತೆಗೆದುಕೊಂಡನು. ಅಲ್ಲಿಂದಾಚೆಗೆ ಅವನಿಗೆ ಈ ಹಾಸ್ಯಗಾರ ಒಂದು ಬಗೆಯ ಅನಧಿಕೃತ ಸಹಾಯಕನೇ ಆಗಿಬಿಟ್ಟನು. ಕೆಲ ಕೆಲಸಗಳ ಮಟ್ಟಿಗೆ ಅವನನ್ನು ಮೀರಿಸುವವರಾರೂ ಇದ್ದಿಲ್ಲ. ಎಂಥ ಉದ್ಯಮಶೀಲತೆ! ಎಂಥ ಸೂಕ್ಷ್ಮಜ್ಞತೆ! ಎಂಥ ಚಾತುರ್ಯ! ಎಂದು ಮುದುಕನ ಬಾಯಿಂದ ಹೊಗಳಿಕೆ ಬರುವಂತಾಯಿತು. ತನ್ನ ನೌಕರರನ್ನು ಜರೆಯುವಾಗ ಡಿ ಸೋಜನ ಬುದ್ಧಿವಂತಿಕೆಯನ್ನು ಅವನು ಮೇಲ್ಪಂತಿಯಾಗಿ ತೋರಿಸತೊಡಗಿದನು ಕೂಡ.

ಒಂದು ದಿನ ಮುದುಕನು ಡಿ ಸೋಜನನ್ನು ಮನೆಗೆ ಊಟಕ್ಕೆ ಕರೆದನು. ಡಿ ಸೋಜನಿಗೆ ಹಿಡಿಸಲಾರದ ಹಿಗ್ಗು! ಕೊನೆಗೊಮ್ಮೆ ದುರ್ಗದ ಅಗಸಿ ಬಾಗಿಲು ತೆರೆಯತೊಡಗಿದೆಯೆಂದುಕೊಂಡನು. ಅನಂತರ ಮುದುಕನ ಭೋಜನ ಕೂಟಗಳಲ್ಲಿ ಈ "ಮೋಜುಗಾರ ಅಳಿಲು" ಅನಿವಾರ್ಯ ಅತಿಥಿಯಾಗಿಬಿಟ್ಟನು. ಅಲ್ಲಿ ಅವನ ಹಂಚಿಕೆಗಳಿಗೆ ಅನಿರ್ಬಂಧ ಕ್ಷೇತ್ರ ಲಭಿಸಿತು.

ಆದರೂ ಮೇಜರ ಬೆಂಟೀಸನು ಅಜೇಯನೆಂದೇ ತೋರಿತು. ಅವನು ಎಂದೂ ಗಹಗಹಿಸುತ್ತಿದ್ದಿಲ್ಲ. ಅತಿಶಯ ಮೋಜೆನಿಸಿದರೆ ವಕ್ರವಾಗಿ ನಸುನಗುತ್ತಿದ್ದನು ಮಾತ್ರ. ಕೂಟದ ಇತರ ಸದಸ್ಯರಿಗೆ ಅಟ್ಟಹಾಸ ಬರಿಸಿ ಬಾಯೊಳಗೆ ಕರವಸ್ತ್ರ ತುರುಕುವಂತೆ ಮಾಡುತ್ತಿದ್ದ ಹಾಸ್ಯಗಳು ಮುದುಕನ ತುಟಿಗಳನ್ನು ಕಿಸಿಯುವಂತೆ ಮಾಡಿದರೆ ಪುಣ್ಯ. ಹಾಸ್ಯದಲ್ಲಿ ಅಸಾಧಾರಣ ಚುರುಕೇನೂ ಇಲ್ಲವೆನಿಸಿದರೆ ಮೇಜರನು ನಿರ್ದಾಕ್ಷಿಣ್ಯವಾಗಿ "ಇದು ಹಳೇ ಹಾಸ್ಯ ಬಿಡು! ೧೮೫೦ರಲ್ಲಿ ಮುದ್ರಣವಾದ ಪುಸ್ತಕದಲ್ಲಿ ನಾನು ಓದಿದ್ದೆ" ಎಂದು ಹಂಗಿಸಿಯೇ ಬಿಡುತ್ತಿದ್ದ.

ಇಂಥ ಪ್ರಸಂಗಗಳಲ್ಲಿ ಡಿ ಸೋಜನು ದೇಶಾವರದ ನಗೆ ನಗುತ್ತಿದ್ದ. ಆದರೆ ಒಳಗೊಳಗೆ ಈ ಸಲ ತಪ್ಪಿದರೇನು, ಎಂದಾದರೂ ಇವನನ್ನು ಹಿಡಿಯದೇ ಬಿಟ್ಟೇನೆ ಅಂದುಕೊಳ್ಳುತ್ತಿದ್ದನಾತ.

೪

ಅವನ ಎಲ್ಲ ಕೌಶಲವೂ ಈಗ ಒಂದೇ ಗುರಿಯ ಕಡೆ ವೇಧಿಸಿತು. ಮುದುಕನ ದೌರ್ಬಲ್ಯಗಳನ್ನು ಕಂಡುಹಿಡಿಯುವದೇ ಅದು. ಪ್ರತಿಯೊಬ್ಬನಿಗೂ ಒಂದು ವಿಶಿಷ್ಟ ತರದ ಹಾಸ್ಯ ಇಲ್ಲವೆ ವಿಡಂಬನೆ ಮೆಚ್ಚಿಕೆಯಾಗುತ್ತದೆ. ಒಬ್ಬರಿಗೆ ದಪ್ಪನ್ನ ಪಾದ್ರಿಗಳ ಮೇಲಿನ ಹಾಸ್ಯ ರುಚಿ ಹತ್ತಿದರೆ ಇನ್ನೊಬ್ಬನನ್ನು ಜರ್ಮನ್ನರನ್ನು ಕುರಿತ ಕಥೆಗಳು ನಗಿಸುತ್ತವೆ. ಇನ್ನೊಬ್ಬರಿಗೆ ಫ್ರೆಂಚರ ಖಾರವಾದ ಹಾಸ್ಯದ ಮೇಲೆ ಮೋಹವಿರುತ್ತದೆ. ಆದರೆ ಈ ಮುದುಕ ಇಂಗ್ಲಿಷ, ಫ್ರೆಂಚ ಜರ್ಮನ್, ಬ್ರೆಜೀಲಿಯನ್—ಯಾವ ಮಾದರಿಯ ಹಾಸ್ಯಕ್ಕೂ ಬಗ್ಗುವಂತೆ ಕಾಣಲಿಲ್ಲ. ಅವನ ಮಾದರಿ ಯಾವದಿದ್ದೀತು?

ಡಿ ಸೋಜನು ಒಂದೊಂದೇ ಮಾದರಿಯನ್ನು ತೇಲಿಸಿ ಬೆಂಟೀಸನ ಮೇಲೆ ವಿಫಲವಾದ ಮಾದರಿಗಳನ್ನೆಲ್ಲ ಬತ್ತಳಿಕೆಯಿಂದ ಹೊರಗೊಗೆಯುತ್ತ ಕೊನೆಗೆ ಅವನ ವಜ್ರಕವಚವನ್ನು ಭೇದಿಸಬಲ್ಲ ಅಸ್ತ್ರವನ್ನು ಗೊತ್ತುಹಚ್ಚಿದನು. ಇಂಗ್ಲೀಷರನ್ನು ಮತ್ತು ಪಾದ್ರಿಗಳನ್ನು ಕುರಿತ ಹಾಸ್ಯಗಳಿಗಾಗಿ ಮುದುಕನ ಬಾಯಿ ಲೊಚಗುಟ್ಟುತ್ತದೆಂದು ಖಾತ್ರಿಯಾಯಿತು. ಆದರೆ ಇವೆರಡರ ಸಂಯೋಗವಿದ್ದರಷ್ಟೇ ಅವನಿಗೆ ಅದು ನಾಟುತ್ತಿತ್ತು. ಯಾವುವಾದರೂ ಒಂದೇ ವಿಧದ್ದು ಅವನನ್ನು ಅಲುಗಿಸುತ್ತಿರಲಿಲ್ಲ. ಮುದುಕನ ವಿಕ್ಷಿಪ್ತತೆ ಹಾಗಿತ್ತು. ಗೋಮಾಂಸ ಭಕ್ಷಕ, ಸ್ಥೂಲಕಾಯ, ಹರಕುಸೂಟಿನ ಇಂಗ್ಲೀಷ ಮನುಷ್ಯನೂ ಹೆಂಗಸರನ್ನು ಕಂಡರೆ ಜೊಲ್ಲು ಸುರಿಸುವ ಪೈಪು

ಸೇದುವ ಪಾದ್ರಿಯೂ ಒಂದೇ ಕಥೆಯಲ್ಲಿ ಹಾಸ್ಯದ ಪಾತ್ರಗಳಾಗಿದ್ದರೆ ಮುದುಕ ಹಿರಿಹಿರಿ ಹಿಗ್ಗಿ ನಗುತ್ತಿದ್ದ. ಆದರೆ ಆಗ ಕೂಡ ಆರೋಗ್ಯಕ್ಕೆ ಮಾರಕವಾಗುವಷ್ಟು ಗಟ್ಟಿಯಾಗಿ ಗಹಗಹಿಸುತ್ತಿರಲಿಲ್ಲ.

ಅಗಾಧ ಸಹನೆಯಿಂದ ಡಿ ಸೋಜನು ಈ ಒಂದು ತರಹದ ಹಾಸ್ಯದ ಮೇಲೆಯೇ ತನ್ನ ಕೌಶಲವನ್ನು ಕೇಂದ್ರೀಕರಿಸಿದನು. ಮುದುಕನ ರಕ್ತನಾಳದ ಮೇಲೆ ಅದರ ಹೊಸ ಹೊಸ ಮಿಶ್ರಣಗಳಿಂದ ನಿರಂತರವಾದ ಬಾಣವರ್ಷಣವನ್ನು ಅವನು ಸಾಗಿಸಿದನು.

ಕೊನೆಯ ರಾಮಬಾಣ ಅಟ್ಟಹಾಸ ಬೇಗನೇ ಬರಲಿಲ್ಲ. ಆದರೆ ನಮ್ಮ ಭಾವಿ ಕರಾಧಿಕಾರಿ ನಿರಾಶನಾಗಲಿಲ್ಲ. ಮೇಲಿಂದ ಮೇಲೆ ಬಾವಿಗಿಳಿಸಿದ ಗಡಿಗೆ ಕಡೆಗೊಮ್ಮೆ ಒಡೆಯಲೇಬೇಕೆಂಬ ಕಥೆಯ ಮೇಲೆ ಅವನು ಕೈಯೂರಿದ್ದನು. ಅವನ ಉಪಾಯ ಅಷ್ಟು ಪಡಪೋಶಿಯಾಗಿದ್ದಿಲ್ಲ.

ಒಂದು ದಿನ ಹಬ್ಬದ ಸಮಯ ವೃದ್ಧ ಮೇಜರನು ಮಿತ್ರರಿಗೆಲ್ಲ ಭೋಜನ ಏರ್ಪಡಿಸಿದನು. ಸಹಕಾರಿಯೊಬ್ಬನು ಕಳಿಸಿದ್ದ ಭಾರಿ ಮೀನೊಂದು ಅಂದು ಧ್ವಂಸವಾಗುವುದಿತ್ತು. ಹಬ್ಬದ ಆಟ ನೋಟಗಳಿಂದ ಎಲ್ಲರೂ ಪ್ರಸನ್ನಚಿತ್ತರಾಗಿದ್ದರು. ಮೇಜರನಿಗೆ ಮೀನಿನ ಪದಾರ್ಥವೆಂದರೆ ಜೀವ. ಅಂದು ಅವನ ಪ್ರೀತಿಯ ಗರ್ಟ್ರೂಡಳು ತಯಾರಿಸಿದ ಮೀನಿನ ಅಡಿಗೆಯ ವಾಸನೆಯಿಂದ ಅವನ ಕಣ್ಣುಗಳು ತಳತಳಿಸತೊಡಗಿದ್ದವು.

ಅಂತಿಮ ಪ್ರಹಾರಕ್ಕೆ ಇದೇ ತಕ್ಕ ಸಮಯವೆಂದು ಡಿ ಸೋಜ ನಿರ್ಧರಿಸಿದ್ದ. ಅವನು ಎಷ್ಟೋ ರಾತ್ರಿ ನಿದ್ದೆಗೆಟ್ಟು ತನ್ನ ಮಿದುಳನ್ನೆಲ್ಲ ಖರ್ಚು ಮಾಡಿ ಒಂದು ವಿಸ್ತಾರವಾದ ಕಥೆ ಹೊಸೆದಿದ್ದ. ಅದರಲ್ಲಿ ಒಬ್ಬ ಇಂಗ್ರೇಜ, ಅವನ ಹೆಂಡತಿ, ಇಬ್ಬರು ಫ್ರೆಂಚ ಪಾದ್ರಿಗಳು ಇವರ ಮೋಜಿನ ಚರಿತ್ರೆ ಇತ್ತು.

ಇದು ನಮ್ಮ ನಾಯಕನ' ಕೊನೆಯ ಅಸ್ತ್ರವಾಗಿತ್ತು. ಇದು ಗುರಿ ತಪ್ಪಿದರೆ ತನ್ನ ಬುರುಡೆಯೊಳಗೆ ಗುಂಡು ಹಾಕಿಕೊಳ್ಳುವುದಾಗಿ ಡಿ ಸೋಜ ಪ್ರತಿಜ್ಞೆ ಮಾಡಿಕೊಂಡಿದ್ದ. ಇದಕ್ಕಿಂತ ಹಾಸ್ಯಮಯ ಸ್ಫೋಟಕವನ್ನು ತಯಾರಿಸಲು ಬ್ರಹ್ಮನಿಗೂ ಸಾಧ್ಯವಿಲ್ಲೆಂದು ಅವನಿಗೆ ಗೊತ್ತಿತ್ತು. ಮುದುಕನ ರಕ್ತನಾಳ ಇದರಿಂದ ಸ್ಫೋಟವಾಗದಿದ್ದರೆ ಅವನ ಗಂಟು ಒಂದು ಮೋಸ, ವೈದ್ಯಶಾಸ್ತ್ರ ಶತಸುಳ್ಳು, ಔಷಧ ವ್ಯರ್ಥ ಮತ್ತು ತಾನು ಪ್ರಪಂಚದಲ್ಲೆಲ್ಲ ಶತದಡ್ಡ — ಆದ್ದರಿಂದ ಈ ಭೂಮಿಯಲ್ಲಿ ಬದುಕಲು ಅನರ್ಹ.

ಊಟದ ಸವಿ, ಮದ್ಯದ ಉತ್ತೇಜನ ಏರುತ್ತಿದ್ದಂತೆ ಹೀಗೆ ಚಿಂತಿಸುತ್ತಿದ್ದ ಡಿ ಸೋಜನಿಗೆ ಮುದುಕನು ಕಣ್ಣುಮಿಟುಕಿಸಿ ಮಾತಾಡಲು ಪ್ರೋತ್ಸಾಹವಿತ್ತನು.

ಇದನ್ನೇ ಎದುರು ನೋಡುತ್ತಿದ್ದ ಡಿ ಸೋಜ ಕಥೆಯನ್ನು ತನ್ನ ಸಹಜ ಶೈಲಿಯಲ್ಲಿ ಪ್ರಾರಂಭಿಸಿದ. ಇಬ್ಬರು ಫ್ರೆಂಚ ಪಾದ್ರಿಗಳು ಮತ್ತು ಒಬ್ಬ ಇಂಗ್ಲೀಷ್ ಲಾರ್ಡನಿಗೆ ಸಂಬಂಧಿಸಿದ ಕಥೆಯೆಂದು ತಿಳಿದೊಡನೆ ಮೇಜರನ ಕಣ್ಣುಗಳು ಮಿನುಗತೊಡಗಿದವು. ತುತ್ತನ್ನು ಮೆಲುಕು ಹಾಕುತ್ತ ಅವನು ಆ ಮೃತ್ಯುರೂಪಿ ಕಥೆಯಲ್ಲಿ ಮಗ್ನನಾದನು.

ಆಖ್ಯಾನ ಸುದೀರ್ಘವೂ ಚತುರವೂ ಆಗಿತ್ತು. ಅದರ ಎಳೆಗಳೆಲ್ಲ ಸೇರಿಕೊಂಡು ಹೊಸೆಯುತ್ತ ಸಾಗಿದ್ದವು. ಅದನ್ನು ಪರಮಾವಧಿ ಕೌಶಲದಿಂದ ನಿರೂಪಿಸಲಾಗಿತ್ತು. ಅದರ ಮಾರ್ಮಿಕ ಬೆಳವಣಿಗೆ ಅದ್ಭುತವಾಗಿತ್ತು. ಕಥೆಯ ಮರ್ಮಸ್ಥಾನ ಇನ್ನೇನು ದೂರವಿದ್ದಿಲ್ಲ. ಮುದುಕನು ಮಂತ್ರಮುಗ್ಧನಂತೆ ಆಲಿಸುತ್ತಿದ್ದನು. ಅವನ ಬಾಯಿ ಅರ್ಧ ತೆರೆದಿತ್ತು. ಎತ್ತಿದ್ದ ತುತ್ತು ಮಧ್ಯಾಕಾಶದಲ್ಲಿ ನಿಂತುಬಿಟ್ಟಿತ್ತು. ಗಹಗಹಿಸುವ ಸಿದ್ಧತೆಯೊಂದು —ಇನ್ನೇನು ಸ್ಫೋಟವಾಗುತ್ತದೆ ಎಂಬ ಹಾಗೆ— ಅವನ ಮುಖವನ್ನು ಬೆಳಗಿಸಿತ್ತು.

ಡಿ ಸೋಜ ಹಿಂಜರಿದ. ರಕ್ತನಾಳದ ಸ್ಫೋಟ ಅವನ ಮನಸಿನ ಕಣ್ಣಿಗೆ ಕಾಣಿಸಿತು. ಒಂದು ಕ್ಷಣ ಅವನ ಅಂತರಾತ್ಮ ಅವನ ನಾಲಗೆಗೆ ತಡೆ ಹಾಕಿತು. ಆದರೆ ಡಿ ಸೋಜನು ಅದನ್ನು ಒಪ್ಪು

ಸರಿಸಿ ನಿರ್ಧಾರದ ದನಿಯಲ್ಲಿ ಕುದುರೆ ಒತ್ತಿಯೇ ಬಿಟ್ಟ.

ಮೇಜರ ಅಂತೋನಿಯೋ ಪಿರೇರಾ ಡಾ ಸಿಲ್ವಾ ಬೆಂಟೇಸನು ತನ್ನ ಜೀವಮಾನದಲ್ಲೇ ಮಾಡಿರದಂಥ ಅದ್ಭುತ ಅಟ್ಟಹಾಸ ಮಾಡಿದನು. ಅದರ ಪ್ರಚಂಡ ಧ್ವನಿ ಬೀದಿಯ ಕೊನೆಯ ವರೆಗೆ ರಣರಣಿಸಿತು. ಇದು ಅವನ ಮೊದಲ ಮಹಾ ನಗುವಿದ್ದಂತೆ ಕೊನೆಯದೂ ಆಯಿತು. ಯಾಕೆಂದರೆ ಅತಿಥಿಗಳು ಅಪ್ರತಿಭರಾಗಿ ನೋಡು ತ್ತಿದ್ದಂತೆ ಮುದುಕನು ನಗುವಿನ ಮಧ್ಯದಲ್ಲೇ ಮುಗ್ಗರಿಸಿ ಮೇಜಿನ ಮೇಲಿದ್ದ ತಾಟಿನ ಮೇಲೆ ಉರುಳಿದ್ದನ್ನೂ ರಕ್ತದ ಚಿಲುಮೆ ಚಿಮ್ಮಿ ಮೇಜಿನ ಬಟ್ಟೆ ಕೆಂಪಾದದ್ದನ್ನೂ. ಅವರು ಕಂಡರು.

"ಕೊಲೆಗಡಕ"ನು ಪಿಶಾಚದರ್ಶನವಾದವ ನಂತೆ ಎದ್ದನು. ಗೊಂದಲದ ನಡುವೆ ಅವನು ಮೆಲ್ಲನೆ ನುಸುಳಿ ಬೀದಿ ಸೇರಿದನು. ಮನೆ ಸೇರಿ ಬಾಗಿಲು ಮುಚ್ಚಿ ಅಗಳಿ ಜಡಿದು ತನ್ನ ಕೋಣೆ ಯಲ್ಲಿ ಅಡಗಿ ಕುಳಿತನು. ರಾತ್ರಿಯೆಲ್ಲ ಅವನ ಹಲ್ಲು ಕಟಕಟೆಂದು ಕಂಪಿಸುತ್ತಿತ್ತು. ಅವನ ಬೆವರು ಹಿಮವಾಗಿತ್ತು. ನಸುವೆ ಸದ್ದಾದರೂ ಅವನು ಭಯವಿಹ್ವಲನಾಗುತ್ತಿದ್ದನು. ಏನು, ಪೋಲೀಸರು ಬಂದೇ ಬಿಟ್ಟರೇ?

ಅವನ ಆತ್ಮದ ಉದ್ವೇಗ ತಣಿಯಬೇಕಾದರೆ ಎಷ್ಟೋ ವಾರಗಳು ಕಳೆದವು. ಮಿತ್ರನ ಮರಣದ ಕೊರಗಿನಿಂದಲೇ ಅವನಿಗೆ ಜಡ್ಡಾಗಿದೆ ಯೆಂದು ಎಲ್ಲರೂ ಭಾವಿಸಿದರು. ಆದರೆ ಅವನ ಕಣ್ಮುಂದೆ ಮಾತ್ರ ಅದೇ ಭೀಕರ ಕಣಸು! ಮುದುಕ ಅಧಿಕಾರಿ ಮೇಜಿನ ಮೇಲೆ ಮುಗ್ಗ ರಿಸುವುದು, ಅವನ ಬಾಯಿಯಿಂದ ರಕ್ತ ಚಿಮ್ಮು ವುದು; ಅವನ ಕೊನೆಯ ಅಟ್ಟಹಾಸದ ಮಹಾ-ರಾವದ ಪ್ರತಿಧ್ವನಿ ವಾಯುಮಂಡಲವನ್ನೆಲ್ಲ ನಡುಗಿಸುವುದು.

ಅವನು ಈ ಅವಸ್ಥೆಯಲ್ಲಿದ್ದಾಗಲೇ ಅವನಿಗೆ ರಾಜಧಾನಿಯ ವರ್ಚಸ್ವೀ ಬಂಧುವಿನಿಂದ ಪತ್ರ ಬಂತು. ಅದರಲ್ಲಿ ಇತರ ಸಂಗತಿಗಳನ್ನು ಉಲ್ಲೇಖಿಸಿದ ನಂತರ ಈ ಕೆಳಗಿನ ಮಾತುಗ ಳಿದ್ದವು: "ನೀನು ಒಪ್ಪಿಕೊಂಡ ಪ್ರಕಾರ ಸಕಾ ಲದಲ್ಲಿ ನನಗೆ ತಿಳಿಸದೆ ಬಿಟ್ಟದ್ದರಿಂದ ಬೆಂಟೇ ಸನ ಮರಣ ವಾರ್ತೆ ನನಗೆ ಪತ್ರಿಕೆಯಲ್ಲಿ ಓದಿ. ಮೇಲೆಯೇ ತಿಳಿಯಿತು. ಆ ಮೇಲೆ ನಾನು ಮಂತ್ರಿಯ ಕಡೆ ಹೋದೆ. ಆದರೆ ಕೆಲಸ ಆಗಲೇ ಕೆಟ್ಟುಹೋಗಿತ್ತು. ಇನ್ನೊಬ್ಬರನ್ನು ಆ ಹುದ್ದೆಗೆ ಆರಿಸಿಬಿಟ್ಟಿದ್ದರು. ಜೀವಮಾನದ ಅತ್ಯುತ್ತಮ ಸಂಧಿಯನ್ನು ನೀನು ಕಳೆದುಕೊಂಡಿದ್ದೀ. ಹೊತ್ತು ಮೀರಿ ಬಂದವರಿಗೆ ಎಲುಬಿನ ತುಣುಕೇ ಗತಿಯೆಂಬ ಲ್ಯಾಟಿನ್ ಗಾದೆಯನ್ನು ಅನುಸರಿಸಿ ಇನ್ನಾದರೂ ಜಾಗರೂಕನಾಗಿರು."

೫

ಒಂದು ತಿಂಗಳ ನಂತರ ಡಿಸೋಜನು ತನ್ನ ಕೋಣೆಯಲ್ಲಿ ತೊಲೆಯಿಂದ ಜೋತಾಡುತ್ತಿರುವು ದನ್ನು ಯಾರೋ ಕಂಡರು. ಅವನ ದೇಹ ಕೊರ ಡಾಗಿತ್ತು, ನಾಲಗೆ ಹೊರಚಾಚಿತ್ತು. ಅವನು ಪಾಯಜಮಾದ ಕಾಲನ್ನು ನೇಣು ಮಾಡಿ ಹಾಕಿ ಕೊಂಡು ಸತ್ತಿದ್ದನು.

ಊರಲ್ಲಿ ಸುದ್ದಿ ಹಬ್ಬಿದಾಗ ಎಲ್ಲರೂ ಅವನ ಆತ್ಮಹತ್ಯೆಯ ವಿವರಗಳನ್ನು ಕೇಳಿ ನಕ್ಕರು. ಅಂಗಡಿಕಾರ ಸೆಟ್ಟಿ ತನ್ನ ಕಾರಕೂನರ ಸಮಕ್ಷ ದಲ್ಲಿ ಈ ಕೆಳಗಿನಂತೆ ವ್ಯಾಖ್ಯಾನಮಾಡಿದನು: "ಎಂಥ ಮೋಜಿನ ಪ್ರಾಣಿ ಆತ! ಸಾಯು ವಾಗಲೂ ಮಂಗಾಟಿಕೆ ಬಿಡಲಿಲ್ಲ! ಇಜಾರದ ಕಾಲಿನಿಂದ ನೇಣು ಹಾಕಿಕೊಳ್ಳುವುದೆಂದರೇನು! ಡಿಸೋಜನನ್ನು ಬಿಟ್ಟರೆ ಇಂಥ ಮೋಜು ಯಾರಿಗೂ ಹೊಳೆಯಲು ಸಾಧ್ಯವೇ ಇದ್ದಿಲ್ಲ."

ಅವನ ಸುತ್ತ ನಿಂತಿದ್ದವರು ಹಹ್ಹಾ ಎಂದು ಅಟ್ಟಹಾಸ ಮಾಡಿದರು. ಬಡ ಡಿಸೋಜ ನಿಗೆ ದೊರಕಿದ ಚರಮಗೀತೆ ಇದೇ.



**ರಾಷ್ಟ್ರಗಳ ಹಣೆಬರಹ ಹುಳಹುಪ್ಪಡಿಗಳ ಕೈಯಲ್ಲಿತ್ತು.
ಆದರೆ ಈಗ ಅದೆಲ್ಲ ಬದಲಾಗಿದೆ.**



# ನಾಗರಿಕತೆಗಳನ್ನು ಉರುಳಿಸಿದ ಕ್ರಿಮಿಕೀಟಗಳು



"ಯುನೆಸ್ಕೋ ಕೋರಿಯರ್" ಮತ್ತು ಇತರ ಮೂಲಗಳಿಂದ

೧೮೧೨ರಲ್ಲಿ ವಿಶ್ವವಿಜಯಿ ನೆಪೋಲಿಯನ್ ಬೊನೆಪಾರ್ಟನು ರಶಿಯದ ಮೇಲೆ ದಂಡೆತ್ತಿ ಹೋದನು. ಅವನ ಸಂಗಡ ೫ ಲಕ್ಷ ಸುಸಜ್ಜಿತ ಸೈನ್ಯವಿತ್ತು. ಈ ಮಹಾ ಮೋಹರದ ಮುಂದೆ ಯಾವ ಸೈನ್ಯವೂ ನಿಲ್ಲುವಂತಿರಲಿಲ್ಲ. ಅವನು ರಶಿಯಾದ ಪ್ರತಿಭಟನೆಯನ್ನು ಕೊಚ್ಚಿಕೊಂಡು ರಾಜಧಾನಿ ಮಾಸ್ಕೋದ ವರೆಗೂ ನುಗ್ಗಿದನು. ರಶಿಯಾದ ಯುವಕ ಚಕ್ರವರ್ತಿ ಅಳಿದುಳಿದ ಸೈನ್ಯ ಸಹಿತ ಪಲಾಯನ ಮಾಡಿದನು. ಬೊನೆಪಾರ್ಟನು ಮಾಸ್ಕೋದಲ್ಲಿ ವಿಜಯಧ್ವಜ ಹಾರಿಸಿ ತಳವೂರಿದನು.

ಆದರೆ ಎರಡು ತಿಂಗಳೂ ಕಳೆದಿರಲಿಲ್ಲ, ನೆಪೋಲಿಯನ್ನನು ಇದ್ದಕ್ಕಿದ್ದಂತೆ ವೈಭವಪೂರ್ಣ ಮಾಸ್ಕೋದಿಂದ ತಳಕಿತ್ತು ಪಶ್ಚಿಮಾಭಿಮುಖವಾಗಿ ಹಿನ್ನಡೆಯತೊಡಗಿದನು. ಅವನನ್ನು ಅಟ್ಟುತ್ತಿದ್ದುದು ರಶಿಯನ್ ಸೈನ್ಯವಲ್ಲ—ಟೈಫಸ್ ಜ್ವರ. ಅವನು ಮಾಸ್ಕೋಕ್ಕೆ ಸಾಗುತ್ತಿದ್ದಾಗಲೇ ಅವನ ಸೈನ್ಯದಲ್ಲಿ ಈ ಜ್ವರ ಹಾವಳಿಯೆಬ್ಬಿಸತೊಡಗಿತ್ತು. ಬರಬರುತ್ತ ಅದರ ರೌದ್ರ ಏರಿತು. ದಿನವೂ ಸಾವಿರಗಟ್ಟಳೆ ಜನ ಸಾಯಹತ್ತಿದರು. ಪ್ರತಿಯೊಂದು ಊರಲ್ಲಿಯೂ ಸಾವಿರಗಟ್ಟಳೆ ಜನ ಜ್ವರಗ್ರಸ್ತರನ್ನು ಸಾಯಲು ಬಿಟ್ಟು ನೆಪೋಲಿಯನ್ನನು ಮುಂದೋಡುತ್ತಿದ್ದನು. ಆದರೆ ಜ್ವರವು ಅವನನ್ನು ಅಟ್ಟುತ್ತಲೇ ಹೋಯಿತು. ಅವನು ತಿರುಗಿ ಸ್ವದೇಶ ಮುಟ್ಟಿದಾಗ ಅವನ ಸೈನ್ಯದಲ್ಲಿ ಬರಿ ೩,೦೦೦ ಜನರು ಉಳಿದಿದ್ದರು. ನೆಪೋಲಿಯನ್ನನ ಅಂತಿಮ ಸೋಲಿಗೆ ವಾಟರ್ಲೂ ಕದನ ಮತ್ತು ಸೇನಾಪತಿ ವೆಲಿಂಗ್‌ಟನ್ನನಿಗಿಂತಲೂ ರಶಿಯದಲ್ಲಿ ಬೆಂಬತ್ತಿದ ಈ "ಟೈಫಸ್ ಸೇನಾಪತಿ"ಯೇ ಕಾರಣವಾಗಿದ್ದನೆಂದು ಭಾವಿಸಲಾಗಿದೆ.

ಸಾಂಕ್ರಾಮಿಕ ಪಿಡುಗುಗಳು ವಿಶ್ವವಿಜಯಿಗಳ ಹಣೆಬರಹವನ್ನು ನಿರ್ಧರಿಸಿದ್ದು, ರಾಷ್ಟ್ರಗಳ ಇತಿಹಾಸವನ್ನು ತಿದ್ದಿಬರೆದದ್ದು ಅದೇ ಮೊದಲನೆಯದೂ ಅಲ್ಲ, ಕೊನೆಯದೂ ಅಲ್ಲ. ನೆಪೋಲಿಯನ್ನನಿಗಿಂತ ಎರಡೂವರೆ ಸಾವಿರ ವರ್ಷ ಮೊದಲು ಭಾರತದ ವರೆಗೂ ನುಗ್ಗಿದ ಇನ್ನೊಬ್ಬ ವಿಶ್ವವಿಜೇತ ಸಿಕಂದರನನ್ನೂ ಶತ್ರು ಸೈನ್ಯಗಳಿಗಿಂತ ಜ್ವರದ ಪಿಡುಗೇ ಹಿಂದಟ್ಟಿತೆಂದು ಇತಿಹಾಸ ಹೇಳುತ್ತದೆ. ಕ್ರಿ. ಪೂ. ೫ ನೇ ಶತಕದಲ್ಲಿ ಪಾರಸೀಕ ಮಹಾಸಾಮ್ರಾಟ ಕ್ಸರ್‌ಕ್ಸೆಸ (Xerxes)ನ ಸೇನಾಸಾಗರವನ್ನು ಧ್ವಂಸ ಮಾಡಿದ್ದು ಗ್ರೀಕ್ ಸೈನ್ಯವಲ್ಲ, ಜ್ವರದ ಪಿಡುಗು.

ಉದಾಹರಣೆಗಳನ್ನು ಎಷ್ಟು ಬೇಕಾದರೂ ಬೆಳೆಸಬಹುದು. ೧೬೩೨ ರಲ್ಲಿ ಸ್ವೀಡನ್ನಿನ ರಾಜ ಗುಸ್ಟೇವಸ್ ಅಡಾಲ್ಫನೂ ಜರ್ಮನ್ ದಂಡನಾಯಕ ವಾಲೆನ್‌ಸ್ಟೈನನೂ ನುರೆಂಬರ್ಗ್ ಬಳಿ ಭಾರಿ ಕಾಳಗಕ್ಕಾಗಿ ಸೈನ್ಯ ಸಂಗ್ರಹ ಮಾಡಿದ್ದರು. ಆದರೆ ಕೈಗೆ ಕೈ ಹತ್ತುವ ಮೊದಲೇ ಎರಡೂ ಸೈನ್ಯಗಳು ಕಾಲಿಗೆ ಬುದ್ಧಿ ಹೇಳಬೇಕಾಯಿತು. ಕಾರಣ ಮತ್ತೆ ಟೈಫಸ್. ಎರಡೂ ಶಿಬಿರಗಳಲ್ಲಿ ಅದರ ಹಾವಳಿಯೆದ್ದಿತು. ಅದರ ಹೊಡೆತವು ಎರಡೂ ಸೈನ್ಯಗಳನ್ನು ಚದುರಿಸಿತು.

ಮಲೇರಿಯವು ರೋಮನ್ನರ ಇತಿಹಾಸದಲ್ಲಿ ಅಗ್ರಪಾತ್ರ ವಹಿಸಿತ್ತು. ನೆಪೋಲಿಯನ್ನನ ಅಮೇರಿಕ ವಿಜಯದ ಕನಸನ್ನು ಮಣ್ಣುಗೂಡಿಸಿದ್ದೂ ಅದೇ. ೧೮೦೧ ರಲ್ಲಿ ಅಮೇರಿಕಾಕ್ರಮಣದ ಪೂರ್ವಭಾವಿಯೆಂದು ಅವನ ಸೇನಾಪತಿ ಲಿಕ್ಲಾರ್ಕನು ಹೈತಿ ದ್ವೀಪವನ್ನು ಆಕ್ರಮಿಸಿದನು. ೧೮೦೩ ರಲ್ಲಿ ಮಲೇರಿಯ ಹಾವಳಿಯಿಂದ ಅವನ ೩೦ ಸಾವಿರ ಸೈನ್ಯದಲ್ಲಿ ೨೩ ಸಾವಿರ ಜನರು ಪರಲೋಕವಾಸಿಗಳಾದ ಮೇಲೆ ಅವನು ಆ ದ್ವೀಪ ಬಿಟ್ಟು ಕಾಲುಕಿತ್ತನು.

೧೪ ನೇ ಶತಮಾನದಲ್ಲಿ ಪ್ಲೇಗು ಮೂರೇ ವರ್ಷಗಳಲ್ಲಿ ಪ್ರಪಂಚದಲ್ಲಿ ೭॥ ಕೋಟಿ ಜನರನ್ನು ಕೊಂದದ್ದಾಗಿ ತಿಳಿಯುತ್ತದೆ. ಉತ್ತರ ಚೀನದಿಂದ ಹೊರಟು ಪಶ್ಚಿಮಾಭಿಮುಖವಾಗಿ ತಾಂಡವವಾಡಿದ ಈ "ಕರಾಳ ಮೃತ್ಯು" ಯುರೋಪಿನಲ್ಲಿಯೇ ೨॥ ಕೋಟಿ ಜನರಿಗೆ ಸಾವನ್ನು ತಂದಿತು. ೧೨೪೯–೫೦ ರಲ್ಲಿ ಫ್ರೆಂಚ ದೊರೆ ೯ ನೇ ಲುಯಿಯ ಇಜಿಪ್ತ ದಂಡಯಾತ್ರೆಯನ್ನು ಹಾಳುಗೆಡಹಿದ್ದು ಪ್ಲೇಗೇ.

ಈಚೆಗೆ ಹೊಸ ಪ್ರತಿಬಂಧಕೋಪಾಯಗಳು ಪ್ರಯೋಗಿಸಲ್ಪಡುವ ಮೊದಲು ಮಲೇರಿಯವು ವರ್ಷಕ್ಕೆ ೩೦ ಕೋಟಿ ಜನರನ್ನು ಆಕ್ರಮಿಸಿ ೩೦ ಲಕ್ಷ ಜನರನ್ನು ಕೊಂದು ಉಳಿದವರನ್ನು ಚಿರನಿತ್ರಾಣಕ್ಕೆ ಗುರಿ ಮಾಡುತ್ತಿತ್ತು. ಮಲೇರಿಯಾ ಪೀಡಿತರ ಸಂತಾನೋತ್ಪಾದನ ಶಕ್ತಿಯ ಮೇಲೆ ಕೂಡ ದುಷ್ಪರಿಣಾಮವಾಗುತ್ತದೆ.

ನಾಗರಿಕತೆ, ಸಂಸ್ಕೃತಿಗಳ ಉದ್ಭವ ಮತ್ತು ಅಧಃಪತನಗಳಲ್ಲಿ ಪಿಡುಗುಗಳ ಕೈವಾಡ ಅಲ್ಪವಲ್ಲ. ಮಾನವಶಾಸ್ತ್ರಜ್ಞರ ಅಭಿಪ್ರಾಯದಲ್ಲಿ ಮನುಷ್ಯನು ಉಷ್ಣವಲಯದಲ್ಲಿ—ಅದೂ ಆಫ್ರಿಕದಲ್ಲಿ—ಮೊದಲು ಕಾಣಿಸಿಕೊಂಡನು. ಅಲ್ಲಿಂದಲೇ ಅವನು ಬೇರೆಬೇರೆ ಖಂಡಗಳಿಗೆ ವಲಸೆ ಹೋಗಿ ಪ್ರಚಂಡ ನಾಗರಿಕತೆಗಳನ್ನು ಸ್ಥಾಪಿಸಿದನು. ಅವನ ಕುಲವಿಂದು ೨೫೦ ಕೋಟಿ ಸಂಖ್ಯೆಗೇರಿದೆ.

ಆದರೆ ಮನುಷ್ಯಕುಲದ ತೊಟ್ಟಿಲಾದ ಮತ್ತು ೨೦೦ ಕೋಟಿ ಜನರಿಗೆ ಆಶ್ರಯವೀಯಬಲ್ಲ ಆಫ್ರಿಕದ ಜನಸಂಖ್ಯೆ ಇಂದು ಕೇವಲ ೧೩೫ ಲಕ್ಷ. ಅಲ್ಲಿ ಯಾವ ಉತ್ತಮ ದರ್ಜೆಯ ನಾಗರಿಕತೆಯೂ ತಲೆಯೆತ್ತಿಲ್ಲ. ಅದು ಜಗತ್ತಿನ ಅತಿ ಹಿಂದುಳಿದ ಖಂಡಗಳಲ್ಲೊಂದಾಗಿದೆ.

ಹೀಗೇಕೆ? ಈ ಪ್ರಶ್ನೆಗೆ ಮತ್ತೆ ಉತ್ತರ—ರೋಗಗಳು. ಮನುಷ್ಯಕುಲದ ತೊಟ್ಟಿಲಾದ ಆಫ್ರಿಕದ ಉಷ್ಣವಲಯವೇ ಗುಂಯ್ಯೆಂದು ಗುಳಿಗುಳಿಸುವ ಅರಣ್ಯಗಳ, ಅನೇಕಾನೇಕ ಸಾಂಕ್ರಾಮಿಕ ರೋಗಜಂತುಗಳ ಹಾಗು ಅವುಗಳನ್ನು ಹಬ್ಬಿಸುವ ವಾಹನಗಳಾದ ಕೀಟಗಳ ತೊಟ್ಟಿಲೂ ಇದ್ದಂತೆ ಕಾಣುತ್ತದೆ. ಅವು ಅಲ್ಲಿನ ನಿವಾಸಿಗಳನ್ನು ನಿರಂತರ ಆಘಾತಗಳಿಂದ ನಿರ್ವೀರ್ಯರನ್ನಾಗಿ ಮಾಡಿ ಮಹಾ ನಾಗರಿಕತೆ ಕಟ್ಟಲು ಬೇಕಾದ ಸಾಹಸಕ್ಕೆ ಅಸಮರ್ಥರಾಗಿಸಿತೆಂದು ರೋಗಜ್ಞರ ಮತವಾಗಿದೆ.

ಬಿಳಿ ಮನುಷ್ಯನು ಅಮೇರಿಕ ಖಂಡಗಳಲ್ಲಿ ಕಾಲಿಡುವ ಮೊದಲು ಅಲ್ಲಿ ಉಚ್ಚಕೋಟಿಯ "ಮಾಯಾ" ಸಂಸ್ಕೃತಿಯೊಂದು ವಿಕಸಿತವಾಗಿತ್ತು. ಇದಕ್ಕೆ ಆಗ ಅಲ್ಲಿ ಮಲೇರಿಯಾದ ಹಾವಳಿಯಿಲ್ಲದ್ದೇ ಕಾರಣವೆಂದು ನಂಬಲಾಗಿದೆ. ಮಲೇರಿಯವನ್ನು ಅಮೇರಿಕಕ್ಕೆ ಒಯ್ದವನು ಬಿಳಿ ಮನುಷ್ಯನೇ.

ಸಿಂಹಳವೂ ಉತ್ತಮವರ್ಗದ ಸಂಸ್ಕೃತಿಯೊಂದನ್ನು ಬೆಳೆಸಿತ್ತು. ಹದಿಮೂರನೇ ಶತಮಾನದ ವರೆಗೂ ಇದು ಉತ್ಕರ್ಷದಲ್ಲೇ ಇತ್ತು.

ಅನಂತರ ಅದರ ಅಧಃಪತನಕ್ಕೆ ಅಲ್ಲಿನ ಅರಸರ ಅನೈಕ್ಯವೇ ಕಾರಣವೆಂದು ಹೇಳಲಾಗಿದ್ದರೂ ಮಲೇರಿಯದ ಹಾವಳಿಯೂ ಅಷ್ಟೇ ಹೇತುವಾಗಿರಬೇಕೆಂದು ಶಂಕಿಸಲಾಗಿದೆ. ಯಾಕೆಂದರೆ ಮಲೇರಿಯವು ಅದೇ ಸುಮಾರಿಗೆ ಸಿಂಹಳವನ್ನು ಪ್ರವೇಶಿಸಿದ್ದಾಗಿ ದಾಖಲೆಗಳುಂಟು.

ಇನ್ನೂ ಹತ್ತಿರ ಬಂದರೆ ನೆರೆಯ ದಕ್ಷಿಣ ಕನ್ನಡ ಜಿಲ್ಲೆ ಪ್ರಗತಿ ಹೊಂದುತ್ತಿರುವಾಗ ಉತ್ತರ ಕನ್ನಡವು ಹಿಂದೆ ಬೀಳಲು ಮಲೇರಿಯ ಪ್ರಮುಖ ಕಾರಣವೆಂದು ಹೇಳಬೇಕು. ಕಳೆದ ೫೦ ವರ್ಷಗಳಲ್ಲಿ ಭಾರತದ ಇತರ ಪ್ರದೇಶಗಳಲ್ಲಿ ಜನಸಂಖ್ಯೆ ರಭಸದಿಂದ ಬೆಳೆಯುತ್ತಿದ್ದಾಗ ಉತ್ತರ ಕನ್ನಡದ ಮಲೇರಿಯಪೀಡಿತ ಘಟ್ಟದ ತಾಲೂಕುಗಳ ಜನಸಂಖ್ಯೆ ಇಳಿಮುಖವಾಯಿತೆಂದು ಜನಗಣನೆಯ ಅಂಕೆ ಸಂಖ್ಯೆಗಳು ತೋರಿಸುತ್ತವೆ.

ಜನಾಂಗಗಳ ಹಣೆಬರಹವನ್ನು ತಿದ್ದಿ ಬರೆದ, ದಂಡಯಾತ್ರೆಗಳ ಭವಿಷ್ಯವನ್ನು ನಿರ್ಧರಿಸಿದ, ನಾಗರಿಕತೆಗಳನ್ನು ಬುಡಮೇಲು ಮಾಡಿದ ಸಾಂಕ್ರಾಮಿಕ ರೋಗಗಳಲ್ಲಿ ಮಲೇರಿಯಾ, ಟೈಫಸ್, ಪ್ಲೇಗ್, ಹಳದಿ ಜ್ವರ, ನಿದ್ರಾರೋಗ, ಕುರುಡು ರೋಗ ಇವು ಪ್ರಥಮ ಶ್ರೇಣಿಯಲ್ಲಿ ಸೇರತಕ್ಕವು. ಇವುಗಳಲ್ಲಿ ಟೈಫಸ್ ಹಾಗೂ ಹಳದಿ ಜ್ವರ ಹೊರತು ಉಳಿದೆಲ್ಲವೂ ಉಷ್ಣವಲಯದಲ್ಲೇ ಹೆಚ್ಚು ತಾಂಡವವಾಡುತ್ತವೆ.

ಮತ್ತು ಮಾನವ ಕುಲದ ಈ ಮಾರಿಗಳೆಲ್ಲವೂ ಕೀಟಗಳಿಂದಲೇ ಹಬ್ಬಿಸಲ್ಪಡುತ್ತವೆಂದು ಈಗೊಂದು ಶತಮಾನದ ಸಂಶೋಧನೆಗಳು ತೋರಿಸಿಕೊಟ್ಟಿವೆ.

ಚರಕ ಸುಶ್ರುತರ ಕಾಲದಿಂದಲೂ ಕಾಡುತ್ತಿರುವ ಮಲೇರಿಯದ ವಾಹನವೆಂದರೆ ಸೊಳ್ಳೆ (ಗುಂಗಾಡು.) ಪ್ರಪಂಚದಲ್ಲಿರುವ ಸುಮಾರು ೩,೦೦೦ ಜಾತಿಗಳ ಸೊಳ್ಳೆಗಳಲ್ಲಿ ಸುಮಾರು ೨೦೦ ಜಾತಿಗಳು ಈ ರೋಗದ ಜಂತುಗಳನ್ನು ದೇಹದಲ್ಲಿ ಧರಿಸಿ ಬೆಳೆಸಬಲ್ಲವಾಗಿವೆ. ಅವುಗಳಲ್ಲಿ ೧೦-೧೨ ಜಾತಿಗಳು ವಿಶೇಷವಾಗಿ ರೋಗ ಹಬ್ಬಿಸುವವೆಂದು ಗೊತ್ತಾಗಿದೆ. ಇವು ಕಡಿದ ಮನುಷ್ಯರ ರಕ್ತದಲ್ಲಿ ರೋಗದ ಕ್ರಿಮಿಗಳು ಸೇರಿಕೊಂಡು ಜ್ವರವನ್ನುಂಟುಮಾಡುತ್ತವೆ.

ಸುದೈವದಿಂದ ಅಮೇರಿಕ ಹಾಗು ಆಫ್ರಿಕಗಳಿಗಷ್ಟೇ ಮಿತವಾಗಿರುವ ಹಳದಿ ಜ್ವರವೂ ಕೆಲ ಜಾತಿಯ ಸೊಳ್ಳೆಗಳ ಮೂಲಕವೇ ಪ್ರಸಾರ ಹೊಂದುತ್ತವೆ. ಅತ್ಯಂತ ಮಾರಕವಾದ ಈ ರೋಗವು ಲಕ್ಷಾಂತರ ಪ್ರಾಣಗಳನ್ನು ಬಲಿಗೊಂಡಿದೆ. ಯಾವ ಕಾರಣದಿಂದಲೋ ಭಾರತದಲ್ಲಿ ಮಾತ್ರ ಇದು ಕಾಲಿಟ್ಟಿಲ್ಲ.

ದಂಡಯಾತ್ರೆಗಳನ್ನು ಹಾಳುಗೆಡಹಿದ ಟೈಫಸ್ ಇನ್ನೊಂದು ಕೀಟ ಜಾತಿಯಾದ ಹೇನು—ಕೂರೆಗಳಿಂದ ಪ್ರಸಾರ ಹೊಂದುತ್ತದೆ. ಮನುಷ್ಯರು ಸಂತತ ನಿಕಟ ಸಂಪರ್ಕದಲ್ಲಿರುವಲ್ಲಿಯೇ ಇದರ ಪ್ರಸಾರವಾಗುತ್ತದೆ. ಸೈನ್ಯಗಳು ಕೂರೆಗಳ ಹರಿದಾಟಕ್ಕೆ ಉತ್ತಮ ಪರಿಸ್ಥಿತಿ ಒದಗಿಸುವುದರಿಂದ ಟೈಫಸ್ಸಿನ ಹಾವಳಿ ಸೈನ್ಯಗಳಲ್ಲಿ ಹೆಚ್ಚಾಗಿತ್ತು.

ಪ್ಲೇಗ್ ರೋಗವನ್ನು ಹಬ್ಬಿಸುವವು ಪ್ಲೇಗ್‌ಗ್ರಸ್ತ ಇಲಿಗಳ ಸಂಪರ್ಕ ಬಂದ ಚಿಕ್ಕಾಡುಗಳು. ಯುರೋಪಿನಲ್ಲಿ ಇಂದು ಈ ರೋಗ ಹೆಚ್ಚು ಕಡಿಮೆ ನಿರ್ನಾಮವಾಗಿದ್ದರೂ ಭಾರತವನ್ನೊಳಗೊಂಡು ಏಶಿಯ ಮತ್ತು ಆಫ್ರಿಕದ ಹಲ ಭಾಗಗಳಲ್ಲಿ ಇನ್ನೂ ಸಾಕಷ್ಟು ಮೆರೆಯುತ್ತಿದೆ.

ತ್ಸೆತ್ಸೆ ನೊಣವೆಂಬ ಒಂದು ಜಾತಿಯ ನೊಣವು ಆಫ್ರಿಕದ ಉಷ್ಣವಲಯದಲ್ಲಿ ಭಯಾನಕ ರೋಗಗಳ ವಾಹನವಾಗಿದೆ. ಆಫ್ರಿಕದ ಸಹರಾ ಮರುಭೂಮಿಯ ದಕ್ಷಿಣ ಸೀಮೆಯಿಂದ ಜೂಲುನಾಡಿನ ವರೆಗೆ ೪೫ ಲಕ್ಷ ಚದರ ಮೈಲು ಪ್ರದೇಶದಲ್ಲಿ ಕಂಟಕಪ್ರಾಯವಾಗಿರುವ ನಿದ್ರಾರೋಗವು ತ್ಸೆತ್ಸೆ ನೊಣದ ಮೂಲಕವೇ ಹಬ್ಬುತ್ತದೆ. ಅದು ತಗಲಿದವರಲ್ಲಿ ಒಂದು ಬಗೆಯ ನಿತ್ರಾಣ, ನಿರುತ್ಸಾಹ ಪ್ರಾರಂಭವಾಗಿ ಕೊನೆಗೆ ಅವರು ನಿದ್ರೆಯಂಥ ದೀರ್ಘ ತಂದ್ರಾವಸ್ಥೆಯಲ್ಲಿ ಪ್ರಾಣ

ಬಿಡುತ್ತಾರೆ. ಅವರ ಮೃತ್ಯು ಭೀಕರವಾಗಿದೆ.

ಆಂಕೋಸರ್ಕಿಯಾಸಿಸ್ ಎಂಬ ಕುರುಡು ರೋಗ ಕೂಡ ತ್ಸೆತ್ಸೆ ನೊಣದ ಪ್ರಸಾದವೇ. ಆಫ್ರಿಕ ಮತ್ತು ದಕ್ಷಿಣ ಅಮೇರಿಕಗಳಲ್ಲಿ ಸುಮಾರು ಎರಡು ಕೋಟಿ ಜನರು ಈ ರೋಗದ ಸಂತತ ಭೀತಿಯಲ್ಲಿರುತ್ತಾರೆ. ಇದಕ್ಕೆ ತುತ್ತಾದವರ ಕಣ್ಣು ಮಂಜಾಗುತ್ತ ಬಂದು ಮಧ್ಯ ವಯಸ್ಸಿನಷ್ಟು ಹೊತ್ತಿಗೆ ಪೂರ್ತಿ ಕುರುಡಾಗಿ ಬಿಡುತ್ತದೆ. ಈ ರೋಗದ ದೆಸೆಯಿಂದ ನ್ಯಾಸಾಲಂಡಿನ (ಆಫ್ರಿಕ) ಒಂದು ನದೀ ಕಣಿವೆಗೆ ಕುರುಡರ ಕಣಿವೆಯೆಂದೇ ಹೆಸರು ಬಿದ್ದಿದೆ.

ಕೀಟಕಗಳಿಂದ ಹಬ್ಬಿಸಲ್ಪಡುವ ರೋಗಗಳ ಯಾದಿ ಇಲ್ಲಿಗೇ ಮುಗಿಯಲಿಲ್ಲ. ಇವು ಪ್ರಸಾರದ ಪ್ರಮಾಣ ಮತ್ತು ಪರಿಣಾಮದ ಭಯಂಕರತೆಯಿಂದ ಮುಖ್ಯವೆನಿಸಿದವು ಮಾತ್ರ. ಆನೆಕಾಲು, ಬಾರಿಜ್ವರ ಮೊದಲಾದ ಇನ್ನೂ ಎಷ್ಟೋ ರೋಗಗಳ ಜಂತುಗಳು ಸೊಳ್ಳೆ, ನೊಣ, ಚಿಕ್ಕಾಡು ಇತ್ಯಾದಿ ಕೀಟಗಳಿಂದಲೇ ಹಬ್ಬುವವು.

ಈ ಮಾರಿಗಳ ವಿರುದ್ಧ ಏನು ಕ್ರಮಗಳು ಯೋಜಿಸಲ್ಪಟ್ಟಿವೆ? ಎಂದು ನಿಮಗೆ ಕುತೂಹಲ ವಿರಬಹುದು.

ಪ್ರಾಚೀನ ಕಾಲದಿಂದಲೂ ವೈದ್ಯಕೀಯ ಸಂಶೋಧಕರು ಪ್ರತೀಕಾರೋಪಾಯಗಳನ್ನು ಯತ್ನಿಸುತ್ತಲೇ ಇದ್ದಾರೆ. ಅವುಗಳಲ್ಲಿ ಕೆಲವು ತುಂಬ ಉಪಕಾರವನ್ನೂ ಮಾಡಿವೆ. ಮಲೇರಿಯಕ್ಕೆ ಸಿಂಕೋನ ಗಿಡದ ಕ್ವಿನೈನ್ ಉತ್ತಮ ಪ್ರತೀಕಾರವೆಂಬ ಶೋಧವನ್ನು ಉಲ್ಲೇಖಿಸಬಹುದು. ಕ್ವಿನೈನ್ ಶೋಧವಾಗದಿದ್ದರೆ ಬಿಳಿ ಮನುಷ್ಯನು ಭಾರತದ ಮೇಲೆ ಪ್ರಭುತ್ವ ಸ್ಥಾಪಿಸಲಿಕ್ಕೇ ಸಮರ್ಥನಾಗುತ್ತಿದ್ದಿಲ್ಲೆಂದು ಹೇಳಲಾಗಿದೆ.

ಆದರೆ ಇವೆಲ್ಲ ಪ್ರತೀಕಾರೋಪಾಯಗಳಲ್ಲಿ ಒಂದು ದೊಡ್ಡ ಹುಳುಕಿತ್ತು. ಅವು ವೈಯಕ್ತಿಕ ಉಪಾಯಗಳಾಗಿದ್ದವು. ರೋಗವು ಪಿಡುಗಿನ ರೂಪದಲ್ಲಿದ್ದಾಗ ಎಷ್ಟು ಪರಿಣಾಮಕರ ಔಷಧವನ್ನಾದರೂ ಲಕ್ಷಗಟ್ಟಳೆ ಜನರಲ್ಲಿ ಹಂಚಿ ಚಿಕಿತ್ಸೆ ನಡೆಸುವುದು ವ್ಯವಹಾರದಲ್ಲಿ ಅಶಕ್ಯವಾಗಿದ್ದುದು ಅನುಭವಕ್ಕೆ ಬಂತು.

ಆದರೆ ಇಂದು ಅನೇಕ ದೇಶಗಳಲ್ಲಿ ಈ ಪಿಡುಗುಗಳು ಪೂರ್ತಿ ಇಲ್ಲವೆ ಅರ್ಧಮರ್ಧ ನಿಗ್ರಹಿಸಲ್ಪಟ್ಟಿವೆ. ಇದು ಎರಡು ಮಹತ್ವದ ಶೋಧಗಳ ಫಲವಾಗಿ ಶಕ್ಯವಾಯಿತು.

ಮೊದಲನೆಯದು ಈ ರೋಗಗಳ ಪ್ರಸಾರದ ಸರಿಯಾದ ತಿಳಿವಳಿಕೆ ಬಂದದ್ದು. ರೋಗಗಳು ಜೀವಾಣುಗಳಿಂದ ಉಂಟಾಗುತ್ತವೆಂಬ ತರ್ಕ ಮೊದಲಿಂದಲೂ ಇದ್ದರೂ ಅವು ಹೇಗೆ ಹಬ್ಬುತ್ತವೆಂಬುದು ತಿಳಿಯತೊಡಗಿದ್ದು ಈಗ ಒಂದು ಶತಕದಿಂದಲೇ. ಕೀಟಗಳ ದೇಹದಲ್ಲಿ ಇವು ಸೇರಿಕೊಂಡು ಮನುಷ್ಯರಿಗೆ ವರ್ಗಾಯಿಸಲ್ಪಡುತ್ತವೆಂದು ನಿಶ್ಚಿತವಾಗಿ ಕಂಡುಹಿಡಿಯಲಾಯಿತು. ಉದಾಹರಣೆಗೆ ಮಲೇರಿಯವು ಅನೋಫಿಲಿಸ್ ಜಾತಿಯ ಸೊಳ್ಳೆಗಳಿಂದಲೇ ಹಬ್ಬಿಸಲ್ಪಡುತ್ತದೆಂದು ಗೊತ್ತಾಯಿತು.

ರೋಗಿಗಳನ್ನು ವೈಯಕ್ತಿಕವಾಗಿ ಶುಶ್ರೂಷಿಸುವುದಕ್ಕಿಂತಲೂ ಈ ರೋಗಾಣುಗಳನ್ನು ಹೊತ್ತು ಸಾಗಿಸುವ ಕೀಟಗಳನ್ನು ಸಾಮೂಹಿಕವಾಗಿ ನಾಶಪಡಿಸುವುದೇ ಪಿಡುಗುಗಳನ್ನು ತಡೆಯುವ ವ್ಯವಹಾರ್ಯ ಉಪಾಯವೆಂದು ಆಗ ಸ್ಪಷ್ಟವಾಯಿತು. ಬಹಳ ಪರಿಶ್ರಮದಿಂದ, ವಿಶಿಷ್ಟ ರೋಗಗಳನ್ನು ಸಾಗಿಸುವ ಕೀಟಗಳ ಲಕ್ಷಣ ಹಾಗು ವಾಸಸ್ಥಾನಗಳನ್ನೂ ಶೋಧಿಸಲಾಯಿತು.

ಡಿ. ಡಿ. ಟಿ. ಮೊದಲಾದ ಕೀಟ ನಾಶಕಗಳ ಶೋಧ ಎರಡನೇ ಮಹಾಸಿದ್ಧಿಯಾಗಿತ್ತು. ಇವು ಇಲ್ಲದಿದ್ದರೆ ರೋಗವಾಹಕ ಕೀಟಗಳ ಸಾಮೂಹಿಕ ನಾಶ ಕಲ್ಪನಾತೀತವಾಗಿತ್ತು. ಮನುಷ್ಯನಿಗೆ ಹಾನಿ ಮಾಡದೆ ಕ್ರಿಮಿಕೀಟಗಳನ್ನು ಅಗ್ಗ ದರದಲ್ಲಿ ನಾಶ ಮಾಡಬಲ್ಲ ಈ ಕೀಟನಾಶಕಗಳಿಂದ ರೋಗಪ್ರಸಾರಕ ಕೀಟಗಳನ್ನು ಅವುಗಳ ಮೂಲ ವಸತಿಯಲ್ಲೇ ಸಮೂಲವಾಗಿ ನಾಶ ಮಾಡಲು ಸಾಧ್ಯವಾಯಿತು.

ಈ ಸಂಶೋಧನೆಗಳಿಂದ ಪಿಡುಗುಗಳ ಹಾವಳಿಯಿಂದ ಮನುಷ್ಯಕುಲವನ್ನು ಪೂರ್ತಿ ವಿಮೋಚಿಸಲು ಈಗ ಸಾಧ್ಯವಾಗಿದೆ. ಎರಡನೇ ಮಹಾಯುದ್ಧಾನಂತರ ಈ ಕಾರ್ಯವು ಅನೇಕ ದೇಶಗಳಲ್ಲಿ, ವಿಶೇಷವಾಗಿ ಸಂ. ರಾ. ಸಂಘದ ಆರ್ಥಿಕ ಸಂಸ್ಥೆಗಳ ನೆರವಿನಿಂದ ಭರದಿಂದ ಸಾಗಿದೆ. ವಿಮಾನದಿಂದ ಹಿಡಿದು ಎಲ್ಲ ಆಧುನಿಕ ವಾಹನಗಳೂ ಈ ಕಾರ್ಯಕ್ಕೆ—ದುರ್ಗಮ ಪ್ರದೇಶಗಳಲ್ಲಿರುವ ಕೀಟಾಶ್ರಯಗಳ ಮೇಲೆ ಡಿ ಡಿ ಟಿ ಸಿಂಪಡಿಸುವುದಕ್ಕೆ—ಯೋಜಿಸಲ್ಪಟ್ಟಿವೆ.

ಈ ಯತ್ನ ಹೀಗೇ ಸಾಗಿದರೆ ವಿಶೇಷವಾಗಿ ಸೊಳ್ಳೆ ಮತ್ತು ನೊಣಗಳಿಂದ ಹಬ್ಬುವ ರೋಗಗಳ ಸಮೂಲೋತ್ಪಾಟನವು ಕಾಲಾಂತರದಲ್ಲಿ ಸಾಧಿಸಲ್ಪಡಲು ಯಾವ ಅಡ್ಡಿಯೂ ಕಾಣುವುದಿಲ್ಲ.

ಆಗ ಮಾನವ ಜಾತಿಯ ಇತಿಹಾಸದಲ್ಲಿ ಹೊಸ ಅಧ್ಯಾಯವೇ ಪ್ರಾರಂಭವಾದೀತು. ರೋಗಜಂತುಗಳ ಬೆಳವಣಿಗೆಗೆ ಪ್ರತಿಕೂಲವಾದ ಸಮಶೀತೋಷ್ಣ ಹಾಗು ಶೀತ ಪ್ರದೇಶಗಳಲ್ಲಿ ಮಾತ್ರ ಈವರೆಗೆ ವೇಗದಿಂದ ನಾಗರಿಕತೆ ಬೆಳೆದಿದೆ. ಇನ್ನು ಅದು ಅಲ್ಲಿಗೆ ಮೀಸಲಾಗಿರಬೇಕಿಲ್ಲ. ರೋಗಗಳ ಆಗರವಾಗಿದ್ದ ಉಷ್ಣ ದೇಶಗಳಲ್ಲಿ ತಾಳಿಕೆಯುಳ್ಳ ನಾಗರಿಕತೆಗಳು ಬೆಳೆಯಬಹುದು. "ಕತ್ತಲಿನ ಆಫ್ರಿಕ" ಕತ್ತಲಾಗಿ ಉಳಿಯಬೇಕಾಗಲಿಕ್ಕಿಲ್ಲ.



## ಆರೋಪಿ—ಸೊಳ್ಳೆ !

ಮಲೇರಿಯಾ ಜ್ವರಕ್ಕೂ ಸೊಳ್ಳೆಗಳಿಗೂ ಸಂಬಂಧವಿರಬೇಕೆಂದು ಮೊಟ್ಟಮೊದಲು ತರ್ಕಿಸಿದವನು ಪ್ರಾಚೀನ ಹಿಂದೂ ವೈದ್ಯನಾದ ಸುಶ್ರುತನು. ೧೮೮೦ರಲ್ಲಿ ಅಲ್ಜೀರಿಯದಲ್ಲಿ ಫ್ರೆಂಚ ಸೈನ್ಯದ ಡಾಕ್ಟರನಾಗಿದ್ದ ಚಾರ್ಲಸ್ ಲಾವರಾನನು ಮಲೇರಿಯದ ಜಂತುವನ್ನು ಮನುಷ್ಯರಕ್ತದಲ್ಲಿ ಕಂಡುಹಿಡಿದನು. ಆವನಿಗೆ ೧೯೦೭ರಲ್ಲಿ ನೋಬೆಲ್ ಬಹುಮಾನ ಬಂತು. ೧೮೭೯ರಲ್ಲಿ ಪೆಟ್ರಿಕ ಮೇಸನ್ನನೆಂಬ ಸ್ಕಾಟ್ಲೆಂಡದ ವೈದ್ಯನು ಚೀನದಲ್ಲಿದ್ದಾಗ ಆನೆಕಾಲು ರೋಗವನ್ನು ಸೊಳ್ಳೆಗಳೇ ಹಬ್ಬಿಸುವವೆಂದು ಕಂಡುಹಿಡಿದ ನಂತರ ಮಲೇರಿಯ ಜಂತುವನ್ನೂ ಅವೇ ಹಬ್ಬಿಸುತ್ತಿರಬೇಕೆಂದು ಊಹಿಸಿ, ಆದನ್ನು ತೋರಿಸಿಕೊಟ್ಟನೆಂದು ಹೇಳಲಾಗಿದೆ.

ಸೊಳ್ಳೆಗಳ ಅಪರಾಧವನ್ನು ನಿಸ್ಸಂದಿಗ್ಧವಾಗಿ ಸ್ಥಾಪಿಸಿದವನೆಂದರೆ (೧೯೦೨ರಲ್ಲಿ ನೋಬೆಲ್ ಬಹುಮಾನ ಪಡೆದ) ರೊನಾಲ್ಡ ರಾಸನೆಂಬ ರೋಗಜ್ಞನು. ಅವನು ಭಾರತದಲ್ಲಿ ನಡೆಸಿದ ದೀರ್ಘ ಸಂಶೋಧನೆಯಿಂದ ೧೮೯೭ರಲ್ಲಿ ಸೊಳ್ಳೆಗೂ ಮಲೇರಿಯಕ್ಕೂ ಇದ್ದ ಸಂಬಂಧ ನಿರ್ಧಾರವಾಗಿ ಅನಾಫಿಲಿಸ್ ಜಾತಿಯ ಸೊಳ್ಳೆಯೇ ಆಪರಾಧಿಯೆಂದು ಸಿದ್ಧವಾಯಿತು. ಪ್ರತ್ಯೇಕವಾಗಿ ಸಂಶೋಧನೆ ನಡೆಸಿದ ಇಟಲಿಯ ಜ್ಯಾವನಿ ಗ್ರಾಸಿಯೆಂಬ ಪ್ರೊಫೆಸರನೂ ೧೮೯೮ರಲ್ಲಿ ಸ್ವತಂತ್ರವಾಗಿ ಇದೇ ತೀರ್ಮಾನಕ್ಕೆ ಬಂದನು.

ಸೊಳ್ಳೆಗಳು ಧಾರಾಳವಾಗಿರುವಲ್ಲಿ ಒಬ್ಬ ಮನುಷ್ಯನನ್ನು ಬತ್ತಲೆಯಾಗಿ ಬಿಟ್ಟರೆ ೧೦೫ ನಿಮಿಷಗಳಲ್ಲಿ ಅವನ ದೇಹದ ರಕ್ತವನ್ನೆಲ್ಲ ಅವು ಹೀರಬಲ್ಲವಂತೆ !

ಅಪರಾಧಿ ಜನಾಂಗವೊಂದನ್ನು ಸುಧಾರಿಸುವ ಒಂದು ಯತ್ನದ ಕಥೆ

# ಲೋಢಾ ಜನರ ನವಜೀವನ ಯಾತ್ರೆ

"ಕುರುಕ್ಷೇತ್ರ" ಮಾಸಿಕದಿಂದ

ಶಾಂತಿಗಡಕ್ಕೆ ಪಶ್ಚಿಮ ಬಂಗಾಲದಲ್ಲಿ ಒಂದು ಹಳ್ಳಿಯೆಂಬ ಸ್ಥಾನಮಾನ ಇನ್ನೂ ಬಂದಿಲ್ಲ. ಆದರೆ ಅದರ ಹೆಸರು ಒಂದು ನಮ್ರ ಆದರೆ ಧೀರ ಪ್ರಯತ್ನದ ಸಂಕೇತವಾಗಿದೆ.

ಪಶ್ಚಿಮ ಬಂಗಾಲದ ಝುರಗ್ರಾಮ ಸಮಾಜ ವಿಕಾಸ ಯೋಜನೆಯ ಕ್ಷೇತ್ರದಲ್ಲಿ ಪ್ರಾರಂಭವಾದ ಈ ಪ್ರಯೋಗವು, ಸುಧಾರಿಸುವ ಆಸೆಯೇ ಇಲ್ಲೆಂದು ಕೈಬಿಡಲಾದ ನಿಕೃಷ್ಟ ಮನುಷ್ಯ ಜನಾಂಗವೊಂದನ್ನು ಉದ್ಧರಿಸುವ ಸಾಹಸವಾಗಿದೆ.

ಮಿದನಾಪುರದ ಝುರಗ್ರಾಮದಲ್ಲಿರುವ "ಲೋಢಾ" ಜನಾಂಗವು ಬಹಳ ಕಾಲದಿಂದ ಸಮಾಜಕ್ಕೂ ಸರಕಾರಕ್ಕೂ ಸೇರಿಯೇ ಗಡಚು ಸಮಸ್ಯೆಯಾಗಿತ್ತು. ಈ ಜನರು ಕಾಯದೆ ಸುವ್ಯವಸ್ಥೆಯ ನಿಯಮಗಳನ್ನು ಹಟದಿಂದ ಧಿಕ್ಕರಿಸಿದವರು. ಅವರ ಕಿಡಿಗೇಡಿತನವು ನಾಗರಿಕರಿಗೆ ನಿತ್ಯ ಭಯ, ನಿತ್ಯ ಚಿಂತೆಯ ಆಗರವಾಗಿತ್ತು. ದುರ್ಗಮ ಅರಣ್ಯದ ಗರ್ಭದಲ್ಲಿ ವಾಸಿಸುತ್ತಿದ್ದ ಅವರನ್ನು ಅವರ ಅನಿಷ್ಟ ವ್ಯವಸಾಯದಿಂದ ಪರಾವೃತ್ತಗೊಳಿಸುವ ಯತ್ನಗಳೆಲ್ಲವನ್ನೂ ಅವರು ಯಶಸ್ವಿಯಾಗಿ ಮಣ್ಣುಗೂಡಿಸಿದ್ದರು. ಅವರ ಕಾಡು ಸ್ವಭಾವದ ಬೇರುಗಳು ಕೀಳಲಾರದಷ್ಟು ಆಳವಾಗಿದ್ದವು.



ಲೋಢರು ಬಹಳ ಪುರಾತನ ಜನಾಂಗ. ಅವರು ಇಂದು ದುಷ್ಕರ್ಮಿಗಳಿದ್ದರೂ ಅನಾದಿಯಲ್ಲಿ ಅವರದು ಉಜ್ವಲ ಇತಿಹಾಸವಾಗಿತ್ತು. ಆರ್ಯರು ಬರುವುದಕ್ಕಿಂತ ಮೊದಲೇ ಇಲ್ಲಿದ್ದ "ಶಬರ"ರೆಂಬ ವನವಾಸಿ ಬೇಡ ಜನಾಂಗದವರು ತಾವೆಂದು ಅವರು ಹೇಳಿಕೊಳ್ಳುತ್ತಾರೆ. ಓಡಿಸಾದಿಂದ ಅವರು ಮಿದನಾಪುರಕ್ಕೆ ವಲಸೆ ಬಂದರು. ಒಬ್ಬ ಬ್ರಾಹ್ಮಣನು ಈ ಜನಾಂಗದ ರಾಣಿಯನ್ನೂ ದೇವತೆಯನ್ನೂ ಅವರಿಂದ ಅಪಹರಿಸಿದನೆಂದೂ ಅನಂತರ ಅವರು ಮಿದನಾಪುರಕ್ಕೆ ವಲಸೆ ಬಂದರೆಂದೂ ದಂತಕಥೆ ಇದೆ.

ಮಿದನಾಪುರಕ್ಕೆ ಬಂದ ಆರಂಭದಲ್ಲಿ ಲೋಢರು ಸುಖಿಗಳೇ ಆಗಿದ್ದರು. ಅವರಿಗೆ ಅರಣ್ಯವೆಂದರೆ ಪ್ರೀತಿ—ಇಲ್ಲಿ ಬೇಕಾದಷ್ಟು ಅರಣ್ಯವಿತ್ತು. ಆದರೆ ಅರಣ್ಯಗಳನ್ನು ಕಡಿದು ಊರುಗಳು ಬೆಳೆಯತೊಡಗಿದಾಗ ಅವರ ಕಷ್ಟ ಪ್ರಾರಂಭವಾಯಿತು. ಅವರ ಜೀವನಾಧಾರವೇ ಇಲ್ಲದಾಗಿ ಅವರು ಹೊಸ ಜೀವನೋಪಾಯಗಳನ್ನು ಹುಡುಕಬೇಕಾಯಿತು.

ಆದರೆ ಅವರಿಗೆ ಬಾಹ್ಯಪ್ರಪಂಚದ ಅರಿವೇ

ಇದ್ದಿಲ್ಲ. ಪುರಾತನದಿಂದ ಅವರು ಕಾಪಾಡಿಕೊಂಡಿದ್ದ ಸಾಮೂಹಿಕ ಜೀವನ ಶಿಥಿಲವಾಯಿತು. ಎಲ್ಲೆಡೆಗಳಿಂದಲೂ ಅವರು ಒಡಕನ್ನೆದುರಿಸಬೇಕಾಯಿತು. ಬಡತನದ ಬವಣೆ ಅವರಿಗೆ ಉಪವಾಸವನ್ನು ತಂದಿತು. ಅಡವಿಯ ಗಡ್ಡೆ-ಗೆಣಸು ಬೇರುಗಳಿಂದ ಹೊಟ್ಟೆತುಂಬಿಸಿಕೊಳ್ಳುವ ಪಾಡು ಬಂತು. ಹಸಿವೆಗೆ ಧರ್ಮದ ಗುರುತಿಲ್ಲ; ನ್ಯಾಯಾನ್ಯಾಯದ ಭಯವಿಲ್ಲ. ಅವರು ಕಳವು, ಕನ್ನಬಡಕತನ, ತುಡುಗುಗಳಂಥ ಸಮಾಜಘಾತಕ ಚಟುವಟಿಕೆಗಳಿಗೆ ಶರಣುಹೋದರು.

ಪಟ್ಟಣದ ಜನರ ಲೋಭವು ಅವರ ಕಷ್ಟಜೀವನವನ್ನು ಕಷ್ಟತರವಾಗಿ ಮಾಡಿತು. ಕೆಲ ಲೋಢರು ಕೂಲಿ ಕೆಲಸಕ್ಕಾಗಿ ಪಟ್ಟಣಗಳಿಗೆ ಬಂದರು. ಆದರೆ ಲೆಕ್ಕಪಕ್ಕ ಗೊತ್ತಿಲ್ಲದ ಅವರನ್ನು ಪಟ್ಟಣಿಗರು ವಂಚಿಸುತ್ತಿದ್ದರು. ಅವರು ತಕರಾರು ತೆಗೆದರೆ ಅವರ ಮೇಲೆ ಕಳವಿನ ಸುಳ್ಳು ಅಪವಾದ ಹೊರಿಸಿ ಅಧಿಕಾರಿಗಳಿಗೆ ದೂರು ಕೊಡುತ್ತಿದ್ದರು. ಮೊದಲೇ ಕೆಟ್ಟ ಹೆಸರಿದ್ದ ಲೋಢರಿಗೆ ನ್ಯಾಯ ಸಿಗುವುದು ಹೇಗೆ ಶಕ್ಯ?

ಇದು ಲೋಢಾ ಜನರ ಜೀವನದ ಚಿತ್ರವಾಗಿತ್ತು. ದ್ವೇಷ ಅಲಕ್ಷಗಳ, ಸಂಶಯ ಅವಿಶ್ವಾಸಗಳ ಹೊಲಸು ಹವೆಯಲ್ಲಿ ಅವರು ಮಧ್ಯಾಹ್ನ ದರಿದ್ರರಾಗಿ ಬಾಳುತ್ತಿದ್ದರು.

ಅವರನ್ನು ಹಿಡಿತದಲ್ಲಿಡಲು ಯೋಜಿಸಿದ ಕಾಯದೆಗಳು ದಂಡನೀತಿಯವಾಗಿದ್ದವಲ್ಲದೆ ಸುಧಾರಣೆಯ ಉದ್ದೇಶವಿಟ್ಟುಕೊಂಡಿದ್ದಿಲ್ಲ. ಅವುಗಳಿಂದ ಅವರ ಎದೆ ಮತ್ತಷ್ಟು ಕಲ್ಲಾಗಿ ಅವರ ಅನೈತಿಕ ಚರ್ಯೆ ದೃಢಪಟ್ಟಿತೇ ಹೊರತು ಬೇರೆ ಪ್ರಯೋಜನವಾಗಲಿಲ್ಲ. ಈ ಕಲ್ಲೆದೆಗಳನ್ನು ಕರಗಿಸಲು ಸಹಾನುಭೂತಿಯ ಆರ್ದ್ರತೆ ಬೇಕಾಗಿತ್ತು. ಅವರನ್ನು ಹೆಚ್ಚು ಸ್ನಿಗ್ಧ ವಾತಾವರಣದಲ್ಲಿ ಪುನರ್ನಿವೇಶನಗೊಳಿಸುವುದೊಂದೇ ಉಪಾಯವಾಗಿತ್ತು.

ಇದಕ್ಕೆ ಸ್ವಾರ್ಥತ್ಯಾಗಿ, ಸತತೋದ್ಯೋಗಿ, ಅವಿಚಲಿತ ನಾಯಕತ್ವದ ಆವಶ್ಯಕತೆಯಿತ್ತು.

ದೈವಯೋಗದಿಂದ ಆ ನಾಯಕತ್ವ ಬಂತು. ಗಾಂಧೀ ತತ್ವದ ನಿಷ್ಠಾವಂತ ಅನುಯಾಯಿಯಾದ ನಿರ್ಮಲ ಘೋಷರು ಬಿಹಾರದ ಮಾನಭೂಮಿಯಲ್ಲಿ ಆದಿವಾಸಿ ಜನಾಂಗಗಳ ಸೇವೆಗೆಂದು ಹೊರಟಿದ್ದರು. ಝುರಗ್ರಾಮಕ್ಕೆ ಅವರು ಬಂದಾಗ ಅವರಿಗೆ ಒಂದು ರಕ್ಷಕ ದಲ ಎದುರಾಯಿತು. ಅದರ ಉದ್ದೇಶ ಲೋಢರ ಕಾಯಕಗಳನ್ನು ಹತ್ತಿಕ್ಕುವದಾಗಿತ್ತೆಂದು ಅವರು ಕೇಳಿದರು. ಲೋಢರ "ಸಾಹಸ"ಗಳ ಕತೆ ಕೇಳಿ ಘೋಷರಿಗೆ ಅಚ್ಚರಿಯಾಯಿತು.

"ಈ ಜನರ ವಾಸಸ್ಥಾನಗಳಿಗೇ ಹೋಗಿ ಅವರನ್ನು ಸುಧಾರಿಸಬಾರದೇಕೆ?" ನಿರ್ಮಲ ಘೋಷರು ಕೇಳಿದರು.

"ಹುಚ್ಚು ಹುಚ್ಚು ಮಾತಾಡಬೇಡಿರಿ. ಅವರ ಸ್ವಭಾವದ ಪರಿಚಯ ನಿಮಗಿದ್ದರೆ ಹೀಗೆ ಕೇಳುತ್ತಲೇ ಇರಲಿಲ್ಲ. ಅವರು ಸುಧಾರಣೆಗೆ ಮೀರಿದ ಜನ" ಎಂದು ಉತ್ತರ ಬಂತು.

ಘೋಷರಿಗೆ ಚಮತ್ಕಾರವೆನಿಸಿತು. ಈ ಜನರ ನಡುವೆ ಸೇವೆ ಸಲ್ಲಿಸುವ ಆತುರದಿಂದ ಅವರು ಪುಲಕಿತರಾದರು.

೧೯೫೩ ಅಗಸ್ಟ ೨೯ ನೇ ದಿನ ಝುರಗ್ರಾಮದ ಕೆಲ ವಿದ್ಯಾರ್ಥಿಗಳ ಸಂಗಡ ನಿರ್ಮಲಘೋಷರು ಔಲಗೇರಿಯಾಕ್ಕೆ ಬಂದರು. ಇಲ್ಲಿ ಝುರಗ್ರಾಮ ಸಮಾಜ ವಿಕಾಸ ಕ್ಷೇತ್ರದ ಹೊರ ವಲಯದಲ್ಲಿ ಲೋಢರ ಬಸ್ತಿಯೊಂದಿತ್ತು. ಲೋಢರು ಅವರನ್ನು ಸ್ವಾಗತಿಸುವ ಮನೋಭಾವದಲ್ಲಿರಲಿಲ್ಲ. ಈ ಮನುಷ್ಯ ಏನೋ ಕುತಂತ್ರ ಹೂಡಲು ಬಂದಿರಬಹುದೇ? ಎಂದು ಅವರು ಶಂಕಿತರಾದರು.

ನಿರ್ಮಲ ಘೋಷರು ತಮ್ಮ ಸಹಜ ಮೃದು ವಚನಗಳಿಂದ ಅವರನ್ನು ಮಾತಾಡಿಸಿದರು. ಇಂಥ ಸೌಜನ್ಯ ಅವರಿಗೆ ಹೊಸ ಅನುಭವ. ಅದು ನಂಬಲಾರದಷ್ಟು ಚೆನ್ನಾಗಿತ್ತು. ಘೋಷರು ತಮ್ಮ ಸರಳ ತರ್ಕವನ್ನು ಮುಂದುವರಿಸಿದರು. ಈ ತುಚ್ಛ ಜೀವನಕ್ಕಿಂತ ಭಿನ್ನವಾದ ಒಳ್ಳೆ ಬಾಳು ಸಾಧ್ಯವಿದೆ. ಅದನ್ನೇಕೆ ಆಶ್ರಯಿಸಬಾರದು? ಎಷ್ಟೋ ದಿನಗಳ ವಾದದ ನಂತರ

ಕೇಳುವವರ ತಲೆಗಳು ಆಡತೊಡಗಿದವು. ನವ ಜೀವನದ ಸಂದೇಶ ಸ್ವೀಕಾರದ ಪ್ರಥಮ ಸಂಕೇತವಾಗಿತ್ತದು. ಅವರ ಮುದ್ರಿತ ಮನಸ್ಸು ನಸುವೆ ತೆರೆದಂತಾಯಿತು.

ಲೋಢರು ಮುಂದೆ ಬರತೊಡಗಿದ್ದರಿಂದ ಅವರ ಪುನರ್ನಿವೇಶನಕ್ಕೊಂದು ವ್ಯವಸ್ಥಿತ ಯೋಜನೆ ಎಂದಿಗಿಂತಲೂ ಅವಶ್ಯವೆನಿಸಿತು. ಸುದೈವದಿಂದ ಅವರಿಗೆ ಚೈತನ್ಯಶೀಲ ವ್ಯಕ್ತಿಯಾದ ಅಲ್ಲಿನ ಜಿಲ್ಹಾ ಪೋಲೀಸ ಮುಖ್ಯಾಧಿಕಾರಿಯೂ ಸ್ಥಾನಿಕ ಸಮಾಜ ವಿಕಾಸ ಯೋಜನೆಯ ತರುಣ ಮುಖ್ಯಾಧಿಕಾರಿಯೂ ಬೆಂಬಲವಾದರು. ಹರಿಜನ ಸೇವಕ ಸಂಘದ ಪ್ರೊ. ಪಿ. ಆರ್. ಸೇನ ಹಾಗೂ ಗಾಂಧಿ ಶಿಷ್ಯರೂ ಮಾನವ ಶಾಸ್ತ್ರಜ್ಞರೂ ಆದ ಪ್ರೊ. ಎನ್. ಕೆ. ಬೋಸರೂ ಸಹಾಯಕ್ಕೆ ಬಂದರು.

ಎಲ್ಲರೂ ಸೇರಿ ಲೋಢರಿಗಾಗಿ ಒಂದು ಯೋಜನೆ ತಯಾರಿಸಿದರು.

ಮೊದಲನೆಯದಾಗಿ ಅಲ್ಲಲ್ಲಿ ಚದರಿದ್ದ ಲೋಢರನ್ನೆಲ್ಲ ಸೇರಿಸಿ ಒಂದೆಡೆ ಸಮಾಜವಾಗಿ ವಾಸಿಸುವಂತೆ ಮಾಡಬೇಕು. ಅನಂತರ ಅವರಿಂದ ಸ್ವಂತಕ್ಕಾಗಿ ಮನೆ, ರಸ್ತೆ, ಭಾವಿ, ಹಟ್ಟಿಗಳನ್ನು ಸಾಮೂಹಿಕ ಯತ್ನದಿಂದ ಕಟ್ಟಿಸಬೇಕು. ಮೂರನೆಯದಾಗಿ ಅವರನ್ನು ಮೊದಲು ಒಕ್ಕಲತನದಲ್ಲಿಯೂ ಅನಂತರ ತತ್ಸಂಬಂಧಿ ಉದ್ದಿಮೆಗಳಲ್ಲಿಯೂ ತೊಡಗಿಸಬೇಕು. ನಾಲ್ಕನೆಯದಾಗಿ ಅವರಿಗೆ ಶಿಕ್ಷಣ ಕೊಡಬೇಕು.

ಯೋಜನೆಯು ಸಿದ್ಧವಾಯಿತು. ಹೇಳಿದಂತೆ ದುಡಿಯಲು ಲೋಢರು ಸಿದ್ಧರಾದರು. ಅವರ ಹುರುಪು ಉಳಿಯುವಂತೆ ಕೂಡಲೆ ಅವರಿಗೇನಾದರೂ ಕೆಲಸ ಒದಗಿಸಬೇಕಾಗಿತ್ತು. ಸುದೈವ, ಮಿದನಾಪುರ ಜಿಲ್ಹಾ ಬೋರ್ಡಿನ ಒಂದು ರಸ್ತೆ ಕಾಂಟ್ರಾಕ್ಟು ಸಿಕ್ಕಿತು. ಲೋಢರು ಅದನ್ನು ಮಾಡಿ ಮುಗಿಸಿದರು. ಅವರು ಸಾಮೂಹಿಕವಾಗಿ ಮಾಡಿ ಮುಗಿಸಿದ ಕೆಲಸ ಅದೇ ಮೊದಲನೆಯದಾಗಿತ್ತು. ಅವರಲ್ಲಿ ಆತ್ಮವಿಶ್ವಾಸ ಉದ್ಭವಿಸಿತು

ಅತ್ತ ಪೋಲೀಸ ಅಧಿಕಾರಿ ಯಾವನೋ ಭೂಮಾಲಿಕನಿಂದ ಒಂದು ನೂರು ಎಕರೆ ಭೂಮಿಯನ್ನು ಹೆಸರಿನ ಪೂರ್ತಿ ಲಾವಣಿಗೆ ದೊರಕಿಸಿದನು. ಅದು ಬರಿ ೨೬ ಕುಟುಂಬಗಳಿಗೆ ನೆಲೆಸಲು ಸಾಲುವಷ್ಟಿತ್ತು. ಆದರೂ ಪ್ರಾರಂಭಕ್ಕೆ ಅದು ಧಾರಾಳವಾಯಿತು. ಪಶ್ಚಿಮ ಬಂಗಾಲ ಸರಕಾರದ ನೆರವೂ ಬಂತು.

೧೯೫೪ ಎಪ್ರಿಲಿನಲ್ಲಿ ಕಾರ್ಯಾರಂಭವಾಯಿತು. ಎಂದೂ ನೇಗಿಲಿನ ಮುಖ ಕಂಡಿರದ ಆ ಕಠೋರ ಭೂಮಿಯನ್ನು ಉತ್ತು ಬಿತ್ತಿದರು. ಭತ್ತ, ಗೋದಿ, ಕಾಳುಕಡಿಗಳ ಪೈರು ತಲೆಯೆತ್ತಿ ಗಾಳಿಯಲ್ಲಿ ಒಲೆದಾಡುವುದನ್ನು ಕಂಡ ಲೋಢರು ಹಿಗ್ಗಿ ಹೀರೇಕಾಯಿಯಾದರು.

ಮನೆಗಳ ಸಮಸ್ಯೆ ಕಠಿನವಾಗಿತ್ತು. ಮಳೆಯಲ್ಲಿ ನನೆಯುತ್ತ ಚಳಿಯಲ್ಲಿ ನಡುಗುತ್ತ ಎಲೆಮನೆಗಳಲ್ಲಿ ಮತ್ತು ಎಷ್ಟೋ ವೇಳೆ ಬಯಲಲ್ಲೇ ಬಾಳುವೆ ಮಾಡುತ್ತಿದ್ದವರವರು. ಅವರಿಗೆ ಸೌಕರ್ಯದ ಛಾಯೆಯನ್ನಲ್ಲದೆ ರಕ್ಷಣೆಯ ಭರವಸೆಯನ್ನು ಕೊಡುವ ಮನೆಗಳು ಬೇಕು. ಆದ್ದರಿಂದ ಪ್ರತಿ ಕುಟುಂಬಕ್ಕೂ ಮನೆ ಕಟ್ಟಲು ಒಂದು ತುಂಡು ಭೂಮಿ ಕೊಡಲಾಯಿತು. ೩೦ ಫೂಟಿನ ಕತ್ತರಿ ರಸ್ತೆಗಳ ಎರಡೂ ಪಕ್ಕಗಳಲ್ಲಿ ೧೪ ಫೂಟು ಉದ್ದ ೯ ಫೂಟಗಲದ ಸುಯೋಜಿತ ಹುಲ್ಲು ಹೊಚ್ಚಿದ ಮನೆಗಳನ್ನು ಅವರೇ ಕಟ್ಟಿಕೊಂಡರು.

ಲೋಢರಲ್ಲಿ ಸಾಮಾಜಿಕ ಜೀವನವನ್ನು ಬೆಳೆಸಲು ಮಾಡಿದ ಯತ್ನಗಳಿಗೆ ಯಶ ಸಿಕ್ಕಿದೆ. ಅವರಿಗೆ ತಮ್ಮ ವ್ಯವಹಾರಗಳನ್ನು ತಾವೇ ನಡೆಸಿಕೊಳ್ಳಲು ಕಲಿಸುವುದು ಕಠಿನವೇ ಆಯಿತು. ಅವರಲ್ಲಿ ಆತ್ಮಗೌರವ ಮತ್ತು ಗಂಭೀರ ಭಾವ ಬೆಳೆಸಲು ಅವರದೇ ಒಂದು ಮಂತ್ರಿಮಂಡಲ ಏರ್ಪಡಿಸಲಾಗಿದೆ. ಅದಕ್ಕೆ ಸಲಹೆ ಮತ್ತು ಅಮಲು ಬಜಾವಣೆ ಈ ಎರಡೂ ಅಧಿಕಾರಗಳಿದ್ದು ಅವಿಶ್ವಾಸ ಗೊತ್ತುವಳಿಗೆ ಅದು ಒಳಪಡುವದಿಲ್ಲ. ಅದರ ನಿರ್ಣಯವೇ ಕೊನೆಯದು ಮತ್ತು ಬಂಧಕ. ಅಪರೂಪ ಪ್ರಸಂಗಗಳಲ್ಲಿ ನಿರ್ಮಲ ಘೋಷರ

ಕವ ಆಪೀಲುಮಾಡಲೆಡೆಯಿದೆ. ಈ ಎಳೆಯ ಗಣರಾಜ್ಯದಲ್ಲಿ ಘೋಷರನ್ನು ಪ್ರೀತಿಯಿಂದ ಅಣ್ಣ, ಕಕ್ಕ, ತಂದೆ, ಮಗ ಎಂದು ಸಂಬೋಧಿಸಲಾಗುತ್ತಿದೆ.

ಈ ಮಂತ್ರಿಮಂಡಲದ ಸದಸ್ಯವರ್ಗ ಕುತೂಹಲಕರವಾಗಿದೆ. ಸುರೇಂದ್ರ ಶಬರ ಅದರ ಮುಖ್ಯಮಂತ್ರಿ. ಅವನಲ್ಲಿ ದೂರದೃಷ್ಟಿ, ಸಹಜ ಕುಶಾಗ್ರ ಬುದ್ಧಿ ಧಾರಾಳವಾಗಿದೆ. ಗುಹ್ನೆಗಳಲ್ಲಿ ಎತ್ತಿದ ಕೈಯೆನಿಸಿ ಹಲವು ಸಾರಿ ಸೆರೆಮನೆಯ ಅತಿಥಿಯಾಗಿದ್ದ ಬುಧಾ ಎಂಬವನು ಗೃಹಶಾಖೆಯಮಂತ್ರಿಯಾಗಿದ್ದಾನೆ. ಧೀರನೂ ಶಾಂತನೂ ಆದ ಗೋಲಕನು ನ್ಯಾಯ ಮತ್ತು ಒಕ್ಕಲತನ ಶಾಖೆಗಳನ್ನು ನೋಡಿಕೊಳ್ಳುತ್ತಾನೆ. ಸರ್ವೇಶ್ವರನು ಅವರ ಸಭೆಯ ಅಧ್ಯಕ್ಷ. ತನಗೆ ವಯಸ್ಸೆಷ್ಟಾಯಿತೆಂದು ಅವನಿಗೆ ಗೊತ್ತಿಲ್ಲ. ಹಿಂದೊಮ್ಮೆ ಹಾವಳಿಯೆಬ್ಬಿಸಿದ ಬಿರುಗಾಳಿಯಷ್ಟೇ ತನಗೂ ವಯಸ್ಸಾಯಿತೆಂದು ಮಾತ್ರ ಅವನು ಬಲ್ಲ. ಅದರ ಕಥೆಯನ್ನು ಎಳೆಎಳೆಯಾಗಿ ಬಿಡಿಸಿ ಹೇಳುವ ಅಧ್ಯಕ್ಷ ಸರ್ವೇಶ್ವರನ ಬಗ್ಗೆ ಲೋಢರಿಗೆಲ್ಲ ತುಂಬ ಗೌರವವಿದೆ. ಪ್ರತಿಯೊಬ್ಬ ಮಂತ್ರಿಗೂ ತನ್ನ ಸ್ಥಾನಮಾನದ ಬಗ್ಗೆ ಅಭಿಮಾನವೂ ಕರ್ತವ್ಯಗಳ ಬಗ್ಗೆ ಜಾಗೃತಿಯೂ ಇದೆ.

ಈ ಪ್ರಯೋಗಕ್ಕೆ ಇನ್ನೂ ಇಪ್ಪತ್ತು ತಿಂಗಳಾಗಿಲ್ಲ. ಅದು ಅಷ್ಟೇನೂ ಸುಲಭವಾಗಿರಲಿಲ್ಲ. ಹಣದ ಕೊರತೆಯು ತೊಡಕೊಂದೇ ಅಲ್ಲದೆ ಲೋಢರನ್ನು ಶೋಷಿಸಿ ಲಾಭಮಾಡಿಕೊಳ್ಳುತ್ತಿದ್ದ ಹಿತ ಸಂಬಂಧಗಳ ಪ್ರತ್ಯಕ್ಷ ಮತ್ತು ತೀವ್ರ ವಿರೋಧಕ್ಕೂ ಕೊರತೆಯಿದ್ದಿಲ್ಲ. ಆದರೆ ಸತ್ಕಾರ್ಯವು ಯಾವಾಗಲೂ ಒಂದು ಅಯಸ್ಕಾಂತ ಕ್ಷೇತ್ರವನ್ನುಂಟುಮಾಡುತ್ತದೆ. ಅದರ ಆಕರ್ಷಣೆಯು ವಿರೋಧವನ್ನು ಸಾವಕಾಶವಾಗಿ ಕುಗ್ಗಿಸುತ್ತದೆ. ಅಂದಿನ ವಿರೋಧಿಗಳಿಂದ ಈಗ ಸಹಕಾರವೇ ಬರುತ್ತಿದೆ.

ಶಾಂತಿಗಡದ ಲೋಢರ ಮನೋವೃತ್ತಿ ಪೂರ್ಣ ಪರಿವರ್ತನೆ ಹೊಂದಿದೆಯೆಂದು ಹೇಳುವುದು ಜಂಬದ ಮಾತಾದೀತು. ಬುದ್ಧಿಯನ್ನು ಪುನರ್ ರೂಪಿಸುವುದು ದೀರ್ಘಕಾಲದ ಕೆಲಸ. ಬಿರಡಿ ಒತ್ತಿದೊಡನೆ ಆಗುವ ಇಂದ್ರಜಾಲವದಲ್ಲ. ಪರಿವರ್ತನೆಯು ಹೊರಗಿನಿಂದ ಪ್ರೇರಿತವಾಗುವುದಕ್ಕಿಂತಲೂ ಒಳಗಿಂದ ಸ್ಫೂರ್ತವಾಗಬೇಕೆಂಬ ಧ್ಯೇಯವಿಟ್ಟುಕೊಳ್ಳಲಾಗಿದೆ. ಶಾಂತಿಗಡದ ಲೋಢರು ಕುಪ್ರಸಿದ್ಧ ಜನರ ಒಂದು ಗಡಣವಾಗಿದ್ದರು. ಅವರ ಮನಸ್ಸಿನ ಸೀಮೆಗಳನ್ನು ಅಳೆದು ಮನಶ್ಶಾಸ್ತ್ರೀಯ ಮತ್ತು ಸಾಮಾಜಿಕ ಗ್ರಹಿಕೆಗಳನ್ನು ದೈನಂದಿನ ಅನುಭವದ ಒರೆಗಲ್ಲಿಗೆ ಹಚ್ಚಲಾಗುತ್ತಿದೆ. ಇದು ದೀರ್ಘಾವಧಿ ಪ್ರಯೋಗವೇ ಸೈ.

ಶಾಂತಿಗಡದ ಪ್ರಯೋಗವು ಪತಿತ ಜನರನ್ನು ಉದ್ಧರಿಸಿ ಅವರ ಮನಸನ್ನು ತಿದ್ದಿ ಆರ್ಥಿಕ ಪಂಕದಿಂದ ರಕ್ಷಿಸುವ ಚಿಕ್ಕ ಆದರೆ ದಿಟ್ಟ ಯತ್ನವಾಗಿದೆ. ಅದು ಪೂರ್ತಿ ಸಫಲವಾದರೆ ಅಳಿವಿಲ್ಲದ ಮಾನವ ಸಂಪತ್ತಿಯನ್ನು ಕಟ್ಟಿ ಬೆಳಸಬಲ್ಲುದು. ಇದು ಕಠಿನ ಕಾರ್ಯ. ಆದರೆ ಅದು ಅದ್ಭುತ ಸಂಭಾವ್ಯತೆಗಳನ್ನೂ ಒಳಗೊಂಡಿದೆ.



ಮನುಷ್ಯನ ಮನೋವೃತ್ತಿ ಯಾವಾಗಲೂ ಜೇನ್ನೊಣದಂತೆ ಸತತೋದ್ಯೋಗಿಯೂ ಗುಣಗ್ರಾಹಿಯೂ ಆಗಿರಬೇಕು. ಅದರಲ್ಲಿ ನವಿಲಿನಂತೆ ಅಭಿಮಾನವೂ ಉಲ್ಲಾಸವೂ ಇರಬೇಕು. ಗರುಡನ ಮಹತ್ವಾಕಾಂಕ್ಷೆಯೂ ಕೋಗಿಲೆಯ ಕಲಾಭಿರುಚಿಯೂ ಇರಬೇಕು.

**ನಾಗರಿಕ ಭಾರತದಲ್ಲಿ ಅನಾಗರಿಕ ವರ್ತನೆ ಮಾಡುವ ಪುರುಷರ ಸಮಸ್ಯೆ**

# ಬೀದಿಯ ಕಾಮಣ್ಣರನ್ನು ಏನು ಮಾಡಬೇಕು ?

ಲೇಖಕ : " ಶ್ರೀನಿವಾಸ "



ತರುಣಿಯರು ಬೀದಿಯಲ್ಲಿ ಹೋಗುವಾಗ ಚೇಷ್ಟೆ ಮತ್ತು ಒಮ್ಮೊಮ್ಮೆ ಅದಕ್ಕೂ ಹೆಚ್ಚಿನ ಉಪಟಳ ಮಾಡುವ ಗಂಡಸರನ್ನು ಏನು ಮಾಡಬೇಕು? ನಮ್ಮ ಅನೇಕ ನಗರ ಪಟ್ಟಣಗಳಲ್ಲಿ ಈ ಪ್ರಶ್ನೆ ಸಾಕಷ್ಟು ಗಂಭೀರವಾಗಿದೆ. ಉತ್ತರ ಪ್ರದೇಶದ ಕೆಲ ಪಟ್ಟಣಗಳಲ್ಲಿ ಈ "ಬೀದಿಯ ಕಾಮಣ್ಣ"ಗಳ ಕುಚೇಷ್ಟೆ ಎಷ್ಟು ಹೆಚ್ಚಾಗಿದೆಯೆಂದರೆ ಅನೇಕ ಪಾಲಕರು, ತಮ್ಮ ಹೆಣ್ಣುಮಕ್ಕಳು ಸಾಲೆಗೆ ಹೋಗುವ-ಬರುವ ವೇಳೆಗೆ ಬೀದಿಗಳಲ್ಲಿ ಪೋಲೀಸ ತಂಡಗಳ ರಕ್ಷಣೆ ಬೇಡಿಪಡೆದಿದ್ದಾರೆ. ಮದ್ರಾಸಿನಲ್ಲಿಯೂ ಇಂಥ ಕಿಡಿಗೇಡಿತನ ಧಾರಾಳವಾಗಿದೆಯೆಂದು ಅಲ್ಲಿಂದ ಬರುವ ಸುದ್ದಿಗಳಿಂದ ತರ್ಕಿಸಬಹುದು.

ಪೋಲೀಸು ಸಂರಕ್ಷಣೆ ಸರಿ. ಆದರೆ ಇದು ಯಾವಾಗಲೂ ಲಭ್ಯವಾದೀತೆಂದಾಗಲಿ ಇಂಥ ಪಿಕಲಾಟಕ್ಕೆ ಪರಿಣಾಮಕರ ಔಷಧವಾದೀತೆಂದಾಗಲಿ ಹೇಳಬರುವುದಿಲ್ಲ. ಮುಂಬಯಿಯ ಕೂಲಿಕಾರ—ಆರೋಗ್ಯ ಮಂತ್ರಿ ಶಾಂತಿಲಾಲ ಶಾಹರು ಹುಡುಗಿಯರಿಗೆ ಒಂದು ಉಗ್ರೋ

ಪಾಯವನ್ನು ಸೂಚಿಸಿದ್ದಾರೆ. ಕಿರುಕುಳಗಾರರಿಗೆ ಆಯಾ ಹುಡುಗಿಯರೇ ಆ ಕ್ಷಣದಲ್ಲಿಯೇ ಕಪಾಳಮೋಕ್ಷಮಾಡಿ ಬುದ್ಧಿ ಕಲಿಸಬೇಕು. ಇದರಿಂದಾಗುವ ಕಾಯದೆ ಪರಿಣಾಮಗಳ ವಿಚಾರ ಆಮೇಲೆ—ಎಂದು ಅವರ ಉಪದೇಶ.

ಶಾಂತಿಲಾಲರ ಸೂಚನೆಯನ್ನು ಪಾಲಿಸುವ ದಿಟ್ಟತನ ತರುಣಿಯರಲ್ಲಿ ಬಂದರೆ ಅದು ಒಳಿತೇ. ಅದರಿಂದ ಉಪಟಳಗಾರನ ಹೃದಯಪರಿವರ್ತನೆಯಾಗದಿದ್ದರೂ ಒಂದು ಬಗೆಯ ಅಂಜಿಕೆ ಉತ್ಪನ್ನವಾಗಬಲ್ಲವು. ಪಾಶ್ಚಾತ್ಯ ದೇಶಗಳಲ್ಲಿ ಈ ಬಗೆಯ ಸಂಪ್ರದಾಯವು ಇದೆ.

ಪಾಶ್ಚಾತ್ಯರಲ್ಲಿ ಬೀದಿಯಲ್ಲಿ ಹೋಗುತ್ತಿರುವ ಹೆಣ್ಣನ್ನು ಅನಪೇಕ್ಷಿತವಾಗಿ ಮಾತಾಡಿಸುವುದು, ಸಿಳ್ಳು ಹಾಕುವುದು ಮೊದಲಾದ ಉಪದ್ವ್ಯಾಪ ಮಾಡುವವರಿಗೆ ಅವಳು ಕಪಾಳಕ್ಕೆ ಒಂದೇಟು ಬಿಗಿಯಬಹುದು, ಇಲ್ಲವೆ ಕೊಡೆಯಿಂದಲೋ ಚೀಲದಿಂದಲೋ ಹೊಡೆಯಬಹುದು. ಹತ್ತಿರ ಯಾರಾದರೂ ಬೇರೆ ಗಂಡಸರಿದ್ದರೆ ಅವರು ಹುಡುಗಿಯ ನೆರವಿಗೆ ಬರುತ್ತಾರೆ. ಅವರು ಮೊದಲು ಬಂದು ಈ ಮನುಷ್ಯ ಪೀಡಿಸುತ್ತಿರುವನೇ ? ಎಂದು ಕೇಳುವರು. ಅವಳು ಇಲ್ಲವೆನ್ನದಿದ್ದರೆ ಪೀಡಿಸುತ್ತಾನೆಂದೇ ಅರ್ಥ. ಆಗ ಆ ಗಂಡಸು ಕಿಡಿಗೇಡಿಯನ್ನು ಚನ್ನಾಗಿ ಥಳಿಸುತ್ತಾನೆ.

ತರುಣಿಯರ ಮಾನರಕ್ಷಣೆಯನ್ನು ಅಲ್ಲಿ ಅಪರಿಚಿತರು ಕೂಡ ಉಗ್ರೋಪಾಯದಿಂದ ಮಾಡುವ ಪರಂಪರೆ ಬಿದ್ದುಹೋಗಿದೆ. ಕಾಯದೆಯೂ ಅಪ್ರತ್ಯಕ್ಷವಾಗಿ ಅವರ ಪಕ್ಷ ವಹಿಸುತ್ತದೆ.

ಇಂಗ್ಲಂಡಿನಲ್ಲಿ ಕೆಲ ವರ್ಷಗಳ ಹಿಂದೆ ಆಸ್ಟ್ರಿಯಾದ ಒಬ್ಬ ಜಾಗೀರದಾರನನ್ನು ಒಬ್ಬ ಇಂಗ್ಲೀಷನು ಥಳಿಸಿದನು. ಸಾಮಾನ್ಯವಾಗಿ ಪಾಶ್ಚಾತ್ಯರು ಇಂಥ ಪ್ರಸಂಗದಲ್ಲಿ ಕೋರ್ಟಿನ ಕಟ್ಟೆ ಹತ್ತುವದಿಲ್ಲ. ಆದರೆ ಆ ಜಾಗಿರದಾರ ನ್ಯಾಯಾಸ್ಥಾನಕ್ಕೆ ಹೋದನು. ಜಾಗಿರದಾರನು ಒಬ್ಬ ಹುಡುಗಿಯ ಮೇಲೆ "ಕಣ್ಣು ಮಿಟುಕಿಸು"ತ್ತಿದ್ದುದ್ದರಿಂದ ತಾನು ಅವನನ್ನು ಹೊಡೆದದ್ದಾಗಿ ಪ್ರತಿವಾದಿ ಸಬೂಬು ಕೊಟ್ಟನು. ಮೇಜಿಸ್ಟ್ರೇಟನು ಅವನನ್ನು ನಿರಪರಾಧಿಯೆಂದು ಬಿಡುಗಡೆ ಮಾಡುತ್ತ ಇಂಗ್ಲಂಡಿನಲ್ಲಿ ಸ್ತ್ರೀಯರ ಮಾನ ರಕ್ಷಣೆಗಾಗಿ ಇಂಥ ಕ್ರಮ ಕೈಕೊಳ್ಳಲು "ಅಲಿಖಿತ ಕಾಯದೆ"ಯ ಬೆಂಬಲವಿದೆಯೆಂದು ತೀರ್ಪು ಹೇಳಿದನು.

"ಬೀದಿಯ ಕಾಮಣ್ಣ"ಗಳ ಸಮಾಚಾರ ತೆಗೆದುಕೊಳ್ಳಲು ನಮ್ಮಲ್ಲಿಯೂ ಇಂಥ ಸಂಪ್ರದಾಯ ಅಥವಾ "ಅಲಿಖಿತ ಕಾಯದೆ"ಯನ್ನು ಮಾಡಿಕೊಳ್ಳುವುದು ಒಳಿತೆಂದು ಕಾಣುತ್ತದೆ. ಇದನ್ನು ಸುಶಿಕ್ಷಿತ ತರುಣ-ತರುಣಿಯರ ಸಭೆಗಳಲ್ಲಿ ಒಪ್ಪಂದ ಮೂಲಕ ಸಾಧಿಸಬಹುದು. ಪೀನಲ್ ಕೋಡಿನ ೩೫೩ನೇ ಕಲಮಿನಲ್ಲಿ ತಿದ್ದುಪಡಿ ಮಾಡಿ ಈ ಬಗೆಯ ಹೊಡೆತವನ್ನು ಅಪರಾಧವಲ್ಲೆಂದು ಮಾಡಬಹುದು ಅಥವಾ ೫೦೯ನೇ ಕಲಮನ್ನು ತಿದ್ದಿ ಅಸಭ್ಯವರ್ತನೆಯನ್ನು ಕಾಗ್ನಿಜಿಬಲ್ ಅಪರಾಧವಾಗಿ ಮಾಡಿ ಅದರ ಸಮರಿ ವಿಚಾರಣೆಗೆ ಅವಕಾಶವೀಯುವುದು ಹಿತಕರವಾದೀತು.

ಆದರೆ ಕಿಡಿಗೇಡಿಗಳಿಗೆ, ಅವರ ಪೀಡೆಗೊಳಗಾದ ಅಬಲೆಯರಾಗಲಿ ಇತರರಾಗಲಿ ತತ್‌ಕ್ಷಣ ಉಗ್ರಶಾಸ್ತಿ ಮಾಡುವುದು ಪರಿಹಾರದ ಒಂದು ಮುಖ ಮಾತ್ರವಾಯಿತು. ಅದು ತಾತ್ಕಾಲಿಕ ಉಪಶಮನವೇ ಹೊರತು ಶಾಶ್ವತ ಪರಿಹಾರವಾಗಲಾರದು. ಅದಕ್ಕೆ ಸಮಸ್ಯೆಯ ಮೂಲ ಕಾರಣವನ್ನು ಶೋಧಿಸಬೇಕಾಗುವದು.

ಪಾಶ್ಚಾತ್ಯ ದೇಶಗಳಲ್ಲಿನಂತೆ ಇಲ್ಲಿ ಸ್ತ್ರೀಪೀಡಕರನ್ನು ಅಪ್ಪಳಿಸಲು ಮುಂದೆ ಬರುವ ಗಂಡಸರು ಅತ್ಯಂತ ವಿರಳ. ಇದಕ್ಕೆ ನಾಳೆ ಕಾಯದೆಯಿಂದ ಏನು ತ್ರಾಸ ಬರುವುದೋ ಎಂಬ ಭಯವೇ ಕಾರಣವೆಂದು ಎಂದಿಗೂ ಹೇಳಬರುವುದಿಲ್ಲ. ಗಾಂಧೀಜಿಯ ದೇಶವಾದರೂ ಇಲ್ಲಿ ಹಿಂಸೆ ಅಪರೂಪವಾಗಿಲ್ಲ; ಕಾಯದೆಯ ಮೇಲಿನ ಭಕ್ತಿಯಲ್ಲಿಯೂ ನಾವು ಪಾಶ್ಚಾತ್ಯರಿಗಿಂತ ಮುಂದಿಲ್ಲ. ಎಷ್ಟೋ ಕೃತ್ಯಗಳನ್ನು ನಾವು ಕಾಯದೆಯನ್ನಾಗಲಿ ಪ್ರತೀಕಾರವನ್ನಾಗಲಿ

ಲೆಕ್ಕಿಸದೆ ಮಾಡಿಬಿಡುತ್ತೇವೆ. ನಮ್ಮ ಅನಾಸ್ಥೆಗೆ ಕಾರಣವೆಂದರೆ ಹೆಂಗಸರಿಗೆ ಕುಚೇಷ್ಟೆ ಮಾಡುವವರನ್ನು ನೋಡಿ ನಮ್ಮ ಆತ್ಮ ನೊಂದು ಉದ್ರೇಕಗೊಳ್ಳುವುದಿಲ್ಲ. ಇದಕ್ಕೆ ಸ್ತ್ರೀಜಾತಿಯ ವಿಷಯದಲ್ಲಿ ನಮ್ಮ ಪುರುಷರ ಮನಸಿನ ನಿಲುಮೆಯೇ ಮೂಲ.

ಕೆಲ ವರ್ಷಗಳ ಹಿಂದೆ ನಾನು ಒಂದು ಅಂಗಡಿಯಲ್ಲಿದ್ದಾಗ ನನಗೆ ಪರಿಚಿತರಾದ ಇಬ್ಬರು ಕಾಯಂ ಗಿರಾಕಿಗಳು ಅಂಗಡಿಯ ಮುಂದೆ ಕುಳಿತು ಮಾತಾಡುತ್ತಿದ್ದರು. ಅವರಲ್ಲೊಬ್ಬನು ಒಮ್ಮೆಲೇ ಬೀದಿಯ ಕಡೆ ಹೊರಳಿ, ಸ್ವಲ್ಪ ಕಣ್ಣು ಸೆಳೆಯುವ ಗುಲಾಬಿ ರಂಗಿನ ಸೀರೆಯುಟ್ಟು ಅಂಗಡಿಯ ಮುಂದೆ ಹಾದು ಹೋಗುತ್ತಿದ್ದ ತರುಣಿಯನ್ನು ತೋರಿಸಿ ಅವಳ ಸೀರೆ ಮತ್ತು ಅಂಗಾಂಗಗಳನ್ನು ಉತ್ತಾನ ಶೃಂಗಾರದ ಮಾತುಗಳಲ್ಲೇ ಬಣ್ಣಿಸತೊಡಗಿದ.

ದೈವಯೋಗದಿಂದ ಆ ತರುಣಿ ಆ ಇನ್ನೊಬ್ಬ ಗಿರಾಕಿಯ ಹೆಂಡತಿಯಾಗಿದ್ದಳು. ಅವನು ಸಿಟ್ಟಿಗೆದ್ದು ಆ ಅಧಿಕಪ್ರಸಂಗಿಯ ಕೆನ್ನೆಗೆ ಎರಡೇಟು ಏರಿಸಿರಬೇಕೆಂದು ನೀವು ತರ್ಕಿಸುತ್ತೀರಿ, ಅಲ್ಲವೆ? ಆದರೆ ಹಾಗಾಗಲಿಲ್ಲ. ಅವನು ಬಾಯಿ ಮುಚ್ಚಿಕೊಂಡು ಅಪಮಾನವನ್ನು ನುಂಗಿಕೊಂಡ. ಅವನು ಕೈಕೊಂಡ ಕ್ರಮ ಬೇರೆಯೆ ಆಗಿತ್ತು. ಮನೆಗೆ ಹೋದವನೇ ಅವನು ಆ ಸೀರೆಯನ್ನು ಇನ್ನೆಂದಿಗೂ ಉಡತಕ್ಕದ್ದಲ್ಲೆಂದು ಹೆಂಡತಿಗೆ ತಾಕೀತು ಮಾಡಿದ!

ಗಂಡನಾದವನೇ ಷಂಡನಾದನೆ? ಎಂದು ನೀವು ದ್ರೌಪದಿಯಂತೆ ಕೇಳಬಹುದು. ಆದರೆ ಆ ಮನುಷ್ಯ ಹೇಡಿಯಲ್ಲೆಂದು ನಾನು ಭರವಸೆ ಕೊಡುತ್ತೇನೆ. ಅವನು ಅಧಿಕಪ್ರಸಂಗಿಗೆ ಶಾಸ್ತಿ ಮಾಡದಿರಲು ಕಾರಣವೆಂದರೆ ಈ ರೀತಿ "ಶೋಕಿ" ಮಾಡಿಕೊಂಡು ಹೋಗುವ ಹೆಂಗಸರಿಗೆ ಇಂಥ ಕುಚೇಷ್ಟೆ ನ್ಯಾಯವೇ ಸೈ ಎಂಬ ಮನೋವೃತ್ತಿ. ಅವನಿಗೆ ತನ್ನ ಹೆಂಡತಿಯ ಮೇಲೆ ಸಿಟ್ಟು ಬಂದಿತ್ತಲ್ಲದೆ ಉಪದ್ವ್ಯಾಪಿಯ ಮೇಲಲ್ಲ.

ಮದ್ರಾಸಿನ "ಹಿಂದು" ಮತ್ತು "ಸ್ವತಂತ್ರ" ಪತ್ರಿಕೆಗಳಲ್ಲಿ ಸ್ತ್ರೀ ಪೀಡಕರ ವಿಷಯದಲ್ಲಿ ಬಂದ ಪತ್ರವ್ಯವಹಾರಗಳು ಕಲಿತವರಲ್ಲಿ ಕೂಡ ಇದೇ ಮನೋವೃತ್ತಿಯಿದೆಯೆಂದು ದೃಢಪಡಿಸುತ್ತವೆ. ತರುಣಿಯರು ಫ್ಯಾಶನ್ ಮಾಡಿಕೊಂಡು ಒಯ್ಯಾರದಿಂದ ಬೀದಿಗಳಲ್ಲಿ ಮೆರೆಯುವುದರಿಂದಲೇ ತರುಣರ ಕಿಡುಗಣ್ಣುಗಳಿಗೆ ಅವರು ಪಾತ್ರರಾಗುತ್ತಾರೆ. ಅವರು ಗರತಿಯರಂತಿದ್ದರೆ ಹುಡುಗರಾದರೂ ಪಾಪ, ಎಲ್ಲಿ ಅವರ ಗೋಜಿಗೆ ಹೋದಾರು? ಇದು ಆ ಪತ್ರಗಳ ಪಲ್ಲವಿಯಾಗಿದೆ.

ಇದೇ ನಮ್ಮಲ್ಲಿ ಅಧಿಕಾಂಶ ಜನರ—ಹೆಂಗಸರನ್ನೊಳಗೊಂಡು—ಮನೋವೃತ್ತಿಯಾಗಿದೆ. ಇದರಿಂದಲೇ ನಮಗೆ ಅಸಭ್ಯ ಕಾಮಣ್ಣಗಳನ್ನು ಕಂಡರೆ ರೇಗುವುದಿಲ್ಲ. ಗರತಿತನದ ಅಗತ್ಯದವಾದವನ್ನೇ ಸ್ವಲ್ಪ ಬೆಳಸಿ, ಶ್ರೀಮಂತರು ದೊಡ್ಡ ಸುಂದರ ಮನೆಗಳಲ್ಲಿ ವಾಸವಾಗುತ್ತಿರುವುದರಿಂದಲೇ ಪಾಪ, ಕಳ್ಳರಿಗೆ ಪ್ರಲೋಭನವುಂಟಾಗಿ ದರೋಡೆ ಮಾಡುತ್ತಾರೆ, ಎಂದು ಈ ಫ್ಯಾಶನ್ ವಿರೋಧಿಗಳು ತರ್ಕ ಹೂಡುವುದಿಲ್ಲ.

ವಸ್ತುಸ್ಥಿತಿಯೆಂದರೆ ನಮ್ಮ ನಾಗರಿಕತೆಯ ಪ್ರಗತಿಗೆ ಸರಿಯಾಗಿ ನಾವು ನಮ್ಮ ಸಾಮಾಜಿಕ ನಿಲುಮೆಗಳನ್ನು ತಿದ್ದಿಕೊಂಡಿಲ್ಲ. ನಮ್ಮಲ್ಲಿ ನೂರಕ್ಕೆ ತೊಂಭತ್ತು ಜನರ ಮನಸ್ಸಿನಲ್ಲಿ ಸ್ತ್ರೀಯರು ಕೇವಲ ಉಪಭೋಗದ ಸಾಮಗ್ರಿಗಳು. ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಕೂಡ ನಮ್ಮಲ್ಲಿ ಗಂಡು ಹೆಣ್ಣುಗಳ ಒಡನಾಟ ಕೇವಲ ಸಂತಾನೋತ್ಪಾದನೆಗೆ ಸೀಮಿತವಾಗಿದೆ. ಅವರಲ್ಲಿ ಪರಸ್ಪರ ಸಾಮಾಜಿಕ ಹೊಕ್ಕು ಬಳಕೆಗೆ ಅವಕಾಶವಿಲ್ಲದ್ದರಿಂದ, ಸುಸಂಸ್ಕೃತ ಮಾನವರಿಗೆ ಸಹಜವಾದ —ಓದು, ಕಲೆ, ರಾಜಕಾರಣ ಇತ್ಯಾದಿ ಉಭಯ ಸಾಮಾನ್ಯ ಅಭಿರುಚಿಗಳಲ್ಲಿ ಗಂಡು ಹೆಣ್ಣುಗಳ ಸಹಯೋಗಕ್ಕೆ ಸಂದರ್ಭವೇ ಸಿಗುವುದಿಲ್ಲ. ಹೀಗಾಗಿ ಕಲಿತವರಿರಲಿ

ಇತರರಿರಲಿ ಗಂಡಸರು-ಹೆಂಗಸರೊಳಗಿನ ಪರಸ್ಪರ ಆಸ್ಥೆ ಕಾಮವೊಂದರಲ್ಲಿಯೇ ಕೇಂದ್ರಿತವಾಗುತ್ತದೆ. ಆದ್ದರಿಂದಲೇ ನಮ್ಮಲ್ಲಿ ಸುಶಿಕ್ಷಿತರು ಕೂಡ ಸ್ತ್ರೀ ಜಾತಿಯ ಚರ್ಚೆಯಲ್ಲಿ ಅಶ್ಲೀಲ ಮಾತುಗಳನ್ನೇ ಆಡುವುದು ಕಂಡುಬರುತ್ತದೆ.

ಹೀಗೆ ಬೀದಿಯ ಕಾಮಣ್ಣಗಳ ಪ್ರಶ್ನೆ ನಮ್ಮ ಸಾಮಾಜಿಕ ಕಟ್ಟುಕಟ್ಟಳೆಗಳ ಕಡೆಗೆ ನಮ್ಮನ್ನು ಒಯ್ಯುತ್ತದೆ. ನಾವು ಒಪ್ಪಿಕೊಂಡ ಆಧುನಿಕ ಜೀವನಕ್ಕೂ ಅವುಗಳಿಗೂ ಮೇಳಗೂಡುವುದಿಲ್ಲ. ಸ್ತ್ರೀಯರು, ಅವರ ಹಕ್ಕುಗಳು, ಗರತಿತನ ಮೊದಲಾದವುಗಳ ಬಗ್ಗೆ ನಮ್ಮ ಮೂಲ ಮನೋವೃತ್ತಿಯೇ ಬದಲಾಗಬೇಕು. ಇಲ್ಲದಿದ್ದರೆ ಉರ್ವಶಿಯರನ್ನು ತಾರಕಾಸುರರಿಂದ ಉಳಿಸಲು ಪುರೂರವರು ಸಿಗಲಾರರು. ಸಾರ್ವಜನಿಕಾಭಿಪ್ರಾಯವು ಎಲ್ಲರ ವರ್ತನೆಗಳನ್ನೂ ನಿಯಂತ್ರಿಸುತ್ತದೆ. ಸಾರ್ವಜನಿಕಾಭಿಪ್ರಾಯವು ಉರ್ವಶಿಗೆ ಪರದೆ ತೊಡಿಸಬೇಕೆಂದು ಇನ್ನೂ ಬಯಸುತ್ತಿದ್ದರೆ ಪುರೂರವರಿಗೆ ಧೈರ್ಯ ಬರಲಾರದು; ಶಾಂತಿಲಾಲರು ಹೇಳಿದರೂ ಉರ್ವಶಿಯರು ಕೂಡ ಆತ್ಮರಕ್ಷಣೆ ಮಾಡಿಕೊಳ್ಳಲಾರರು.



## ರಕ್ತದ ವ್ಯಾಪಾರ

ನಿರೋಗಿಗಳ ದೇಹದ ರಕ್ತವನ್ನು ರೋಗಿಗಳ ದೇಹದಲ್ಲಿ ತುಂಬಿ ರೋಗನಿವಾರಣೆ ಮಾಡುವ ವಿಷಯ ಈಗ ಹೆಚ್ಚುಕಡಿಮೆ ಎಲ್ಲರಿಗೂ ಗೊತ್ತಿದೆ.

ಜಪಾನದಲ್ಲಿ ಎಲ್ಲಿ ಹೋದರೂ "ರಕ್ತದಾನಿಗಳು ಬೇಕು" ಎಂಬ ಭಿತ್ತಿಪತ್ರಗಳು ಕಣ್ಣಿಗೆ ಬೀಳುವವು. ಯಾವುದೇ ವೃತ್ತಪತ್ರವನ್ನು ನೀವು ಕೈಗೆತ್ತಿಕೊಂಡರೂ ಅದರಲ್ಲಿ ಕೂಡ ನಿಮಗೆ ರಕ್ತದಾನಿಗಳು ಬೇಕೆಂಬ ಜಾಹೀರಾತುಗಳು, ಬಿನ್ನಹಗಳು ಕಂಡು ಬರುವವು.

ಈ ಜಾಹೀರಾತುಗಳಿಂದ ತುಂಬ ಉಪಯೋಗವಾಗುತ್ತಿದೆ. ಆಸ್ಪತ್ರೆಗಳಲ್ಲಿ ರಕ್ತದ ಕೊರತೆ ಎಂದೂ ಅನಿಸುವದಿಲ್ಲ.

ಕೊಡುವ ರಕ್ತಕ್ಕೆ ಪ್ರತಿಯಾಗಿ ಹಣ ಸಿಗುತ್ತಿರುವದೇ ಜಪಾನಿಗಳು ಸ್ವೇಚ್ಛೆಯಿಂದ ರಕ್ತದಾನ ಮಾಡುತ್ತಿರುವದರ ಕಾರಣವಾಗಿದೆ. ಕೊಳ್ಳುವ ರಕ್ತದಲ್ಲಿ ನೂರಕ್ಕೆ ೯೮ ರಷ್ಟು, ಇನ್ನೇನೂ ಮಾರುವ ವಸ್ತು ಬಳಿಯಲ್ಲಿಲ್ಲದ ಸ್ತ್ರೀ ಪುರುಷರಿಂದ ಬಂದಿರುತ್ತದೆ. ಅರ್ಧ ಪೈಂಟ ರಕ್ತಕ್ಕೆ ಹತ್ತು ಶಿಲಿಂಗ ಬೆಲೆಯಿದೆ.

ಸಾಮಾನ್ಯವಾಗಿ ನಿರುದ್ಯೋಗಿಗಳು, ತುಸು ಹಣ ಸಂಪಾದಿಸುವ ಹಂಬಲವಿರುವ ವಿದ್ಯಾರ್ಥಿಗಳು ಮತ್ತು ಗೃಹಿಣಿಯರು ಹೆಚ್ಚಾಗಿ ರಕ್ತಮಾರಲು ಮುಂದೆ ಬರುತ್ತಾರೆ. ಎಷ್ಟೋ ಶ್ರೀಮಂತ ಸುಂದರ ತರುಣಿಯರು ಕೂಡ ಕೃಶಾಂಗಿಗಳಾಗಿರಲು ಸಹಾಯವಾಗುತ್ತದೆ ಎಂಬ ಕಲ್ಪನೆಯಿಂದ ರಕ್ತದಾನ ಮಾಡುತ್ತಾರೆ. ರಕ್ತದ ಒತ್ತಡ ಕಡಿಮೆಯಾಗಲೆಂಬ ಕಾರಣದಿಂದ ನಾನಾವಿಧವಾದ ವ್ಯವಹಾರಗಳ ಚಿಂತೆಯಿರುವ ಜನರೂ ರಕ್ತ ಮಾರಿಕೊಳ್ಳುತ್ತಾರೆ.

ಬೇರೆ ಬೇರೆ ಬಗೆಯ ರಕ್ತವನ್ನು ಕೊಂಡು ಅದು ಕೆಡದಂತೆ ಕಾದಿಡುವ ಕಂಪನಿಗಳು ಜಪಾನದಲ್ಲಿ ಇವೆ.

# ಮುಲಕಿನ ಮಾತು

ಶ್ರೀ. ಪ. ಗಲಗಲಿ



ಕಪ್ಪೆ :

ಹಾವಿನ ಹಲ್ಲಿನ ಪಂಜರದಲ್ಲಿ—
ಕತ್ತರಿ ಪೇಚಿನ ವೇದನೆಯಲ್ಲಿ,
ಬಿದ್ದವ ಬದುಕುವದಚ್ಚರಿಯಲ್ಲೆ ?
ಕೇಳಿದರೀ ನುಡಿ ನಂಬುವದಿಲ್ಲೆ ?
ಬದುಕಿದೆ ! ಬದುಕಿದೆ ! ನಾನೇ ಸಾಕ್ಷಿ !
ಉಳಿಸಿತಹಿಂಸೆಯು-ರಾಮನ ರಕ್ಷಿ !
ಮೈ ಜಾಳಿಗೆಯಂತಾದರೆ ಏನು ?
ನಂಜಿನ ಮೈ ಜುಮ್ಮೆಂದರೆ ಏನು ?
ಮುಳ್ಳನು ತೆಗೆಯಲು ಮುಳ್ಳೇ ಬೇಕೆ ?
ಅಳುಕುವ ಮುಳ್ಳಿಗೆ ಬಾಯ್ಬಿಡಬೇಕೆ ?
ತಾಳಿದರಾಯಿತು ; ಬಾಳಿದರಾಯಿತು ;
ಕುಕ್ಕಲು 'ಕೊಲ್ಲಿರಿ' ಎಂದರೆ ಮುಗಿಯಿತು!

ಹಾವು :

ಹಾವಿಗೆ ಹಾಲೆರೆದೇನು ಪ್ರಯೋಜನ ?
ಎನ್ನುವ ಬುದ್ಧಿಗೆ ಇಲ್ಲಿದೆ ಚಾಲನ !
ಬಲಿಯಾದವ ಜಗ ಗೆಲಿಯಲಿಬಹುದು !
ಗೆಲಿದೌದಾರ್ಯವ ತೋರಲು ಬಹುದು !
ಬಾಯಿಗೆ ಬಂದಿಹ ತುತ್ತನು ಬಿಟ್ಟೆ !
ಕಪ್ಪೆಗೆ ಇದೊ ಹೊಸ ಜನ್ಮವ ಕೊಟ್ಟೆ !
ಕೊಡಲೂ ಕೊಳ್ಳಲು ಬಲಿಯೇ ಬಲ್ಲ !
ಹೇಡಿಯ ಮಾತಿಗೆ ಬೆಲೆಯೇ ಇಲ್ಲ.

ಹೊತ್ತು :

ಕಪ್ಪೆಯ ಮಾತನು ನಂಬಲುಬಹುದೆ ?
ಹಾವಿನ ನುಡಿಯಲಿ ತಥ್ಯವು ಇಹುದೆ ?
ಮನೆಯಲಿ ಸೇರಿದ ಹಾವನು ಕೊಲ್ಲಲು,
ಒಡೆಯನು ಒನಕೆಯ ಪೆಟ್ಟನು ಹಾಕಲು,
ಹಾವೋ ಪಕ ಪಕ ಬಾಯ್ಬಿಡುತಿತ್ತು !
ತಾನೇ ಸರಿಯಿತು ಕಪ್ಪೆಯ ಕುತ್ತು !
'ಬಲವನಹಿಂಸೆಯು ಗೆದ್ದಿತು' ಎಂದು,
'ಹೇಡಿಯ ಜೇಡಿತ ನೀಡಿದೆ 'ನೆಂದು
ಕಪ್ಪೆ ಹಾವುಗಳು ಹೇಳುವವಲ್ಲ !
ಮುಲಕಿನ ಮಾತಿಗೆ ಮೋರೆಯು ಇಲ್ಲ !

**ಕ್ಷುದ್ರ ನಡುಗಡ್ಡೆಯೊಂದರಲ್ಲಿ ಆಧುನಿಕ ಬುದ್ಧಿಯನ್ನು ಮಂಕುಗೊಳಿಸಿದ ಶಿಲ್ಪ**

# ರಕ್ಕಸ ವಿಗ್ರಹಗಳ ಒಗಟು

ನಿಸರ್ಗದ ಮೇಲೆ ಮಾನವನು ಪ್ರಭುತ್ವವನ್ನು ಹೆಚ್ಚೆಚ್ಚಾಗಿ ಪಡೆಯುತ್ತಿರುವ ಕಾಲವಿದು. ತನ್ನ ಅಳವಿಗೆ ಯಾವದೂ ಮೀರಿದ್ದಲ್ಲ ಎಂದು ಮಾನವನು ನಂಬತೊಡಗಿರುವ ಕಾಲವಿದು. ಆದರೂ ಹಿಂದೆ ವಿಜ್ಞಾನದ ಪ್ರಗತಿಯು ಏನೇನೂ ಆಗದಿದ್ದ ಕಾಲದಲ್ಲಿ ಆಗಿನ ಮನುಷ್ಯನು ಮಾಡಿದ ಎಷ್ಟೋ ಅದ್ಭುತ ಕಾರ್ಯಗಳ ರಹಸ್ಯವನ್ನು ಕಂಡು ಹಿಡಿಯುವುದು ಇಂದಿನ ಮಾನವನಿಗೆ ಅಸಾಧ್ಯವಾಗಿಯೆ ಉಳಿದುಕೊಂಡಿವೆ. ಬಹುಶಃ ಈ ಮಾತು ಮನುಷ್ಯನ ಶಕ್ತಿಗೂ ಒಂದು ಮಿತಿಯಿದೆ ಎಂಬ ಮಾತನ್ನು ಸೂಚಿಸುತ್ತಿದೆಯೋ ಏನೊ?

ಮನುಷ್ಯ "ಏನಿರಬಹುದು! ಹೇಗಾಗಿರಬಹುದು?" ಎಂದು ಇಂದೂ ತಲೆ ಕೆರೆದುಕೊಳ್ಳಬೇಕಾಗಿರುವ ರಹಸ್ಯಗಳಲ್ಲಿ ಈಸ್ಟರ ನಡುಗಡ್ಡೆಯಲ್ಲಿರುವ ರಾಕ್ಷಸೀ ಮೂರ್ತಿಗಳ ರಹಸ್ಯವೂ ಒಂದಾಗಿದೆ.

೧೭೨೨ ರಲ್ಲಿ ಜೆಕೊಬ ರೋಗೆವ್ವಿನ್ ಎಂಬ ಡಚ್ ನಾವಿಕನು ಸಮುದ್ರಪರ್ಯಟನಕ್ಕೆ ಹೊರಟಿದ್ದನು. ಆತನ ಮೂರು ಹಡಗಗಳು ಆಗ್ನೇಯ ಪ್ಯಾಸಿಫಿಕ್ ಮಹಾಸಾಗರದ ಒಂದು ನಡುಗಡ್ಡೆಯ ಸಮೀಪದಲ್ಲಿ ಹೋಗುತ್ತಿದ್ದಾಗ ಆ ನಡುಗಡ್ಡೆಯ ಮೇಲೆ ಕಂಡುಬಂದ ದೃಶ್ಯದಿಂದ ಜೆಕೋಬನ ಎದೆ ಝಲ್ಲೆಂದಿತು. ಆಗಿನ ಜಗತ್ತಿನ ನಕಾಶೆಯಲ್ಲಿ ಈ ನಡುಗಡ್ಡೆಯ ಚಿಹ್ನವೇ ಇರಲಿಲ್ಲ. ದೂರದರ್ಶಕ ಯಂತ್ರದಿಂದ ನೋಡಿದಾಗ ಜೆಕೊಬನಿಗೆ ಆ ನಡುಗಡ್ಡೆಗೆ ಕಲ್ಲಿನ ಗೋಡೆಗಳ ಬುರುಜುಗಳಿದ್ದು ಅವುಗಳ ಮೇಲೆ ಶಿರಸ್ತ್ರಾಣ ಧರಿಸಿದ, ಸಾಮಾನ್ಯ ಮನುಷ್ಯನಿಗಿಂತಲೂ ಅತಿ ಎತ್ತರದ ಅದ್ಭುತಾಕಾರದ ಮನುಷ್ಯರು ನಿಂತಿರುವದು ಕಂಡುಬಂದಿತು.

ಜೆಕೊಬನು ರಾತ್ರಿಯೆಲ್ಲ ಆ ನಡುಗಡ್ಡೆಗೆ ದೂರದಲ್ಲಿ ಹಡಗುಗಳನ್ನು ನಿಲ್ಲಿಸಿಕೊಂಡು ಬೆಳಗಾದೊಡನೆ ನಿದಾನವಾಗಿ ನಡುಗಡ್ಡೆಯ ಸಮೀಪಕ್ಕೆ ಹೋಗತೊಡಗಿದನು. ನಡುಗಡ್ಡೆ ಸಮೀಪ ಬಂದಾಗ ರಾತ್ರಿಯ ಅಂಜಿಕೆ ಅವನಿಗೆ ಇಲ್ಲದಂತಾಯಿತು. ತನಗೆ ಭ್ರಮೆಯಾಗಿತ್ತು ಎಂಬ



ಅರಿವಿನಿಂದ ಅವನಿಗೆ ತುಸು ನಾಚಿಕೆಯೂ ಅನಿಸಿತು. ಅವನಿಗೆ ಕಂಡುಬಂದ ರಾಕ್ಷಸಾಕಾರದ ಮನುಷ್ಯರು ನಿಜವಾದ ಮನುಷ್ಯರಾಗಿರದೆ ಒಂದೇ ಕಲ್ಲಿನಲ್ಲಿ ಕೊರೆದ ಪ್ರಚಂಡ ಮೂರ್ತಿಗಳಾಗಿದ್ದರು. ಅವುಗಳ ಅಕ್ಕಪಕ್ಕದಲ್ಲಿ ಎಲ್ಲರಂತೆಯೆ ಇದ್ದ ಮನುಷ್ಯರು ಓಡಾಡುತ್ತಿದ್ದರು. ಆ ಮೂರ್ತಿಗಳ ಟೊಂಕದ ಮೇಲ್ಭಾಗವನ್ನಷ್ಟೇ ಕೆತ್ತಲಾಗಿತ್ತು. ಗಾಳಿ-ಮಳೆಯ ಹೊಡೆತಕ್ಕೆ ಮೂರ್ತಿಗಳ ತಲೆಗಳು ಸವೆಯತೊಡಗಿದ್ದವು. ಈ ಬಗೆಯ ರಾಕ್ಷಸಾಕಾರದ ನೂರಾರು ಮೂರ್ತಿಗಳು ಅಲ್ಲಿದ್ದವು.

ಆ ನಡುಗಡ್ಡೆಯಲ್ಲಿ ಯಾವ ಬಗೆಯ ಸಂಪತ್ತೂ ಇರದ್ದರಿಂದ ಮತ್ತು ಅದು ಸಮುದ್ರ ಪರ್ಯಟನ ಕಾಲಕ್ಕೆ ಒಳ್ಳೆಯ ಆಶ್ರಯಸ್ಥಾನವಾಗಿ ಕಂಡುಬರದ್ದರಿಂದ ಜೆಕೊಬನು ಅಲ್ಲಿಂದ ಹಿಂತಿರುಗಿದನು. ಇಂದು ಜಗತ್ತಿಗೆ ರಹಸ್ಯವಾಗಿರುವ ಈ ಮೂರ್ತಿಗಳ ವಿಚಾರವು ಜೆಕೊಬನಿಗೆ ಕೂಡ ಹೆಚ್ಚಾಗಿ ತಿಳಿದುಬರಲಿಲ್ಲ. ಅವನು ಆ ಬಗ್ಗೆ ಪ್ರಯತ್ನವನ್ನೂ ಮಾಡಲಿಲ್ಲ. ಈ ನಡುಗಡ್ಡೆಯ ಮೇಲೆ ಜೆಕೊಬ ಕಾಲಿಟ್ಟ ದಿನವು ಈಸ್ಟರ ಹಬ್ಬದ ದಿನವಾದ್ದರಿಂದ ಅವನು ಅದಕ್ಕೆ 'ಈಸ್ಟರ ನಡುಗಡ್ಡೆ' ಎಂದು ಹೆಸರನ್ನಿಟ್ಟನು.

ದಕ್ಷಿಣ ಅಮೇರಿಕೆಯ ಚಿಲಿಯಿಂದ ಪಶ್ಚಿಮಕ್ಕೆ ೬೦ ಮೈಲು ದೂರದಲ್ಲಿ ಮತ್ತು ತಾಹಿತಿ ನಡುಗಡ್ಡೆಯ ಪೂರ್ವಕ್ಕೆ ೨೦೦ ಮೈಲು ದೂರದಲ್ಲಿರುವ ಈಸ್ಟರ ನಡುಗಡ್ಡೆಯ ವಿಸ್ತಾರ ೬೦ ಚದುರ ಮೈಲುಗಳಷ್ಟಿದೆ. ಜೆಕೊಬ ರೋಗೆವ್ಹಿನ್ ಈ ನಡುಗಡ್ಡೆಯನ್ನು ಕಂಡು ಬಂದ ನಂತರ ೫೦ ವರ್ಷಗಳ ವರೆಗೆ ಯಾವ ಯುರೋಪಿಯನ್ನನೂ ಅಲ್ಲಿಗೆ ಹೋಗಲಿಲ್ಲ. ಮುಂದೆ ಸುಮಾರು ೧೫೦ ವರ್ಷಗಳ ನಂತರ ಈ ನಡುಗಡ್ಡೆಯ ಬಗ್ಗೆ ಆಸ್ಥೆ ಹುಟ್ಟಿ ಸಂಶೋಧನ ನಡೆಯಿತು. ಅದುವರೆಗೂ ಅಲ್ಲಿರುವ ರಾಕ್ಷಸೀ ಮೂರ್ತಿಗಳ ವಿಚಾರ ಜಗತ್ತಿಗೆ ಗೊತ್ತೇ ಇರಲಿಲ್ಲ.

ಈ ಮೂರ್ತಿಗಳ ಬಗ್ಗೆ ಹೆಚ್ಚು ತಿಳಿದಷ್ಟೂ ಅವುಗಳ ರಹಸ್ಯವು ಆಳವಾಗುತ್ತ ಹೋಯಿತು. ಸಂಶೋಧನದಿಂದ ಅವುಗಳನ್ನು ಜ್ವಾಲಾಮುಖಿ ಪರ್ವತವೊಂದರ ಕಲ್ಲುಗಳಿಂದ ಮಾಡಿದ್ದು ಎಂಬುದು ತಿಳಿದುಬಂತು. ಈ ಪ್ರಚಂಡ ಮೂರ್ತಿಗಳನ್ನು ಪರ್ವತದ ಮೇಲೆಯೆ ಕೊರೆಯಲಾಗಿತ್ತು. ನಂತರ ಪರ್ವತದ ಇಳ್ಳಿಜಾರಿನ ಸಹಾಯದಿಂದ ಈ ಮೂರ್ತಿಗಳನ್ನು ಸುಮಾರು ೧೦ ಮೈಲು ದೂರದ ವರೆಗೆ ಇಳಿಸಿಕೊಂಡು ಬಂದು ಕಲ್ಲಿನ ಪ್ರಚಂಡ ಬುರುಜುಗಳ ಮೇಲೆ ನಿಲ್ಲಿಸಲಾಗಿತ್ತು. ಈ ಮೂರ್ತಿಗಳು ೧೨ ಅಡಿಗಳಿಂದ ೬೬ ಅಡಿಗಳಷ್ಟು ಎತ್ತರ ಇವೆ. ೬೬ ಅಡಿ ಎತ್ತರ ಮೂರ್ತಿಗಳನ್ನು ಅರ್ಧಮರ್ಧ ಕೊರೆಯಲಾಗಿದೆ. ಒಂದೊಂದು ಮೂರ್ತಿಯ ತೂಕ ೩೦ ಟನ್ನುಗಳಿಗಿಂತಲೂ ಹೆಚ್ಚಾಗಿದೆ; ೬೬ ಅಡಿ ಎತ್ತರದ ಮೂರ್ತಿಯ ತೂಕವಂತೂ ೫೦ ಟನ್ನುಗಳಷ್ಟಿದೆ.

ಜೆಕೊಬನ ಕಣ್ಣಿಗೆ ಮೂರ್ತಿಗಳು ಬಿದ್ದಾಗ ಅವು ಬುರುಜುಗಳ ಮೇಲೆ ಸರಿಯಾಗಿ ನಿಂತಿದ್ದವು. ಆದರೆ ೧೯ನೆಯ ಶತಮಾನದಲ್ಲಿ ಈ ನಡುಗಡ್ಡೆಯ ನಿರೀಕ್ಷಣೆ ಮಾಡಿದಾಗ ಇವುಗಳಲ್ಲಿ ಬಹಳಷ್ಟು ಮೂರ್ತಿಗಳು ಅಡ್ಡ ಬಿದ್ದಿರುವದೂ ಅವುಗಳ ಶಿರಸ್ತ್ರಾಣಗಳು ಒಡೆದುಹೋದುದೂ ಕಂಡುಬಂದಿತು. ಯಾವ ಪರ್ವತದಲ್ಲಿ ಈ ಮೂರ್ತಿಗಳನ್ನು ಕೊರೆದಿರಬೇಕು ಎಂದು ಅಂದಾಜು ಮಾಡಲಾಯಿತೊ ಆ ಪರ್ವತವನ್ನು ಪರೀಕ್ಷಿಸಿದಾಗ ಅಲ್ಲಿ ಅರ್ಧಮರ್ಧ ತಯಾರಾದ ಅನೇಕ ಮೂರ್ತಿಗಳು ಕಂಡುಬಂದವು. ಅಲ್ಲಿ ಕೊಡಲಿ, ಉಳಿ ಮುಂತಾದ ಅನೇಕ ಆಯುಧಗಳು ಅತ್ತಿತ್ತ ಹರಡಿ ಬಿದ್ದಿದ್ದವು.

ಈ ನಡುಗಡ್ಡೆಯಲ್ಲಿ ವಾಸಿಸುವ ಜನರು ತುಸು ಕಪ್ಪು-ಕಂದು ಬಣ್ಣದವರಾಗಿದ್ದು ಅವರು ಪ್ರೇಮಲ ಸ್ವಭಾವದವರಾಗಿದ್ದಾರೆ. ಈ ಜನರಿಗೆ ಕೂಡ ಈ ಮೂರ್ತಿಗಳ ವಿಶೇಷ ಜ್ಞಾನವಿಲ್ಲ. ಪ್ಯಾಸಿಫಿಕ್ ಮಹಾಸಾಗರದಲ್ಲಿ ಒಂದು ಚಿಕ್ಕೆಯಂತಿರುವ ಈ ಚಿಕ್ಕ ನಡುಗಡ್ಡೆಯ ಮೇಲೆ ಸಾಮಾನ್ಯ ಸುತ್ತಿಗೆ, ಚಾಣ ಮುಂತಾದ ಆಯುಧ

ಗಳಿಂದ ಇಂಥ ಪ್ರಚಂಡ ಮೂರ್ತಿಗಳನ್ನು ಕೊರೆದ ಕುಶಲ ಕಲಾವಿದರು ಎಲ್ಲಿಂದ ಬಂದರು, ಹೇಗೆ ಬಂದರು ಎಂಬುದು ಅತ್ಯಂತ ಆಶ್ಚರ್ಯದ ಸಂಗತಿಯೆನಿಸಿದೆ.

ಮತ್ತೆ ಈ ಪ್ರಚಂಡ ಮೂರ್ತಿಗಳನ್ನು ಪರ್ವತದ ಶಿಖರದಿಂದ ಸಮುದ್ರದ ದಂಡೆಗೆ ತಂದರಾದರೂ ಹೇಗೆ? ಕೆಲ ಮೂರ್ತಿಗಳನ್ನು ಪೂರ್ತಿಗೊಳಿಸದೆ, ಆಯುಧಗಳನ್ನು ಅಲ್ಲಿಯೆ ಚಲ್ಲಿ ಕೊಡಲು ಕಾರಣವೇನು? ಜೆಕೊಬ ನೋಡಿ ಬಂದ ನಂತರ ಮುಂದೆ ೧೫೦ ವರ್ಷಗಳಲ್ಲಿ ಈ ಮೂರ್ತಿಗಳನ್ನು ಯಾರು ಭಂಗಗೊಳಿಸಿರಬಹುದು? ಎಂಬಿತ್ಯಾದಿ ಸಂಗತಿಗಳು ಇನ್ನೂ ಪ್ರಶ್ನೆಗಳಾಗಿಯೆ ಉಳಿದಿವೆ.

ಈಗ ಈ ನಡುಗಡ್ಡೆ ಚಿಲಿ ಸರಕಾರದ ವಶದಲ್ಲಿದೆ.

ಈ ನಡುಗಡ್ಡೆಯಲ್ಲಿರುವ ಅವಶೇಷಗಳಿಂದ ಒಂದು ಕಾಲದಲ್ಲಿ ಇಲ್ಲಿ ೨,೦೦೦ ದಿಂದ ೫,೦೦೦ದ ವರೆಗೂ ಜನರಿದ್ದಿರಬೇಕು ಎನಿಸುತ್ತದೆ. ಮುಂದೆ ಇವರಲ್ಲಿ ಎರಡು ತಂಡಗಳಾಗಿರಬೇಕು. ಒಂದು ತಂಡದವರು ಕಿವಿಗೆ ತೂತುಗಳನ್ನು ಮಾಡಿಕೊಂಡು ಉಂಗುರದಂಥ ಆಭರಣವನ್ನು ಹಾಕಿಕೊಳ್ಳುತ್ತಿದ್ದುದರಿಂದ ಅವರಿಗೆ "ಲಂಬಕರ್ಣಿಗಳು" ಎನ್ನುತ್ತಿದ್ದರು. ಇನ್ನೊಂದು ತಂಡದವರು ಇಂಥ ಕರ್ಣಾಭರಣ ಧರಿಸುತ್ತಿರಲಿಲ್ಲ. ಇವರು ಲಂಬಕರ್ಣಿಗಳ ಸೇವಕರಾಗಿ ಬಾಳುತ್ತಿರಬೇಕು. ಮುಂದೆ ಈ ಸೇವಕ ಜನ ಲಂಬಕರ್ಣಿಗಳ ವಿರುದ್ಧ ಬಂಡೆದ್ದರು. ಇವರೆಲ್ಲರೂ ನರಮಾಂಸ ಭಕ್ಷಕರಿದ್ದುದರಿಂದ ಯುದ್ಧದಲ್ಲಿ ವಿಪರೀತ ಹತ್ಯಾಕಾಂಡ ನಡೆದು ಈಸ್ಟರ ನಡುಗಡ್ಡೆಯ ಜನಸಂಖ್ಯೆ ತೀರ ಕಡಿಮೆಯಾಯಿತು.

ಮುಂದೆ ಪೇರು ದೇಶದವರು ಈ ನಡುಗಡ್ಡೆಯ ಮೇಲೆ ದಾಳಿಮಾಡಿ ಇಲ್ಲಿಯ ೧,೦೦೦ ಜನರನ್ನು ಬಂಧಿಸಿ ಗುಲಾಮರನ್ನಾಗಿ ಮಾಡಿ ಗ್ವಾನೆ ನಡುಗಡ್ಡೆಯಲ್ಲಿ ಕೆಲಸಮಾಡಲು ಒಯ್ದರು. ಪೇರು ದೇಶದವರು ಈ ನಡುಗಡ್ಡೆಗೆ ಬರುವಾಗ ಮೈಲಿಬೇನೆಯನ್ನು ತಂದರು. ಈ ಬೇನೆಯಿಂದ ನಡುಗಡ್ಡೆಯಲ್ಲಿಯ ನೂರಾರು ಜನರು ಸತ್ತರು. ಇಲ್ಲಿಯ ಜನರನ್ನು ಹಿಡಿದು ತಾಹಿತಿ ನಡುಗಡ್ಡೆಗೂ ಒಯ್ಯಲಾಯಿತು. ತಾಹಿತಿ ನಡುಗಡ್ಡೆಯಿಂದ ಈಸ್ಟರ ನಡುಗಡ್ಡೆಗೆ ಕುಷ್ಠರೋಗ ಬಂತು. ಒಂದು ಒಪ್ಪಂದದನ್ವಯ ೧೮೮೮ ರಲ್ಲಿ ಈಸ್ಟರ ನಡುಗಡ್ಡೆ ಚಿಲಿ ಸರಕಾರದ ವಶಕ್ಕೆ ಹೋಯಿತು. ಆಗ ಈ ನಡುಗಡ್ಡೆಯಲ್ಲಿ ಕೇವಲ ನೂರು ಜನರಿದ್ದರು. ಮುಂದೆ ಈ ಸಂಖ್ಯೆ ನಿದಾನ ೧,೦೦೦ ಕ್ಕೇರಿತು.

ಈ ನಡುಗಡ್ಡೆಯ ಮೂಲ ನಿವಾಸಿಗಳಾರು? ಎಲ್ಲಿಂದ ಬಂದರು ಎಂಬ ವಿಚಾರದಲ್ಲಿ ನಡು-ಗಡ್ಡೆಯ ಜನ ಒಂದು ದಂತಕಥೆಯನ್ನು ಹೇಳುತ್ತಾರೆ. ಪೂರ್ವ ದಿಕ್ಕಿನಲ್ಲಿರುವ ಎರಡು ನಡುಗಡ್ಡೆಗಳಿಂದ "ಹೋಟು ಮಾಟುವಾ" ಎಂಬ ಅರಸನು ತನ್ನ ೨,೦೦೦ ಅನುಯಾಯಿಗಳ ಜೊತೆಯಲ್ಲಿ ಎರಡು ಹಡಗುಗಳಲ್ಲಿ ಕುಳಿತು ಈಸ್ಟರ ನಡುಗಡ್ಡೆಗೆ ಬಂದನು. ಮುಂದೆ ಪೂರ್ವದಿಕ್ಕಿನಲ್ಲಿದ್ದ ಎರಡೂ ನಡುಗಡ್ಡೆಗಳು ಸಮುದ್ರದಲ್ಲಿ ಮುಳುಗಿಹೋದವು. ಆದರೆ ಆ ಕಾಲದಲ್ಲಿ ೩,೫೦೦ ಜನರನ್ನು ಹಿಡಿಸುವಂಥ ಹಡಗಗ-ಳಿದ್ದವು ಎಂದು ನಂಬುವದು ಅಸಾಧ್ಯ ಎಂದು ಶಾಸ್ತ್ರಜ್ಞರ ಅಭಿಪ್ರಾಯವಿದೆ.

ಪೇರು ದೇಶದ "ಇಂಕಾ" ಜನರ ನಡೆವಳಿಕೆ ಹಾಗೂ ಭಾವನೆಗಳಿಗೂ ಈಸ್ಟರ ನಡುಗಡ್ಡೆಯ ಜನರ ನಡೆವಳಿಕೆ-ಭಾವನೆಗಳಿಗೂ ತುಂಬ ಸಾಮ್ಯ ಕಂಡುಬರುತ್ತದೆ.

ಸಂಶೋಧಕರು "ಹೋಟು ಮಾಟುವಾ" ಅರಸನು "ಇಂಕಾ" ಸಮಾಜದವನಾಗಿರಬೇಕೆಂದೂ ಆತನು ಕ್ರಿ. ಶ. ೮೫೦ ರಿಂದ ೧೨೦೦ರ ಅವಧಿಯಲ್ಲಿ ಈಸ್ಟರ ನಡುಗಡ್ಡೆಗೆ ಬಂದಿರಬೇಕು ಎಂದೂ ಅಭಿಪ್ರಾಯಪಟ್ಟಿದ್ದಾರೆ. ಮುಂದೆ ಈಸ್ಟರ ನಡುಗಡ್ಡೆಗೆ ಬಂದ ಪೊಲಿನೇಶಿಯನ್ ಜನರು "ಹೋಟು ಮಾಟುವಾ" ಜನರನ್ನು ಸಂಹರಿಸಿದರೇ ಹೇಗೆ ಎಂಬುದಕ್ಕೆ ಆಧಾರಗಳು ಸಿಗುತ್ತಿಲ್ಲ.

ಈಗ ಈಸ್ಟರ ನಡುಗಡ್ಡೆಯಲ್ಲಿ ವಾಸಿಸುತ್ತಿರುವ "ವಾಸ್ಕುಎನ್ಸೆನ್" (ಸ್ಪೆನಿಶ್ ಭಾಷೆಯಲ್ಲಿ ವಾಸ್ಕುವಾ ಎಂದರೆ ಈಸ್ಟರ ಎಂದಾಗುತ್ತದೆ.) ಜನರಿಗೂ ಪೊಲಿನೇಶಿಯನ್ ಜನರಿಗೂ ಸಾಮ್ಯ ವಿದೆ. ಇಲ್ಲಿ ಸಿಗುವ ಚಿತ್ರ ಲಿಪಿಗಳ ಮೂಲಕ ಈ ಜನರಿಗೂ ಚೀನಿ, ಹಿಂದೀ ಮತ್ತು ಇಜಿಪ್ಶಿಯನ್ ಜನರಿಗೂ ಸಂಬಂಧವಿದ್ದಿರಬೇಕು ಎಂದೆನಿಸುತ್ತದೆ.

೧೮೬೪ ರ ಘಟನೆ ಜರುಗದಿದ್ದರೆ ಈಸ್ಟರ ನಡುಗಡ್ಡೆಯಲ್ಲಿರುವ ರಾಕ್ಷಸೀ ಮೂರ್ತಿಗಳ ರಹಸ್ಯ ತಿಳಿದುಬಿಡುತ್ತಿತ್ತೇನೊ! ೧೮೬೨ ರಲ್ಲಿ ಈಸ್ಟರ ನಡುಗಡ್ಡೆಯ ರಾಜನನ್ನೂ ಜನರನ್ನೂ ಗುಲಾಮರನ್ನಾಗಿ ಮಾಡಿ ಬಂಧಿಸಿ ಒಯ್ದ ನಂತರ ೧೮೬೪ ರಲ್ಲಿ ತಾಹಿತಿ ನಡುಗಡ್ಡೆಯಿಂದ ಬಂದ ಮಿಶನರಿ ಜನರು ಮೂರ್ತಿಪೂಜೆಯನ್ನು ನಾಶಗೊಳಿಸುವದಕ್ಕಾಗಿ ಮರದ ಹಲಗೆಗಳ ಮೇಲೆ ಚಿತ್ರ ಲಿಪಿಯಲ್ಲಿ ಬರೆದಿದ್ದ ಲೇಖಗಳನ್ನು ಸುಟ್ಟು ಹಾಕಿದರು. ಇದರಿಂದ ಈಸ್ಟರ ನಡುಗಡ್ಡೆಯ ಮೂಲ ನಿವಾಸಿಗಳ ವಿಚಾರ ತಿಳಿಯುವದು ಕಠಿಣವಾಗಿದೆ. ಒಂದು ಗುಹೆಯಲ್ಲಿ ಅಡಗಿಸಿಟ್ಟಿದ್ದ ಒಂದು ಚಿತ್ರಲಿಪಿ ಲೇಖನ ಸಿಕ್ಕಿದ್ದರೂ ಅದರ ಅರ್ಥವನ್ನು ಗ್ರಹಿಸುವದು ಇದುವರೆಗೂ ಸಾಧ್ಯವಾಗಿಲ್ಲ.

೧೮೭೦ ರಲ್ಲಿ ಓರ್ವ ಸಾಹಸಿ ಆಂಗ್ಲನು ಈ ನಡುಗಡೆಯಲ್ಲಿ ೩೦,೦೦೦ ಎಕರೆ ಜಮೀನನ್ನು ಪಡೆದುಕೊಂಡು ಅದನ್ನು ಹುಲ್ಲುಗಾವಲನ್ನಾಗಿ ಮಾಡಿ ಆಡುಗಳನ್ನು ಸಾಕತೊಡಗಿದನು. ಈ ಉದ್ಯೋಗದಿಂದ ಈಗ ಚಿಲಿ ಸರಕಾರಕ್ಕೆ ಪ್ರತಿ ವರ್ಷ ೧ ಲಕ್ಷ ಡಾಲರು ಉತ್ಪನ್ನವಿದೆ. ಮುಂದೆ ಆಕಳು, ಕುದುರೆ, ಹಂದಿಗಳನ್ನೂ ಇಲ್ಲಿ ಸಾಕಲು ಪ್ರಾರಂಭಿಸಿದರು.

ಇಂದು ಈ ನಡುಗಡ್ಡೆಗೆ ವ್ಯಾಪಾರಿ ಮಹತ್ವ ಬಂದಿದೆ. ಇಲ್ಲಿಯ ಹವೆ ಆರೋಗ್ಯಕರವಾಗಿದೆ. ವಿಮಾನ ಸಂಚಾರ ಸೌಕರ್ಯದಿಂದ ಈ ನಡುಗಡ್ಡೆ ಜಗತ್ತಿಗೆ ಸಮೀಪವಾದಂತಾಗಿದ್ದು ವಿಮಾನ ನಿಲ್ದಾಣವೆಂದು ಈ ನಡುಗಡ್ಡೆಗೆ ಮಹತ್ವ ಬರತೊಡಗಿದೆ. ರಿಓ, ಸಾನವಾವ್ಲೊ, ಬ್ಯುನೊಏರ್ಸ್‌ಗಳಿಂದ ಜಪಾನ, ಆಸ್ಟ್ರೇಲಿಯ, ಇಂಡೋನೇಶಿಯ ಮೊದಲಾದ ದೇಶಗಳಿಗೆ ಹೋಗಲು ಈ ನಡುಗಡ್ಡೆ ನಡುವಿನ ನಿಲ್ದಾಣ ದೃಷ್ಟಿಯಿಂದ ತುಂಬ ಉಪಯುಕ್ತವೆನಿಸಿದೆ.

ಚಿಲಿ ಸರಕಾರ ಇಲ್ಲೀಗ ಒಂದು ಹೊಸ ವಿಮಾನ ನಿಲ್ದಾಣವನ್ನು ಕಟ್ಟುತ್ತಿದೆ. ೧೯೬೮ ರಲ್ಲಿ ಇದು ತಯಾರಾಗುವದು. ಆಗ ಅಲ್ಲಿ ಹೊಟೆಲ್, ಕ್ಲಬ್, ಸಿನೇಮಾ ಮುಂತಾದವುಗಳು ಬರುವವು. ಶಾಂತ ಈಸ್ಟರ ನಡುಗಡ್ಡೆ ಗದ್ದಲದ ಸ್ಥಳವಾಗುವದು.

ಅದೆಲ್ಲ ಸರಿ. ಆದರೆ ಈ ನಡುಗಡ್ಡೆಯಲ್ಲಿರುವ ರಾಕ್ಷಸಾಕಾರದ ಮೂರ್ತಿಗಳ ರಹಸ್ಯ ಸ್ಫೋಟವಾಗುವ ಸಂಭವ ಮಾತ್ರ ಕಂಡುಬರುತ್ತಿಲ್ಲ.

(ಆಧಾರದಿಂದ)



ನಾವು ನಮ್ಮ ಸುಖದ ಚಂಡನ್ನು ಮನೋರಾಜ್ಯದ ಆವೇಗದಲ್ಲಿ ಎಲ್ಲಿಯೋ ದೂರ ಎಸೆದು ಬಿಡುತ್ತೇವೆ. ಬಳಿಕ ಜೀವನವಿಡೀ ಅದನ್ನು ಹುಡುಕುತ್ತ ಕೂಡ್ರುತ್ತೇವೆ.

*     *

ಮನುಷ್ಯನಲ್ಲಿ ಮತ್ತು ದೇವರಲ್ಲಿ ಇರುವ ಭೇದವಿಷ್ಟೆ: ಮನುಷ್ಯ ಒಂದೇ ಬಗೆಯ ಸಾವಿರಾರು ವಸ್ತುಗಳನ್ನು ನಿರ್ಮಿಸಬಲ್ಲನು; ದೇವರಿಗೆ ಅದು ಸಾಧ್ಯವಿಲ್ಲ. ಆವನ ಪ್ರತಿಯೊಂದು ಕೃತಿಯೂ ಇನ್ನೊಂದಕ್ಕಿಂತ ತುಸುವಾದರೂ ಭಿನ್ನವಾಗಿಯೆ ಇರುತ್ತದೆ.

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

**ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ.**

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಹಿಂದಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. **ಅನಾಮಧೇಯ**
(ಅ) ಸುಪ್ರಸಿದ್ಧ (ಆ) ಅಪ್ರಸಿದ್ಧ (ಇ) ಕೈಯ ನಾಲ್ಕನೇ ಬೆರಳು (ಈ) ನಾಮ ಹಾಕಿಕೊಳ್ಳದಿರುವ ಭಸ್ಮಧಾರಿ.

೨. **ಕಾತರ**
(ಅ) ಅವಸರ (ಆ) ಕಳವಳ (ಇ) ಬೇಗ ಬೇಗನೆ (ಈ) ಗೋಳಾಡುವದು.

೩. **ಕೇಡಿ**
(ಅ) ಶತ್ರು (ಆ) ಕಳ್ಳ (ಇ) ಕೆಡುಕು ಮಾಡುವವ (ಈ) ಹೀನ.

೪. **ಜರಾ(ರೆ)**
(ಅ) ಒಂದಿಷ್ಟು (ಆ) ತಂಬಾಕು (ಇ) ಪತಿವ್ರತೆ ಅಲ್ಲದವಳು (ಈ) ಮುಪ್ಪು.

೫. **ಪರಿಸರ**
(ಅ) ಆಹಾರ (ಆ) ಬಯಲು ಜಾಗ (ಇ) ನೆರೆಹೊರೆ (ಈ) ಆಸಸ್ಥೆ.

೬. **ಬಸ್ನ**
(ಅ) ದುಃಖ (ಆ) ದಣಿವು (ಇ) ನರಳಾಟ (ಈ) ಬಯಕೆ.

೭. **ಬೀರು**
(ಅ) ಕೊಡು (ಆ) ಹಂಚು (ಇ) ಅಂಜುಬುರುಕ (ಈ) ಬೀಸು.

೮. **ರೂಹು(ಪು)**
(ಅ) ಹೊಳಪು (ಆ) ನಯ (ಇ) ಸೂಕ್ಷ್ಮ ಕೆಲಸ (ಈ) ಆಕೃತಿ.

೯. **ಸೌಹಾರ್ದ**
(ಅ) ಒಳ್ಳೇತನ (ಆ) ಗೆಳೆತನ (ಇ) ಪ್ರೀತಿ (ಈ) ಆನಂದ.

೧೦. **ಹಂತ**
(ಅ) ಅಳತೆ (ಆ) ಸಾಲು (ಇ) ಚಪ್ಪರ (ಈ) ಪಾವಟಿಗೆ.

೧೧. **ಭಂಗಿ**
(ಅ) ನಿಲುವು (ಆ) ಕಷ್ಟಪಡುವವ (ಇ) ಪ್ರತಿರೂಪ (ಈ) ಶಿವನ ಒಬ್ಬ ಗಣ.

೧೨. **ಸಾಕ್ಷರ**
(ಅ) ಓದುಗ (ಆ) ಸಾಕ್ಷ್ಯ ಹೇಳುವವ (ಇ) ಅಕ್ಷರ ಬಲ್ಲವ (ಈ) ಲಿಪಿ ತಜ್ಞ.

# 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. **ಅನಾಮಧೇಯ.** (ಅ) ಅಪ್ರಸಿದ್ಧ; ತೀರ ಸಾಮಾನ್ಯ ಮನುಷ್ಯ; "ಆವನೊಬ್ಬ ಅನಾಮಧೇಯ" ಎಂದಂತೆ. (ಸಂಸ್ಕೃತ) ಅ = ಇಲ್ಲ, ನಾಮಧೇಯ = ಹೆಸರು; ಹೆಸರಿಲ್ಲದವನು ಅಂದರೆ ಅವನ ಹೆಸರು ಪ್ರಸಿದ್ಧವಾಗಿಲ್ಲ ಎಂದು ತಾತ್ಪರ್ಯ.

೨. **ಕಾತರ.** (ಅ) ಕಳವಳ; ಭಯ; ಕಳವಳಗೊಂಡವ; ಭೀರು; ಮುಂಗಾಣದವ, ಉದಾ: ಮಗನ ಅಸ್ವಸ್ಥದ ಸುದ್ದಿಯಿಂದ ಅವಳು ಕಾತರಳಾದಳು. (ಸಂಸ್ಕೃತ).

೩. **ಕೇಡಿ.** (ಇ) ಕೆಡುಕು ಮಾಡುವವ; ದುಷ್ಟ; ದುಷ್ಕರ್ಮಿ; ಕೆಟ್ಟವ. ಉದಾ: ಆ ಊರಲ್ಲಿ ಅವನೊಬ್ಬ ದೊಡ್ಡ ಕೇಡಿ. ಶಬ್ದಗಳ ತುದಿಯಲ್ಲಿ ಬಂದಾಗ ಕಳೆದುಕೊಂಡವ ಎಂದರ್ಥ. ಉದಾ: ಬುದ್ಧಿಗೇಡಿ, ಅಂದಗೇಡಿ, ಕುಲಗೇಡಿ. (ಕನ್ನಡ) ಕೆಡು = ಹಾಳಾಗು ಶಬ್ದದಿಂದ.

೪. **ಜರಾ(ರೆ).** (ಈ) ಮುಪ್ಪು. ಉದಾ: ಜರೆ ಬಂದರೂ ನರೆ ಬಾರದು. (ಸಂಸ್ಕೃತ)

೫. **ಪರಿಸರ.** (ಇ) ನೆರೆಹೊರೆ; ಸುತ್ತಮುತ್ತಲೂ ಇರುವ ಸಂಗತಿಗಳು. ಉದಾ— ಮನುಷ್ಯನ ಮೇಲೆ ಪರಿಸರದ ಪ್ರಭಾವ ಬಹಳವಾಗಿರುತ್ತದೆ. (ಸಂ.) ಪರಿ= ಸುತ್ತಲೂ, ಸರ = ಚಲಿಸು; ಆದ್ದರಿಂದ ನೆರೆಹೊರೆ.

೬. **ಬನ್ನ.** (ಅ) ದುಃಖ; ಕಷ್ಟ. ಉದಾ— ಪರಿಪರಿಯ ಬನ್ನಗಳನ್ನು ಅನುಭವಿಸಬೇಕಾಯಿತು. ಸಂಸ್ಕೃತದ ಭಂಗ ಶಬ್ದದ ತದ್ಭವ.

೭. **ಬೀರು.** (ಅ) ಹಂಚು; ಚೆಲ್ಲು; ಒಗೆ. ಉದಾ—ಬುದ್ಧನು ತನ್ನ ಸಂದೇಶವನ್ನು ಜಗತ್ತಿಗೆಲ್ಲ ಬೀರಿದನು. (ಕನ್ನಡ). ಬೀರು = ಕಪಾಟು; ಒಂದು ಬಗೆಯ ಮದ್ಯ ಎಂಬ ಅರ್ಥಗಳೂ ಇಂಗ್ಲೀಷಿನಿಂದ ಪ್ರಸಾರಕ್ಕೆ ಬಂದಿವೆ.

೮. **ರೂಹು(ಪು).** (ಈ) ಆಕೃತಿ; ರೂಪ; ಆದ್ದರಿಂದ ಚೆಲುವು. ಉದಾ—ಪಾಪಿಗಳಿದ್ದಲ್ಲಿ ರೂಪುಳ್ಳ ವಸ್ತುವ ತೋರಬಾರದು. (ಸಂಸ್ಕೃತ) ರೂಪ = ಆಕೃತಿ, ಸೌಂದರ್ಯ.

೯. **ಸೌಹಾರ್ದ.** (ಅ) ಗೆಳೆತನ; ಮಿತ್ರತ್ವ. ಉದಾ.— ಭಾರತವು ಎಲ್ಲ ರಾಷ್ಟ್ರಗಳ ಪ್ರೀತಿ ಸೌಹಾರ್ದಗಳನ್ನು ಗಳಿಸುತ್ತಿದೆ. (ಸಂಸ್ಕೃತ) ಸು = ಒಳ್ಳೆ, ಹೃದ್ = ಹೃದಯ; ಒಳ್ಳೇ ಹೃದಯವಿರುವಿಕೆ ಎಂದರೆ ಮಿತ್ರತ್ವ.

೧೦. **ಹಂತ.** (ಈ) ಪಾವಟಿಗೆ; ಮೆಟ್ಟಲು; ಆದ್ದರಿಂದ ಮಟ್ಟ. ಉದಾ.— ಈ ಕಾರ್ಯ ಹಂತ ಹಂತವಾಗಿ ಸಾಗತಕ್ಕದ್ದು. (ಕನ್ನಡ) ಹತ್ತು ಎಂಬ ಶಬ್ದದಿಂದ ಹುಟ್ಟಿದ್ದು.

೧೧. **ಭಂಗಿ.** (ಅ) ನಿಲುವು; ರೀತಿ. ಉದಾ.- ಅವಳ ದೇಹದ ಭಂಗಿ ಮೋಹಕವಿತ್ತು; ಬೇರೊಂದು ಭಂಗಿಯಿಂದ ಹೇಳಿದ್ದಾದರೆ; (ಸಂ). ಒಂದು ಮಾದಕ ದ್ರವ್ಯ (ಭಾಂಗ) ಕ್ಕೂ ಈ ಹೆಸರಿದೆ.

೧೨. **ಸಾಕ್ಷರ.** (ಇ) ಅಕ್ಷರ ಬಲ್ಲವ; ಓದು ಬರಹ ತಿಳಿದವ; ಉದಾ- ಸ್ವಾತಂತ್ರ್ಯ ಬಂದಮೇಲೆ ಸಾಕ್ಷರರ ಸಂಖ್ಯೆ ಭರದಿಂದ ಹೆಚ್ಚಿದೆ. (ಸಂ.) ಸ = ಉಳ್ಳವ, ಅಕ್ಷರ = ಅಕ್ಷರ.

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ಅರಿಯಿರಿ.

೬—೮ ಸರಿಯಿದ್ದರೆ .... ಸಾಧಾರಣ
೯—೧೦ ,, .... ಉತ್ತಮ
೧೦—೧೨ ,, .... ಅತ್ಯುತ್ತಮ

# ಏರ್ ಕಂಡೀಶನಿಂಗ್

ಸೆಕೆಗಾಲದಲ್ಲಿ ಹವೆ ತುಸು ತಂಪಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದೋ, ಚಳಿಗಾಲದಲ್ಲಿ ತುಸು ಬೆಚ್ಚಗಿದ್ದಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದೋ ಪ್ರತಿಯೊಬ್ಬನೂ ಹೇಳಿಕೊಳ್ಳುತ್ತಾನೆ.

ಇಡಿಯ ವಾತಾವರಣದಲ್ಲಿ ಇಂಥ ಬದಲಾವಣೆಯನ್ನು ಸಾಧಿಸುವದು ಅಶಕ್ಯವಾಗಿದ್ದರೂ ವಾಯು ಸಮಶೀತೋಷ್ಣೀಕರಣ (ಏರ್ ಕಂಡೀಶನಿಂಗ) ಪದ್ಧತಿಯಿಂದ ನೀವು ಕುಳಿತಿರುವ ಕೋಣೆಯಲ್ಲಿಯ ವಾತಾವರಣವನ್ನು ನಿಮಗನುಕೂಲವಾಗುವಂತೆ ನಿರ್ಮಿಸಿಕೊಳ್ಳಬಹುದಾಗಿದೆ. ಈ ಪದ್ಧತಿಯಿಂದ ಹವೆಯನ್ನು ಸ್ವಚ್ಛಮಾಡಿಕೊಂಡು ಅದರಲ್ಲಿ ಅವಶ್ಯಕವಿರುವಷ್ಟು ಚಳಿಯನ್ನೊ ಸೆಕೆಯನ್ನೊ ಉಂಟುಮಾಡಿಕೊಳ್ಳಬಹುದು.

ವಾಯುಸಮಶೀತೋಷ್ಣೀಕರಣ ಪದ್ಧತಿಯ ಉಪಯೋಗವನ್ನು ಕೇವಲ ಮನೆ, ಕಚೇರಿ ಅಥವಾ ಸಾರ್ವಜನಿಕ ಸಭಾಗೃಹಗಳಲ್ಲಿ ಮಾತ್ರವಲ್ಲ, ಬಸ್ಸು, ರೇಲ್ವೆ, ವಿಮಾನ, ಉಗಿಹಡಗಗಳಲ್ಲಿಯೂ ಸಾವಿರಾರು ಅಡಿ ಆಳವಿರುವ ಗಣಿಗಳಲ್ಲಿಯೂ ಮಾಡಿಕೊಳ್ಳಬಹುದಾಗಿದೆ. ಔದ್ಯೋಗಿಕ ಕ್ಷೇತ್ರದಲ್ಲಿ ಉತ್ಪಾದನೆಯನ್ನೂ ಉತ್ಪಾದಿಸುವ ವಸ್ತುಗಳ ಗುಣವನ್ನೂ ವಾಯುಸಮಶೀತೋಷ್ಣೀಕರಣದ ಸಹಾಯದಿಂದ ಹೆಚ್ಚಿಸಿಕೊಳ್ಳಲಾಗುತ್ತಿದೆ. ಈ ಪದ್ಧತಿಯನ್ನು ಉತ್ತಮ ರೀತಿಯಲ್ಲಿ ಉಪಯೋಗಿಸಿದರೆ ಒಂದೆಡೆ ಕೋಣೆಯಲ್ಲೊ ಕಾರಖಾನೆಯಲ್ಲೊ ಇದ್ದು ಕೆಲಸ ಮಾಡುವವರ ಆರೋಗ್ಯ ಬಹುಮಟ್ಟಿಗೆ ಸುಧಾರಿಸಿ ಅವರ ಕಾರ್ಯಕ್ಷಮತೆ ಹೆಚ್ಚುತ್ತದೆಂದು ಕಂಡುಬಂದಿದೆ.

ವಾಯುಸಮಶೀತೋಷ್ಣೀಕರಣದಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳಿವೆ. ವಿಸ್ತಾರವಾದ ಜಾಗದಲ್ಲಿ ಅನೇಕ ಕೋಣೆಗಳು ಇಲ್ಲವೆ ಭಾಗಗಳಿದ್ದಲ್ಲಿ ಅಲ್ಲಿ 'ಮಧ್ಯವರ್ತಿ ಸ್ಥಾನ ಪದ್ಧತಿ' (Central Station type)ಯನ್ನು ಉಪಯೋಗಿಸುತ್ತಾರೆ. ಈ ಪದ್ಧತಿಯಲ್ಲಿ ಎಲ್ಲ ಉಪಕರಣಗಳನ್ನು ಒಂದೇ ಕೋಣೆಯಲ್ಲಿ (ನೆಲಮಾಳಿಗೆಯಲ್ಲಿ) ಇಡುತ್ತಾರೆ. ಮತ್ತು ವಾಯು ಸಮಶೀತೋಷ್ಣೀಕರಣ ಮಾಡಿದ ಹವೆಯನ್ನು ನಳಿಗೆಗಳ ಮೂಲಕ ಎಲ್ಲ ಕೋಣೆಗಳಲ್ಲಿ ಓಡಾಡಿಸುತ್ತಾರೆ. ಎರಡನೆಯ ಪ್ರಕಾರಕ್ಕೆ 'ಏಕ ಸ್ಥಾನ ಪದ್ಧತಿ' (Unitary) ಎನ್ನುತ್ತಾರೆ. ಒಂದೇ ಒಂದು ಕೋಣೆ ಅಥವಾ ಬಸ್ ಮುಂತಾದ್ದರಲ್ಲಿ ಸಮಶೀತೋಷ್ಣೀಕೃತ ಹವೆ ಬೇಕಾದಲ್ಲಿ ಈ ಪದ್ಧತಿಯನ್ನು ಉಪಯೋಗಿಸುತ್ತಾರೆ. ಒಮ್ಮೊಮ್ಮೆ ಎರಡು ಅಥವಾ ಮೂರು ಕೋಣೆಗಳಿಗೆ ವಾಯುಸಮಶೀತೋಷ್ಣೀಕರಣ ಅಗತ್ಯವಿದ್ದಲ್ಲಿ ಈ 'ಏಕ ಸ್ಥಾನ ಪದ್ಧತಿ' ಯನ್ನುಪಯೋಗಿಸುತ್ತಾರೆ. ಸಮಶೀತೋಷ್ಣೀಕರಣವಾದ ಹವೆಯನ್ನು ಒಂದು ಕೋಣೆಯಿಂದ ಇನ್ನೊಂದು ಕೋಣೆಗೆ ನಳಿಗೆಗಳ ಮೂಲಕ ಸಾಗಿಸುತ್ತಾರೆ.

ವಾಯು ಸಮಶೀತೋಷ್ಣೀಕರಣ ಪದ್ಧತಿಯೆಂದರೇನೆಂಬುದನ್ನು ತಿಳಿದುಕೊಳ್ಳುವಾಗ ಹವೆ ಎಂದರೇನು ಮತ್ತು ಅದರ ಕಾರ್ಯವೇನು ಎಂಬುದನ್ನು ಮೊದಲು ತಿಳಿದುಕೊಳ್ಳಬೇಕಾಗುತ್ತದೆ.

ಹವೆ ಮುಖ್ಯವಾಗಿ ಆಕ್ಸಿಜನ್ ಮತ್ತು ನೈಟ್ರೊಜನ್ ವಾಯುಗಳ ಮಿಶ್ರಣದಿಂದಾಗಿರುತ್ತದೆ. ಇದಲ್ಲದೆ ಚಿಕ್ಕ ಚಿಕ್ಕ ಪ್ರಮಾಣದಲ್ಲಿ ಇನ್ನಿತರ ಕೆಲ ವಾಯುಗಳೂ ನೀರಿನ ಬಾಷ್ಪವೂ ಕೂಡಿರುತ್ತದೆ. ಧೂಳು, ಹೊಗೆ, ಕಾಡಿಗೆಗಳಿಂದ ಅದು ಅಶುದ್ಧವಾಗಿರುತ್ತದೆ. ಈ ಅಶುದ್ಧತೆ ಹೆಚ್ಚಿನ ಪ್ರಮಾಣದಲ್ಲಿದ್ದರೆ ಹವೆ ಆರೋಗ್ಯಕ್ಕೆ ಅಹಿತವಾಗುತ್ತದೆ.

ಹವೆಯಲ್ಲಿಯ ಆರ್ದ್ರತೆಯ ಪ್ರಮಾಣವು ಹೆಚ್ಚುಕಡಿಮೆಯಾಗಬಲ್ಲದು. ಕೆಲವು ವೇಳೆ ಸಂಪೂರ್ಣ ಒಣ ಹವೆಯಿರುವದು. ಇನ್ನು ಕೆಲವು ವೇಳೆ ಮತ್ತೆ ನೀರಿನಂಶ (ಬಾಷ್ಪ) ಸೇರುವದು ಸಾಧ್ಯವಿಲ್ಲದ ಮಟ್ಟಿಗೆ ತೇವದಿಂದ ತುಂಬಿರುವದು. ಹವೆಯಲ್ಲಿಯ ಈ ಆರ್ದ್ರತೆ ಉಷ್ಣತಾಮಾನವನ್ನವಲಂಬಿಸಿರುತ್ತದೆ. ಹವೆ ಬಿಸಿಯೇರಿದಂತೆ ಅದು ಹೆಚ್ಚು ನೀರನ್ನು ಹೀರಿಕೊಳ್ಳುತ್ತದೆ. ೩೨ ಡಿಗ್ರಿ ಉಷ್ಣತೆಯಿರುವಾಗ ಒಂದು ಪೌಂಡು ಹವೆಯು ೪⁄೧೦೦೦ ಪೌಂಡು ನೀರಿನಂಶವನ್ನು ಸೇರಿಸಿಕೊಳ್ಳಬಲ್ಲದಾದರೆ ೧೦೦ ಡಿಗ್ರಿ ಉಷ್ಣತೆಯಲ್ಲಿ ಇದಕ್ಕಿಂತಲೂ ೧೨ ಪಟ್ಟು ಹೆಚ್ಚು ನೀರಿನಂಶವನ್ನು ಸೇರಿಸಿಕೊಳ್ಳಬಲ್ಲದು.

ಯಾವ ವಾಯುವನ್ನೇ ಆಗಲಿ, ಬಿಸಿ ಮಾಡಿದರೆ ಅದು ಪ್ರಸರಣ ಹೊಂದುವದು. ಹವೆಯನ್ನು ಬಿಸಿ ಮಾಡಿದರೆ ಅದು ವಿರಳವಾಗಿ ನೀರಿನಂಶವನ್ನು ಶೇಖರಿಸಿಕೊಳ್ಳಲು ಸ್ಥಳ ಮಾಡಿಕೊಡುವದು. ಅದನ್ನು ತಂಪು ಮಾಡಿದಾಗ ಅದರ ವಿಸ್ತಾರ ಕಡಿಮೆಯಾಗಿ ಅದರಲ್ಲಿ ಅಷ್ಟು ನೀರಿನಂಶ ಶೇಖರಿಸುವದು ಅಸಾಧ್ಯವಾಗುವದು. ವಾತಾವರಣದಲ್ಲಿ ವಸ್ತುತಃ ಇದೇ ರೀತಿ ನಡೆಯುತ್ತದೆ. ಹವೆಯು ಯಾವುದಾದರೂ ಕಾರಣದ ಮೂಲಕ ತಂಪಾದಾಗ ಅದರಲ್ಲಿರುವ ನೀರಿನ ಬಾಷ್ಪವು ಚಿಕ್ಕ ಚಿಕ್ಕ ನೀರಿನ ಹನಿಗಳಲ್ಲಿ ರೂಪಾಂತರ ಹೊಂದಿ ಜಿಗಿಕ ಮೋಡ ಇಲ್ಲವೆ ಮಂಜು ನಿರ್ಮಾಣವಾಗುತ್ತದೆ. ಆದರೆ ಹವೆಯನ್ನು ಒಮ್ಮಿಂದೊಮ್ಮೆ ಬಹಳ ತಂಪು ಮಾಡಿದರೆ ಮಂಜು ಬರ್ಫವಾಗುತ್ತದೆ.

ವಾಯು ಸಮಶೀತೋಷ್ಣೀಕರಣದ ಪದ್ಧತಿಯಲ್ಲಿ ನಡೆಯುವ ಮುಖ್ಯ ಸಂಗತಿಯೆಂದರೆ ಹವೆಯು ಅವಶ್ಯಕ್ಕಿಂತ ಹೆಚ್ಚು ತಂಪು ಅಥವಾ ಉಷ್ಣವಾಗದಂತೆ ಮಾಡುವದಾಗಿದೆ. ಹವೆಯಲ್ಲಿಯ ಬಾಷ್ಪಾಂಶವನ್ನು ಹೆಚ್ಚಿಸುವದು ಸಾಧ್ಯವಿದೆ. ಉದಾಹರಣಾರ್ಥ ನೀರನ್ನು ಕುದಿಸಿದರೆ ನೀರು ಉಗಿಯಾಗಿ ಹವೆಯಲ್ಲಿನ ಬಾಷ್ಪ ಪ್ರಮಾಣ ಹೆಚ್ಚುವದು. ಆದರೆ ಹವೆಯಿಂದ ಬಾಷ್ಪವನ್ನು ಹೊರತೆಗೆಯುವದಾಗಲಿ, ಕಡಿಮೆ ಮಾಡುವದಾಗಲಿ ಕಠಿಣ ಕಾರ್ಯವಾಗಿದೆ. ವಾಯು ಸಮಶೀತೋಷ್ಣೀಕರಣ ಪದ್ಧತಿಯಲ್ಲಿರುವ ವಿಶೇಷ ಸಲಕರಣೆಗಳಿಂದ ಹವೆಯನ್ನು ತಂಪಾಗಿ ಮಾಡಲಾಗುವದು. ೭೫ ಡಿಗ್ರಿ ಉಷ್ಣತಾಮಾನವು ಸಾಮಾನ್ಯವಾಗಿ ಸುಖಕಾರಕವೆಂದು ಭಾವಿಸಲಾಗುತ್ತದೆ. ಇಷ್ಟು ಉಷ್ಣತಾಮಾನದಲ್ಲಿ ಹವೆಯು ಪರಮಾವಧಿ ಎಷ್ಟು ಬಾಷ್ಪವನ್ನು ತೆಗೆದುಕೊಳ್ಳಬಲ್ಲದೋ ಅದರ ನೂರಕ್ಕೆ ೪೦ ರಿಂದ ೫೦ ರಷ್ಟು ಬಾಷ್ಪಪ್ರಮಾಣ ಇರುವದು ಸುಖಕರವೆಂದು ಗಣಿಸಲಾಗುತ್ತದೆ. ಆದರೆ ಈ ಪ್ರಮಾಣ ಕೆಲವಡೆ ಅಲ್ಲಿಯ ಪರಿಸ್ಥಿತಿಗನುಗುಣವಾಗಿ ಬದಲಾಗುವ ಸಂಭವವಿರುತ್ತದೆ. ಉದಾಹರಣೆಗೆ ಕಾರಖಾನೆಯಲ್ಲಿಯ ವಾತಾವರಣವು ಬಹಳಷ್ಟು ತೇವವುಳ್ಳದ್ದಿರುತ್ತದೆ. ಇಂಥ ಪ್ರಸಂಗದಲ್ಲಿ ಹೊರಗಿನಿಂದ ಬರುವ ಹವೆಯಲ್ಲಿಯ ಬಾಷ್ಪ ಪ್ರಮಾಣವು ನೂರಕ್ಕೆ ೪೦ ರಷ್ಟು ಇರಬೇಕಾದ ಅಗತ್ಯವಿರುವದಿಲ್ಲ. ತೀರ ಒಣ ಹವೆಯಲ್ಲಿ ಬಾಷ್ಪ ಪ್ರಮಾಣವು ನೂರಕ್ಕೆ ೪೦ ಕ್ಕಿಂತ ಹೆಚ್ಚಿಗಿರಬೇಕಾಗುತ್ತದೆ.

ಹೀಗೆ ಹವೆಯ ಉಷ್ಣತೆ ಮತ್ತು ಆರ್ದ್ರತೆಯ ನಿಯಂತ್ರಣವೇ ಸಮಶೀತೋಷ್ಣೀಕರಣದ ಮುಖ್ಯ ತತ್ವವಾಗಿದೆ.

ವಾಯುಸಮಶೀತೋಷ್ಣೀಕರಣದ ಯಾಂತ್ರಿಕ ವಿಭಾಗದಲ್ಲಿ ಈ ರೀತಿ ಜೋಡಣೆಯಿರುತ್ತದೆ: ಮೊದಲಿಗೆ ಒಳಗೆ ಬರುವ ಹವೆಯನ್ನು ಶುದ್ಧ ಮಾಡುವ ಯಂತ್ರವಿರುತ್ತದೆ. ಹವೆಯನ್ನು ವಾಯುಶೋಧನ ಯಂತ್ರ (ಏರಫಿಲ್ಟರ್)

ಇಲ್ಲವೆ ವಿದ್ಯುಚ್ಛಕ್ತಿಯ ಸಹಾಯದಿಂದ ಶುದ್ಧ ಮಾಡಲಾಗುತ್ತದೆ. ಸ್ವಚ್ಛಗೊಳಿಸಲ್ಪಟ್ಟ ಹವೆಯನ್ನು ಒಂದು ಚಿಕ್ಕ ಕೋಣೆಗೆ ಸಾಗಿಸುತ್ತಾರೆ. ಇಲ್ಲಿ ಹವೆಯಲ್ಲಿನ ಆರ್ದ್ರತೆಯನ್ನು ಪ್ರಥಮತಃ ತೆಗೆದುಹಾಕುತ್ತಾರೆ. ಅನಂತರ ಅವಶ್ಯಕವಿರುವಷ್ಟು ಆರ್ದ್ರತೆಯನ್ನು ಮತ್ತೆ ತುಂಬುತ್ತಾರೆ. ಎಲಿಮಿನೇಟರದ ಸಹಾಯದಿಂದ ಗಾಳಿಯಿಂದ ತೆಗೆದ ಆರ್ದ್ರತೆಯನ್ನು ನೀರಾಗಿ ಪರಿವರ್ತಿಸಿ ಅದನ್ನು ಹೊರಗೆ ಚಲ್ಲಿ ರಿ-ಹೀಟರದ ಸಹಾಯದಿಂದ ಉಷ್ಣತೆಯ ಮಾನವನ್ನು ಹೆಚ್ಚಿಸುತ್ತಾರೆ. ಈ ರೀತಿ ಶುದ್ಧವಾಗಿರುವ ಹವೆಯನ್ನು ಚಿಕ್ಕ ನಳಿಗೆಗಳಿಂದ ಮತ್ತು ಬೀಸಣಿಕೆಗಳ ಸಹಾಯದಿಂದ ಮುಂದಕ್ಕೆ ಸಾಗಿಸುತ್ತಾರೆ.

ಭಾರತದಲ್ಲಿ ವಾಯುಸಮಶೀತೋಷ್ಣೀಕರಣ ಪದ್ಧತಿಯ ಉಪಯೋಗ ಇನ್ನೂ ತೀರ ಮರ್ಯಾದಿತವಾಗಿದ್ದರೂ ಪಾಶ್ಚಾತ್ಯ ದೇಶಗಳಲ್ಲಿ ಇದರ ಉಪಯೋಗ ದೊಡ್ಡ ಪ್ರಮಾಣದಿಂದ ನಡೆದಿದೆ.

ಈ ಪದ್ಧತಿಯ ಶೋಧಕಾರ್ಯದಲ್ಲಿ ಡಾ. ವಿಲೀಸ ಕರಿಯರ್ ಇವರು ಬಹಳ ಪರಿಶ್ರಮಪಟ್ಟಿದ್ದಾರೆ. ಜವಳಿ ಉದ್ದಿಮೆಯಲ್ಲಿಯ ಅನುಭವವು ಈ ಪದ್ಧತಿಯ ಉಗಮಸ್ಥಾನವೆಂದು ಅವರು ಅಭಿಪ್ರಾಯಪಟ್ಟಿದ್ದಾರೆ. ಯಾವ ದಿನ ಹವೆಯು ತೇವದಿಂದ ಕೂಡಿರುವದೊ ಆ ದಿನ ನೂಲಿನ ಗಿರಣಿಯಲ್ಲಿಯ ನೂಲು ತೆಗೆಯುವ ಮತ್ತು ನೇಯುವ ಕಾರ್ಯವನ್ನು ವಿಶೇಷ ಕಷ್ಟವಿಲ್ಲದೆ ಮಾಡಲು ಸಾಧ್ಯವಾಗುವದು. ನೂಲು ತೇವವಿದ್ದರೆ ಅದು ಹರಿಯುವದು ಕಡಿಮೆ. ಮತ್ತು ಅದರಲ್ಲಿ ಸ್ಥಿರವಿದ್ಯುತ್ (Static electricity) ಕಡಿಮೆಯಿರುತ್ತದೆ. ಇದರ ಬದಲು ಉಷ್ಣ ಇಲ್ಲವೆ ಒಣ ಹವೆಯಿರುವಾಗ ನೂಲು ಮೇಲಿಂದ ಮೇಲೆ ಹರಿಯುತ್ತದೆ. ನೂಲೂ ಚೆನ್ನಾಗಿ ಒರವದಿಲ್ಲ. ಹವೆಯು ಸದಾ ತೇವದಿಂದ ಕೂಡಿದ್ದರೆ ಗಿರಣಿಯ ಕೆಲಸ ಚೆನ್ನಾಗಿ ಸಾಗುವದೆಂಬ ಕಲ್ಪನೆ ಹೊಳೆದದ್ದೇ ವಾಯುಸಮಶೀತೋಷ್ಣೀಕರಣ ಪದ್ಧತಿಯ ಸಂಶೋಧನೆಗೆ ಕಾರಣವಾಯಿತು.

ಹವೆಯಲ್ಲಿ ವಿಶಿಷ್ಟ ಪ್ರಮಾಣದ ಆರ್ದ್ರತೆಯನ್ನು ಹೇಗೆ ಶಾಶ್ವತವಾಗಿ ಇಡಬಹುದು, ಅದನ್ನು ಹೇಗೆ ಸ್ವಚ್ಛಮಾಡಬಹುದು ಮತ್ತು ಉಷ್ಣತಾಮಾನದ ಮೇಲೂ ಹೇಗೆ ನಿಯಂತ್ರಣ ವಿಡಬಹುದು ಎಂಬುದರ ವಿಚಾರವನ್ನು ಸಂಶೋಧಕರು ಮಾಡತೊಡಗಿದರು. ಈ ವಿಚಾರದಿಂದಲೆ ವಾಯುಸಮಶೀತೋಷ್ಣೀಕರಣ ಪದ್ಧತಿಯ ಉಗಮವಾಯಿತು. ಗಿರಣಿಗಳಲ್ಲಿ ಕೇವಲ ವಾಯುಸಮಶೀತೋಷ್ಣೀಕರಣ ಮಾಡಿದ ಹವೆಯು ಇರಬೇಕೆಂದು ಬಾಗಿಲು ಮತ್ತು ಕಿಡಕಿಗಳನ್ನು ಮುಚ್ಚಿಡಬೇಕಾಗುವದು. ಇಂಥ ಹವೆಯಲ್ಲಿ ನೇಯುವ ಬಟ್ಟೆ ಸ್ವಚ್ಛ ಮತ್ತು ಉತ್ತಮ ತರಗತಿಯವಾಗುವವು. ಅದರಂತೆ ಕೆಲಸಗಾರರ ಆರೋಗ್ಯವೂ ಸುಧಾರಿಸಿ ಅವರಿಗೆ ಸ್ವಾಸ್ಥ್ಯ ಲಭಿಸಿ ಅವರ ಕಾರ್ಯಕ್ಷಮತೆ ಹೆಚ್ಚುವದು.

ಪಾಶ್ಚಾತ್ಯ ದೇಶಗಳಲ್ಲಿ ಈಗ ಸುಮಾರು ೧೦೦ ಬಗೆಯ ಉದ್ದಿಮೆಗಳಲ್ಲಿ ಈ ಪದ್ಧತಿಯ ಉಪಯೋಗ ಮಾಡುತ್ತಾರೆ. ಕಾಗದ, ತಂಬಾಕು, ಚರ್ಮ, ಅನ್ನಪದಾರ್ಥ, ರಬ್ಬರ, ಮುದ್ರಣ, ತೈಲಶೋಧನ ಮುಂತಾದ ವಿವಿಧ ಬಗೆಯ ಗಿರಣಿಗಳಲ್ಲಿ ಈ ಪದ್ಧತಿಯ ಉಪಯೋಗ ಮಾಡಿಕೊಳ್ಳುತ್ತಿದ್ದಾರೆ. ಭಾರತದಲ್ಲೂ ರೇಲ್ವೆ ಡಬ್ಬಿ, ಕೆಲ ಹೋಟೆಲು ಹಾಗು ಶ್ರೀಮಂತರ ಮನೆಗಳಲ್ಲಿ ಆಗಲೆ ಇದನ್ನು ಉಪಯೋಗಿಸಲಾಗುತ್ತಿದೆ. ಇಲ್ಲಿಯೂ ಈ ಪದ್ಧತಿ ಹೆಚ್ಚಿನ ಪ್ರಮಾಣದಲ್ಲಿ ಪ್ರಚಾರಕ್ಕೆ ಬಂದೀತು ಎಂಬ ಆಶೆಯಿದೆ. ವಿಪರೀತ ಸೆಕೆಯಿರುವ ಈ ದೇಶದಲ್ಲಿ ಏರ್ ಕಂಡೀಶನಿಂಗಿನ ಅಗತ್ಯ ಬಹಳವಾಗಿದೆ.

(ಸಂಗೃಹೀತ).



# ಜ್ಞಾನ - ವಿಜ್ಞಾನ ಕೋಶ

ಸಂಗ್ರಾಹಕರು : ರಾ. ನ. ಮುಳಗಿ

## ಫ್ರೆಂಚ್ ರಾಜ್ಯಕ್ರಾಂತಿಯ ಕತೆ

ಯುರೋಪ್ ಖಂಡವನ್ನು ನಡುಗಿಸಿದ ಫ್ರೆಂಚ್ ಕ್ರಾಂತಿಯು ೧೮ನೆಯ ಶತಮಾನದಲ್ಲಿ ಘಟಿಸಿತು. ೧೭೮೯ರ ಹೊತ್ತಿಗೆ ಫ್ರಾನ್ಸಿನ ಹಳ್ಳಿಗಾಡಿನ ಜನರು ಹಾಗೂ ಬಡವರು ಬಹು ದುಃಸ್ಥಿತಿಗೊಳಗಾಗಿದ್ದರು. ಲಂಚಗುಳಿತನದ ಫಲವಾಗಿ ಸರಕಾರದ ಯಂತ್ರವು ಸರಿಯಾಗಿ ನಡೆದಿರಲಿಲ್ಲ. ಅಧಿಕಾರವು ಅರಸನ ಹಾಗೂ ಶ್ರೀಮಂತರ ಕೈಯಲ್ಲಿತ್ತು; ಅದಕ್ಕೆ ಯಾವದೇ ನಿಯಂತ್ರಣವಿರಲಿಲ್ಲ. ಶ್ರೀಮಂತರಿಗೆ ಮಾತ್ರ ವಿಶೇಷ ಹಕ್ಕುಗಳಿದ್ದುದರಿಂದ ಅವರಾವ ಕರವನ್ನೂ ಕೊಡುತ್ತಿರಲಿಲ್ಲ. ಇದರ ಪರಿಣಾಮವಾಗಿ ಬಡವರ ಮೇಲೆ ಹೆಚ್ಚು ಕರಭಾರವು ಬಿದ್ದಿತು. ಕೊನೆಗೆ ಫ್ರಾನ್ಸಿನ ಆರ್ಥಿಕ ಪರಿಸ್ಥಿತಿಯು ತೀರಾ ಹದಗೆಟ್ಟು ಹೋಯಿತು.

ಜನತೆಯು ಕಂಗೆಟ್ಟಿರುವಾಗ ವಾಲ್ಟೇರ, ರೂಸೋ ಮೊದಲಾದ ಮೇಧಾವಿಗಳು ತಮ್ಮ ಹೊಸ ವಿಚಾರಗಳನ್ನು ಅವರಿಗೆ ಉಪದೇಶಿಸಲಾರಂಭಿಸಿದರು. ಧಾರ್ಮಿಕ ಮೊದಲಾದ ಅಂಧ ಶ್ರದ್ಧೆಗಳನ್ನು ವಾಲ್ಟೇರನು ಖಂಡಿಸಿ, ಇಂದಿನ ಶೋಚನೀಯ ಪರಿಸ್ಥಿತಿಗೆ ಅವು ಪೋಷಕವೆಂದು ಸಾರತೊಡಗಿದನು. ಪ್ರಕೃತಿಸಿದ್ಧವಾದ ಮಾನವೀಯ ಹಕ್ಕುಗಳಿಗಾಗಿ ಹೋರಾಡಬೇಕೆಂದು ರೂಸೋನು ಪ್ರಜೆಗಳನ್ನು ಪ್ರೋತ್ಸಾಹಿಸಿದನಲ್ಲದೆ, ಸಾರ್ವಜನಿಕರ ಅಭಿಪ್ರಾಯಕ್ಕೆ ಸರಕಾರದಲ್ಲಿ ಪ್ರಥಮ ಸ್ಥಾನವು ದೊರೆಯಬೇಕೆಂದು ವಾದಿಸಿದನು. ಇವು ಜನರ ಮನಸ್ಸಿನಲ್ಲಿ ನಾಟಿದವು. ಹೀನ ಸ್ಥಿತಿಯನ್ನು ಸಹಿಸಿಕೊಂಡಿರಲು ಅವರು ಒಪ್ಪದಾದರು. ರಾಜಕೀಯ ಸೆರೆಯಾಳುಗಳನ್ನಿಟ್ಟ ಬ್ಯಾಸ್ಟಿಲಿ ಎಂಬ ಕೋಟೆಯನ್ನು ಜನರು ದಂಗೆಯೆದ್ದು ೧೭೮೯ ರಲ್ಲಿ ನೆಲಸಮ ಮಾಡಿದರು. ದೇಶದಾದ್ಯಂತ ದಂಗೆಗಳೆದ್ದುವು. ಕ್ರಾಂತಿಕಾರರು ರಾಷ್ಟ್ರೀಯ ಸಭೆಯನ್ನು ರಚಿಸಿಕೊಂಡು ಶ್ರೀಮಂತರ ವಿಶೇಷ ಹಕ್ಕುಗಳನ್ನು ರದ್ದುಮಾಡಿದರು. ಹಾಗೂ ಆಡಳಿತೆಗಾಗಿ ಘಟನೆಯೊಂದನ್ನು ತಯಾರಿಸಿದರು.

ಹೌಹಾರಿದ ಶ್ರೀಮಂತರನೇಕರು ಇಂಗ್ಲಂಡ್ ಮೊದಲಾದ ದೇಶಗಳಿಗೆ ಓಡಿಹೋದರು. ಕೆಲವೇ ಬೆಂಬಲಿಗರನ್ನುಳ್ಳ ಫ್ರಾನ್ಸಿನ ಚಕ್ರವರ್ತಿಯಾದ ೧೬ನೇ ಲುಯಿಯು ಸ್ವಲ್ಪ ಹೆಚ್ಚುಕಡಿಮೆ ಸೆರೆಯಾಳಿನಂತೆ ಉಳಿದನು. ಅವನು ೧೭೯೧ರಲ್ಲಿ ತಲೆತಪ್ಪಿಸಿಕೊಳ್ಳಲೆತ್ನಿಸಿದನು; ಆದರದು ಸಾಧ್ಯವಾಗಲಿಲ್ಲ. ಅತ್ತ ದೇಶಭ್ರಷ್ಟರಾದವರ ಪ್ರಚಾರದ ಫಲವಾಗಿ, ಫ್ರಾನ್ಸಿನ ಘಟನೆಗಳನ್ನರಿತು ಪರರಾಷ್ಟ್ರದ ಪ್ರಜೆಗಳೂ ಅರಸರೂ ಸಿಟ್ಟಿನಿಂದ ಕುದಿದರು. ಫ್ರಾನ್ಸಿನ ರಾಣಿಯಾದ ಮೇರಿ ಅಂಟ್ಯಾನೆಟಳ ಭ್ರಾತೃವಾದ ಆಸ್ಟ್ರಿಯಾದ ಚಕ್ರವರ್ತಿಯೂ ಪ್ರಶ್ಯಾದ ರಾಜನೂ

ಸೇರಿ ಒಂದು ಘೋಷಣೆಯನ್ನು ಹೊರಡಿಸಿ, ೧೬ ನೇ ಲುಯಿಯನ್ನೇ ಚಕ್ರವರ್ತಿಯನ್ನಾಗಿಟ್ಟುಕೊಳ್ಳಬೇಕೆಂದು ಫ್ರೆಂಚರಿಗೆ ತಿಳಿಸಿದರು. ಇಷ್ಟರಲ್ಲಿ ಅಲ್ಲಿಯ ಕ್ರಾಂತಿಕಾರರಿಗೆ ಹೆಚ್ಚು ಬಲ ಬಂದಿತ್ತು. ಈ ಘೋಷಣೆಯಿಂದ ಅವರು ಮತ್ತಷ್ಟು ರೊಚ್ಚಿಗೆದ್ದರು,- ಹಾಗೂ ೧೭೯೨ರಲ್ಲಿ ಆಸ್ಟ್ರಿಯಾದ ಮೇಲೆ ಯುದ್ಧವನ್ನು ಸಾರಿದರು. ಆದರ ಸಹಾಯಕ್ಕಾಗಿ ಪ್ರಶ್ಯಾದ ಸೈನ್ಯಗಳು ನುಗ್ಗಿ ಬಂದವು. ತನ್ನಲ್ಲಿ ವಿಶೇಷ ದಂಗೆಗಳಿದ್ದರೂ ಫ್ರಾನ್ಸು ಶತ್ರುಸೈನ್ಯಗಳನ್ನು ನಿರ್ನಾಮ ಮಾಡಿತು.

ಅನಂತರ ಡಾಂಟನ್, ರಾಬಿಸ್‌ಪೀರೆ ಹಾಗೂ ಮ್ಯಾರೆಟ್ ಇವರು ರಾಜ್ಯದ ಸೂತ್ರವನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ೨೧-೧-೧೭೯೩ ನೇ ದಿನ ಲುಯಿ ಚಕ್ರವರ್ತಿಯನ್ನು ಗಲ್ಲಿಗೇರಿಸಿದರು. ಅವನು ಪರರಾಷ್ಟ್ರಗಳೊಡನೆ ಮಾಡಿಕೊಂಡಿದ್ದ ಒಪ್ಪಂದಗಳನ್ನೆಲ್ಲಾ ರದ್ದುಮಾಡಿ, ಯುರೋಪಿನಲ್ಲಿಯ ಆನುವಂಶಿಕ ರಾಜರನ್ನು ಪದಚ್ಯುತಗೊಳಿಸುವ ಕಾರ್ಯದಲ್ಲಿ ಫ್ರಾನ್ಸು ಎಲ್ಲರಿಗೂ ನೆರವಾಗುವುದೆಂದು ಘೋಷಿಸಿದರು. ಸಾವಿರಾರು ಜನರು ಸೆರೆಮನೆಯನ್ನು ಸೇರಿದರು. ೧೭೯೩ ರಲ್ಲಿ "ಸಾರ್ವಜನಿಕರ ನೆಮ್ಮದಿ"ಗಾಗಿ ರಾಬಿಸ್‌ಪೀರಯ ಹಿರಿತನದಲ್ಲಿ ಒಂದು ಸಮಿತಿಯನ್ನು ರಚಿಸಲಾಯಿತು. ಈ ಭೀಕರ ಆಳಿಕೆಯಲ್ಲಿ ಅಸಂಖ್ಯ ಶ್ರೀಮಂತರ ಹಾಗು ರಾಜಕಾರಣಿಗಳ ತಲೆಗಳು ಕತ್ತರಿಸಲ್ಪಟ್ಟವು. ೧೬-೧೦-೧೭೯೩ ರಲ್ಲಿ ರಾಣಿಯಾದ ಮೇರಿ ಅಂಟ್ಯಾನಟಿಯು ಸಹ ಗಲ್ಲಿಗೇರಿದಳು. ನಂತರ ಫ್ರಾನ್ಸಿನ ನಿರಂಕುಶ ಕ್ರಾಂತಿಕಾರಿ ಅಧಿಕಾರಿಗಳು ಒಬ್ಬರ ಮೇಲೊಬ್ಬರು ಬಿದ್ದರು. ರಾಬಿಸ್‌ಪೀರೆಯು ೫-೪-೧೭೯೪ ನೇ ದಿನ ಡಾಂಟನನನ್ನು ಗಲ್ಲಿಗೇರಿಸಿದನು. ಹಾಗೂ ೨೮-೭-೧೭೯೪ ದಿನ ತಾನೂ ಗಲ್ಲಿಗೇರಿಸಲ್ಪಟ್ಟನು. ಈ ಹತ್ಯಾಕಾಂಡವೇ ಮೊದಲಾದುವು ೧೭೯೫ ನೇ ಅಕ್ಟೋಬರ್ ತಿಂಗಳ ವರೆಗೂ ನಡೆದುವು. ಇಲ್ಲಿಗೆ ರಾಜ್ಯಕ್ರಾಂತಿಯು ಕೊನೆಗಂಡಿತು.

## ಅಂತರರಾಷ್ಟ್ರೀಯ ನ್ಯಾಯಾಲಯ

ಹಾಲೆಂಡಿನಲ್ಲಿಯ ಹೇಗ್ ನಗರದಲ್ಲಿ ಸಂಯುಕ್ತ ರಾಷ್ಟ್ರ ಸಂಘವು ಅಂತರ ರಾಷ್ಟ್ರೀಯ ನ್ಯಾಯಾಲಯವನ್ನು ನಿರ್ಮಿಸಿದೆ. ದೇಶದೇಶಗಳೊಳಗಿನ ತಂಟೆಗಳಲ್ಲಿ ನ್ಯಾಯವನ್ನು ದೊರಕಿಸುವ ಮುಖ್ಯ ಸಾಧನ ಇದು. ಸಂ. ರಾ. ಸಂಘದ ಸಾಮಾನ್ಯ ಸಭೆ ಹಾಗೂ ಭದ್ರತಾಮಂಡಲ ಇವುಗಳಿಂದ ಆರಿಸಲ್ಪಟ್ಟ ೧೫ ಜನ ನ್ಯಾಯಾಧೀಶರು ಇದರಲ್ಲಿದ್ದಾರೆ. ಯಾವುದೇ ಒಂದು ರಾಷ್ಟ್ರದಿಂದ ಇಬ್ಬರು ನ್ಯಾಯಾಧೀಶರನ್ನು ಆರಿಸಲಾಗುವುದಿಲ್ಲ. ಅವರು ನಿಷ್ಪಕ್ಷಪಾತಿಗಳೂ ಯಾವುದೇ ರಾಷ್ಟ್ರದ ಹಿತಸಂಬಂಧವನ್ನು ನೋಡದವರೂ ಆಗಿರಬೇಕು; ಈ ಪ್ರಕಾರ ಅವರಿಂದ ಆಣೆಯನ್ನು ಮಾಡಿಸಿಕೊಳ್ಳಲಾಗುತ್ತದೆ. ಸದಸ್ಯ ರಾಷ್ಟ್ರಗಳು ಮಾತ್ರ ತಮ್ಮ ತಂಟೆಗಳನ್ನು ಅಲ್ಲಿಗೆ ಒಯ್ಯಬಹುದು. ಅಲ್ಲಿ ಈ ಮೊದಲು ಕೆಲವು ತಂಟೆಗಳ ವಿಚಾರಣೆಯಾಗಿದೆ. ಇಂಗ್ಲಂಡಂತೂ ಅಲ್ಬೇನಿಯಾದ, ನಾರ್ವೆಯ, ಇರಾಣದ ಹಾಗೂ ಫ್ರಾನ್ಸಿನ ವಿರುದ್ಧವಾಗಿ ಈ ಮೊದಲೇ ನ್ಯಾಯಾಲಯದ ಮುಂದೆ ದೂರಿದೆ.

## ಕಾಮನ್ವೆಲ್ತದ ಸ್ವರೂಪ

ಬ್ರಿಟಿಶ್ ಕಾಮನ್ವೆಲ್ತದಲ್ಲಿ ಸ್ವತಂತ್ರ ರಾಷ್ಟ್ರಗಳಾದ (೧) ಯುನೈಟೆಡ್ ಕಿಂಗ್ಡಮ್ (ಇಂಗ್ಲಂಡ್, ವೇಲ್ಸ ಮತ್ತು ಸ್ಕಾಟ್ಲೆಂಡ್), (೨) ಕೆನಡಾ, (೩) ಆಸ್ಟ್ರೇಲಿಯಾ, (೪) ನ್ಯೂಝಿಲ್ಯಾಂಡ್, (೫) ದಕ್ಷಿಣ ಆಫ್ರಿಕೆ, (೬) ಭಾರತ, (೭) ಪಾಕಿಸ್ತಾನ, (೮) ಸಿಂಹಳ ಇವುಗಳೂ ವಸಾಹತುವಾದ, ಆದರೆ

ಆಂತರಿಕ ಸ್ವರಾಜ್ಯವನ್ನು ಪಡೆದಿರುವ, ದಕ್ಷಿಣ ರೊಡೇಶಿಯಾವೂ (ಆಫ್ರಿಕಾ) ಸಮಾವೇಶವಾಗಿವೆ. ಇದಲ್ಲದೆ ಇದರಲ್ಲಿ ಇನ್ನೂ ಚಿಕ್ಕ ಪುಟ್ಟ ವಸಾಹತುಗಳಿವೆ.

ವಸಾಹತುಗಳು ಕಾಮನ್ವೆಲ್ತದ ಕಕ್ಷೆಯಲ್ಲಿ ಬಂದರೂ ಅವು ಇದರ ಸದಸ್ಯ ರಾಷ್ಟ್ರಗಳಲ್ಲ. ಮೇಲ್ಕಂಡ ಎಂಟು ಸ್ವತಂತ್ರ ರಾಷ್ಟ್ರಗಳು ಮಾತ್ರ ಕಾಮನ್ವೆಲ್ತದ ಸದಸ್ಯ ರಾಷ್ಟ್ರಗಳಾಗಿವೆ.

## ನೀರೋನ ವೀಣಾನಾದ

ಯುರೋಪ್ಯ ಸಾಹಿತ್ಯದಲ್ಲಿ ನೀರೋ ಚಕ್ರವರ್ತಿಯ ಹೆಸರು ಕುಪ್ರಸಿದ್ಧವಾಗಿದೆ. ಕಠಿಣ ಹೃದಯಿಗಳಲ್ಲಿ ಕಠಿಣ ಹೃದಯದವನಿವನು. ರೋಮ್ ನಗರವು ಅಗ್ನಿಯಿಂದ ದಗ್ಧವಾಗುತ್ತಿರುವಾಗ, ಅದನ್ನು ನೋಡುತ್ತಾ ಇವನು ಸಂತೋಷ ಸಾಗರದಲ್ಲಿ ಮುಳುಗಿ ವೀಣೆಯನ್ನು ನುಡಿಸುವುದರಲ್ಲಿ ತಲ್ಲೀನನಾಗಿದ್ದನಂತೆ. ರೋಮನ್ ಚಕ್ರವರ್ತಿಯಾದ ಕ್ಲಾಡಿಯಸನು ಕ್ರಿ. ಶ. ೫೦ ರಲ್ಲಿ ಇವನನ್ನು ದತ್ತಕ ತೆಗೆದುಕೊಂಡನು. ಮುಂದೆ ಇವನು ಕ್ರಿ. ಶ. ೫೪ ರಲ್ಲಿ, ತನ್ನ ೧೭ನೇ ವಯಸ್ಸಿನಲ್ಲಿ, ಪಟ್ಟಕ್ಕೆ ಬಂದನು. ಕ್ಲಾಡಿಯಸನ ಔರಸ ಪುತ್ರನಾದ ಬ್ರಿಟಾನಿಕಸನಿಗೆ ಪಟ್ಟವು ದೊರೆಯಲಿಲ್ಲ. ನೀರೋನ ಆಳಿಕೆಯು ಅವನು ಮಾಡಿಸಿದ ಹೇಯ ಕೊಲೆಗಳಿಂದ ಬಲು ಕಲುಷಿತವಾಗಿದೆ. ಇವನು ಬ್ರಿಟಾನಿಕಸನನ್ನೂ ತನ್ನ ತಾಯಿಯನ್ನೂ ತನ್ನಿಬ್ಬರು ಪತ್ನಿಯರನ್ನೂ ಕೊಲ್ಲಿಸಲು ಹಿಂಜರಿಯಲಿಲ್ಲ. ರೋಮ್ ನಗರವನ್ನು ಕ್ರಿಶ್ಚಿಯನ್ನರು ಸುಟ್ಟರೆಂಬ ಕಾರಣದಿಂದ ಅವರಲ್ಲಿ ಅನೇಕರನ್ನು ಇವನು ಸಂಹರಿಸಿದನು. ಕ್ರಿ. ಶ. ೬೮ ರಲ್ಲಿ ಅವನ ಸೈನ್ಯಗಳು ದಂಗೆಯೆದ್ದುವು. ಅವರಿಂದ ಕೊಲ್ಲಲ್ಪಡುವುದನ್ನು ತಪ್ಪಿಸಿಕೊಳ್ಳಲು ಇವನು ಆತ್ಮಹತ್ಯೆಯನ್ನು ಮಾಡಿಕೊಂಡನು.

## ಸಂಯುಕ್ತ ರಾಷ್ಟ್ರಸಂಘವು ಸಾಧಿಸಿದ್ದೇನು?

ರಾಷ್ಟ್ರಗಳ ನಡುವಿನ ತಂಟೆಗಳನ್ನು ಸಂ. ರಾ. ಸಂಘದ ಭದ್ರತಾಮಂಡಲವು ವಿಚಾರಣೆಗೆ ತೆಗೆದುಕೊಳ್ಳುತ್ತದೆ. ಮೊಟ್ಟಮೊದಲು ಅದರ ಮುಂದೆ ಲೆಬನಾನ್ ಮತ್ತು ಸಿರಿಯಾಗಳಲ್ಲಿ ತಳವೂರಿದ ಪ್ರಮುಖ ರಾಷ್ಟ್ರಗಳ ಸೈನ್ಯಗಳು ಅಲ್ಲಿಂದ ಹೊರಬೀಳಬೇಕೆಂಬ ಬೇಡಿಕೆಯು ಬಂದಿತು. ಆಗ ಭದ್ರತಾಮಂಡಲದ ಆದೇಶದಂತೆ ಲೆಬನಾನ ಹಾಗೂ ಸಿರಿಯಾದಿಂದ ಬ್ರಿಟಿಶ್ ಹಾಗೂ ಫ್ರೆಂಚ್ ಪಡೆಗಳನ್ನು ಹಿಂದಕ್ಕೆ ಕರೆಯಿಸಿಕೊಳ್ಳಲಾಯಿತು. ಇಂಡೋನೇಶಿಯಾದಲ್ಲಿ ರಾಜಿಯನ್ನು ಸಾಧಿಸಲು ಸಂ. ರಾ. ಸಂಘವು ಪ್ರಯತ್ನಿಸಿತು. ಅದಕ್ಕೆ ಸ್ವಾತಂತ್ರ್ಯವು ದೊರೆಯಲು ಬಹು ಮಟ್ಟಿಗೆ ಸಂ. ರಾ. ಸಂಘವು ಕಾರಣವಾಗಿದೆ. ಇಸ್ರೇಲ ಮತ್ತು ಅರಬ ರಾಷ್ಟ್ರಗಳ ನಡುವಿನ ಯುದ್ಧವು ಸಂ. ರಾ. ಸಂಘದ ಮಧ್ಯಸ್ಥಿಕೆಯಿಂದಲೇ ತಪ್ಪಿದೆ. ಕಾಶ್ಮೀರದ ಸಲುವಾಗಿ ಪಾಕಿಸ್ತಾನ-ಭಾರತಗಳು ಸಂ. ರಾ. ಸಂಘದ ಮಧ್ಯಸ್ಥಿಕೆಯ ಪರಿಣಾಮವಾಗಿ ಹೋರಾಟ ಮುಂದುವರಿಸಲಿಲ್ಲ. ೧೯೪೯ ರಲ್ಲಿ ಸಂ. ರಾ. ಸಂಘದ ಮೂಲಕ ಬರ್ಲಿನ್ ದಿಗ್ಬಂಧನವು ಶಾಂತರೀತಿಯಿಂದ ಕೊನೆಗಂಡಿತು. ಇಟಲಿಯ ವಸಾಹತುಗಳ ಪ್ರಶ್ನೆಯನ್ನೂ ಸಂ. ರಾ. ಸಂಘವು ಶಾಂತಮಾರ್ಗದಿಂದ ಬಿಡಿಸಿತು. ಕೋರಿಯಾ ಸಮರದಲ್ಲಿ ಇದು ಅಂತರರಾಷ್ಟ್ರಪಡೆಯನ್ನುಪಯೋಗಿಸಿದ್ದರಿಂದ, ಅತಿಪೂರ್ವದ ಯುದ್ಧ ಜ್ವಾಲೆಯು ಆರಿತು. ಇದು ೧೯೫೪ರಲ್ಲೊಂದು ಮಹಾಕಾರ್ಯವನ್ನು ಮಾಡಿದೆ. ಹಿಂದುಳಿದ ದೇಶಗಳಿಗೆ ಸಹಾಯವಾಗುವಂತೆ ತಾಂತ್ರಿಕ ಸಹಾಯ ಮಂಡಲವನ್ನು ನಿರ್ಮಿಸಿದ್ದೇ ಅದು.

## ಮಹಾಸರೋವರಗಳು

೩೧,೮೨೦ ಚದರ ಮೈಲು ವಿಸ್ತಾರವಾಗಿರುವ ಲೇಕ್ ಸುಪೀರಿಯರ್ ಎಂಬ ಮಹಾಸರೋವರವು ವಿಶ್ವದಲ್ಲಿಯೇ ವಿಸ್ತೀರ್ಣವಾಗಿರುವ ಸಿಹಿನೀರಿನ ಸರೋವರವಾಗಿದೆ. ಇದು ಅಮೇರಿಕೆಯ ಸಂಯುಕ್ತಸಂಸ್ಥಾನಗಳ ಹಾಗೂ ಕಾನಡಾಗಳ ನಡುವಿದೆ. ಉಪ್ಪುನೀರಿನ ಅತಿ ದೊಡ್ಡ ಸರೋವರವು ಅಮೇರಿಕೆಯ ಉಟಾ ಸಂಸ್ಥಾನದ ವಾಯುವ್ಯ ಮೂಲೆಯಲ್ಲಿದೆ. ಇದರ ಉದ್ದವು ೮೦ ಮೈಲುಗಳು, ಅಗಲವು ೫೦ ಮೈಲುಗಳು. ಇದರ ನೀರಿನಲ್ಲಿ ೧೪% ಲೋಹಾಂಶವಿರುವದರಿಂದ ರೋಗಪರಿಹಾರವನ್ನು ಪಡೆಯಲು ಅನೇಕರು ಅಲ್ಲಿಗೆ ಬರುತ್ತಾರೆ. ೧೪,೦೦೦ ಚ. ಮೈಲು ವಿಸ್ತಾರವಾದ ಗ್ರೇಟ ಬೇರ್ ಎಂಬ ಸರೋವರವೂ ೧೦,೭೧೯ ಚ. ಮೈಲು ವಿಸ್ತೀರ್ಣವಿರುವ ಗ್ರೇಟ್ ಸ್ಲೇವ್ ಎಂಬ ಸರೋವರವೂ ಕೆನಡಾದಲ್ಲಿವೆ. ಇಲ್ಲಿ ಸಾವಿರಾರು ಚ. ಮೈಲು ವಿಸ್ತಾರವಾದ ಇನ್ನೂ ಹಲವು ಸರೋವರಗಳಿವೆ. ವಿಶ್ವದಲ್ಲಿ ಎರಡನೆಯ ಸ್ಥಾನವನ್ನು ದೊರಕಿಸಿರುವ ೨೭,೦೦೦ ಚ. ಮೈಲು ವಿಸ್ತಾರವಾದ, ಸಮುದ್ರದ ಸಮತಳದಿಂದ ೩,೮೦೦ ಅಡಿ ಎತ್ತರದಲ್ಲಿರುವ, ವಿಕ್ಟೋರಿಯಾ ಸರೋವರವು ಆಫ್ರಿಕೆಯಲ್ಲಿದೆ. ಇದು ಟಾಂಗನಿಕಾ, ಕೆನ್ಯಾ, ಯುಗೆಂಡಾ ರಾಜ್ಯಗಳಲ್ಲಿ ನುಗ್ಗಿದೆ. ೧೨,೫೦೦ ಚ. ಮೈಲು ವ್ಯಾಪಿಸಿರುವ ಸರೋವರವೊಂದು ಟಾಂಗನಿಕಾದಲ್ಲಿದೆ; ಇದು ಕಾಂಗೋದ ಆಗ್ನೇಯ ಗಡಿ. ಯುರೋಪದಲ್ಲಿ ಅತ್ಯಂತ ದೊಡ್ಡದಾದ ಸರೋವರವು ಫಿನ್ಲೆಂಡಿನಲ್ಲಿದೆ; ಇದರ ಕ್ಷೇತ್ರವು ಬರೇ ೭,೦೦೦ ಚ. ಮೈಲು. ಫಿನ್ಲೆಂಡ್ ದೇಶವನ್ನು "ಸಾವಿರ ಸರೋವರಗಳ ದೇಶ"ವೆಂದು ಕರೆಯುತ್ತಾರೆ. ಇದು ಉತ್ಪ್ರೇಕ್ಷೆಯಲ್ಲ; ತದ್ವಿರುದ್ಧ. ಏಕೆಂದರೆ ಅಲ್ಲಿ ೪೦,೦೦೦ ಕ್ಕಿಂತಲೂ ಹೆಚ್ಚು ಸರೋವರಗಳು ದೇಶದಾದ್ಯಂತವಾಗಿ ಹಬ್ಬಿಕೊಂಡಿವೆ. ಫಿನ್ಲೆಂಡಿನ ಕ್ಷೇತ್ರವು ೧೧,೮೦೦ ಚ. ಮೈಲುಗಳಿಗಿಂತ ಕಡಿಮೆ ಇದೆ. "ಆರಲ್" ಎಂಬ ಹೆಸರಿನ ವಿಶ್ವದ ಮೂರನೆಯ ಮಹಾಸರೋವರವು (ಕ್ಯಾಸ್ಪಿಯನ್ ಸಮುದ್ರಕ್ಕೆ ೨೦೦ ಮೈಲು ದೂರದಲ್ಲಿ) ಪಶ್ಚಿಮ ಏಶಿಯಾದಲ್ಲಿದೆ. ೨೬,೦೦೦ ಚ. ಮೈಲು ಪ್ರದೇಶವನ್ನಿಲ್ಲಿ ಜಲರಾಶಿಯು ಆಕ್ರಮಿಸಿದೆ. ಮಂಗೋಲಿಯಾದ ಉತ್ತರ ದಿಕ್ಕಿನಲ್ಲಿ ಬೈಕಲ ಸರೋವರವಿದೆ. ೧೩,೦೦೦ ಚ. ಮೈಲು ವಿಸ್ತಾರವಾದ ಈ ಸರೋವರವು ನವ್ಹೆಂಬರ್ ತಿಂಗಳಿಂದ ಏಪ್ರಿಲ್ ತಿಂಗಳವರೆಗೆ ಬರ್ಫಗಳಿಂದ ನಿಬಿಡವಾಗಿರುತ್ತದೆ.

## ಮಾನವನ ಮುಖವುಳ್ಳ ಪರ್ವತ

ಅಮೇರಿಕೆಯಲ್ಲಿಯ ನ್ಯೂಹ್ಯಾಂಪ್‌ಶೈರ್ ಎಂಬ ಸಂಸ್ಥಾನದಲ್ಲಿ ಶ್ವೇತಪರ್ವತವೆಂಬುದಿದೆ. ಅದರ ಶಿಖರಭಾಗದಲ್ಲಿ ಬಹುದೊಡ್ಡ ಕಲ್ಲುಬಂಡೆಗಳ ಸಮೂಹವು ಸೇರಿ ಮಾನವ ಮುಖದ ಆಕಾರವನ್ನು ತಳೆದಿವೆ. ಒಂದು ಬದಿಯಿಂದ ನಿಂತು ಈ ಬಹು-ದೊಡ್ಡ ಮುಖವನ್ನು ನೋಡಬಹುದು. ಹಣೆಯಿಂದ ನೆತ್ತಿಯವರೆಗಿರುವ ಸ್ವಲ್ಪ ವರ್ತುಳಾಕಾರದ ಭಾಗದ ಎತ್ತರವು ೧೦೦ ಅಡಿಗಳಾಗುತ್ತವೆ. ಅಮೇರಿಕೆಯ ಸುಪ್ರಸಿದ್ಧ ಲೇಖಕನಾದ ನಾಥಾನೀಲ್ ಹಾಥಾರ್ನನು ತನ್ನ "ಮಹಾಕಲ್ಲಿನ ಮೋರೆ" ಎಂಬ ಅಮರ ಕತೆಯಲ್ಲಿ ಇದನ್ನು ಬಣ್ಣಿಸಿದ್ದಾನೆ. ಇದರ ಪರಿಣಾಮವಾಗಿ ಈ ಕಲ್ಲಿನ ಮೋರೆಯು ಕಡೆಗೆ ವಿಶ್ವದ ದೃಷ್ಟಿಯು ಹರಿಯಿತು.





# ಚಹಾ-ಕಥೆಗಳು

ಇಂದು ಚಹಾ ಜಗತ್ತಿನಲ್ಲಿ ಅತ್ಯಂತ ಜನಪ್ರಿಯ ಪಾನೀಯವಾಗಿದೆ. ನಮ್ಮಲ್ಲಿಯಂತೂ ಮನೆಗೆ ಬಂದವರಿಗೆ ಊಟ-ಉಪಚಾರದ ವ್ಯವಸ್ಥೆ ಮಾಡದಿದ್ದರೂ ದಕ್ಕುತ್ತದೆ; ಆದರೆ ಚಹ ಕೊಡದಿದ್ದರೆ ನಡೆಯುವದಿಲ್ಲ. "ಮನೆಗೆ ಹೋದರೆ ಒಂದಿಷ್ಟು ಚಹ ಕೂಡ ಕೊಡಲಿಲ್ಲ" ಎಂಬ ಅಪವಾದ ಹೊರಬೇಕಾಗುತ್ತದೆ.

ಇಷ್ಟೊಂದು ಮಹತ್ವ ಗಳಿಸಿರುವ ಈ ಚಹದ ಪ್ರಾರಂಭ ಎಂದಾಯಿತು ಎಂಬ ಬಗ್ಗೆ ಇತಿಹಾಸದಲ್ಲಿ ಉಲ್ಲೇಖವಿಲ್ಲ. ಆದರೆ ಆ ಬಗ್ಗೆ ಜಾನಪದ ಕಥೆಗಳು ಬೇಕಷ್ಟಿವೆ. ಇವುಗಳಲ್ಲಿ ಹೆಚ್ಚಿನವು ಚೀನ ಮತ್ತು ಜಪಾನಗಳಲ್ಲಿ ಹುಟ್ಟಿದವುಗಳಾಗಿವೆ.

**ತಾ-ವೊ.** ಈ ಕಥೆಗಳಲ್ಲೆಲ್ಲ ದಾರುಮಾನ ಕಥೆ ಅತಿ ಸ್ವಾರಸ್ಯವಾದದ್ದೆನ್ನಬಹುದು. ಈತನೇನೂ ದಂತಕಥೆಯ ಮನುಷ್ಯನಲ್ಲ. ಭಾರತದಲ್ಲಿ ಜನ್ಮಿಸಿದ ಈತನು ಕ್ರಿ.ಶ. ೫೨೦ರ ಸುಮಾರಿಗೆ ಚೀನಕ್ಕೆ ತೆರಳಿದನು. ಈತ ಕ್ಯಾಂಟನ್ನನ್ನು ತಲುಪಿದಾಗ ಆಗ ಚೀನದ ಚಕ್ರವರ್ತಿಯಾಗಿದ್ದ ಕು ಲಿ ಇವನಿಗೆ ಆಮಂತ್ರಣ ಕಳುಹಿದನು. ಚೀನದ ರಾಜಧಾನಿ ನಾನಕಿಂಗದಲ್ಲಿ ಇವನ ಸ್ವಾಗತವಾಯಿತು. ಪರ್ವತ ಪ್ರದೇಶದಲ್ಲಿದ್ದ ಒಂದು ಗುಹಾ ದೇವಾಲಯವನ್ನು ಇವನಿಗೆ ಕೊಡಲಾಯಿತು. ದಾರುಮಾ ಬೌದ್ಧ ಧರ್ಮದ ಜೆನ್ ಪಂಥದ ಮೂಲಪ್ರವರ್ತಕನಾಗಿದ್ದನು. ಧ್ಯಾನವೇ ಮುಕ್ತಿಯ ಮಾರ್ಗವೆಂದು ನಂಬಿದ್ದ ಈತನು ಒಂದು ಗೋಡೆಯ ಎದುರು ಕುಳಿತು ಅನೇಕ ವರ್ಷಗಳನ್ನು ಧ್ಯಾನಮಗ್ನನಾಗಿ ಕಳೆದನು. ಚೀನೀಯರು ಇವನನ್ನು ತಾ-ವೊ (ಬಿಳಿ ಬುದ್ಧ) ಎಂದು ಕರೆದರು.

ಜಪಾನೀಯರು ದಾರುಮಾನ ಜೀವನದ ಈ ಸಂಗತಿಗಳ ಆಧಾರದಿಂದ ಚಹದ ಉತ್ಪತ್ತಿಯ ವಿಚಾರದಲ್ಲಿ ಒಂದು ಕಥೆ ಹೆಣೆದಿದ್ದಾರೆ:

"ನಿದ್ದೆ ಮಾಡದೆ ಸದಾ ಎಚ್ಚರವಾಗಿದ್ದು ಧ್ಯಾನಾಸಕ್ತನಾಗಿರಲು ದಾರುಮಾ ಪ್ರತಿಜ್ಞೆ ಮಾಡಿದ್ದನು. ಆದರೆ ಒಮ್ಮೆ ಅವನು ನಿದ್ರೆಗೆ ವಶನಾಗಿ ಹೋದನು. ಎಚ್ಚರಾದಾಗ ಅವನಿಗೆ ತನ್ನ ಬಗ್ಗೆ ಮತ್ತು ತನ್ನನ್ನು ಮೋಸಗೊಳಿಸಿದ ಕಣ್ಣುರೆಪ್ಪೆಗಳ ಬಗ್ಗೆ ಜುಗುಪ್ಸೆ ಹುಟ್ಟಿತು. ಪುನಃ ಇಂಥ ದ್ರೋಹವಾಗದಿರಲೆಂದು ದಾರುಮಾ ತನ್ನ ಕಣ್ಣುರೆಪ್ಪೆಗಳನ್ನು ಕತ್ತರಿಸಿ ದೂರ ಬಿಸುಟನು.

ಈ ಕಣ್ಣುರೆಪ್ಪೆಗಳು ಬಿದ್ದಲ್ಲಿ ಅದುವರೆಗೂ ಜನರಿಗೆ ಗೊತ್ತಿಲ್ಲದ ಒಂದು ಗಿಡಗಂಟಿ ಬೆಳೆಯಿತು. ಈ ಗಿಡಗಳ ಸೊಪ್ಪನ್ನು ಕುದಿಸಿದಾಗ ದಣಿದವರ ನಿದ್ದೆಯನ್ನು ಹೋಗಲಾಡಿಸಿ ಅವರಿಗೆ ಉತ್ಸಾಹ ನೀಡುವ ಪಾನೀಯವೊಂದು ಸಿದ್ಧವಾಯಿತು. ಇವೇ ಮೊಟ್ಟಮೊದಲಿನ ಚಹದ ಗಿಡಗಳು."

ಮುಂದೆ ತಾ-ವೊನಿಗೆ ನಿಜವಾದ ಶ್ರೇಷ್ಠತೆ ತಪಸ್ಸಿನಲ್ಲಿರದೆ ಸಂಪೂರ್ಣ ಚಿತ್ತಶುದ್ಧಿ ಮತ್ತು

ಜ್ಞಾನಗಳಲ್ಲಿದೆ ಎಂಬ ನಂಬಿಗೆಯಾಯಿತು. ಆದರೆ ಚಕ್ರವರ್ತಿಯ ಅಭಿಪ್ರಾಯ ಇದಕ್ಕೆ ವಿರುದ್ಧವಾಗಿದ್ದುದರಿಂದ ತಾ-ವೊ ಆತನ ಆಗ್ರಹಕ್ಕೆ ಪಾತ್ರನಾದನು. ಅಲ್ಲಿಂದ ತಾ-ವೊ ಹೊರಟುಹೋಗಲು ನಿಶ್ಚಯಿಸಿದನು. ಅವನು ಹೋದದ್ದೂ ಒಂದು ಅದ್ಭುತ ಕಥೆಯಾಗಿದೆ. ಲೊ-ಯಾಂಗಕ್ಕೆ ಹೋಗುವ ಹಾದಿಯಲ್ಲಿ ಅವನು ಯಾಂಗತ್ಸಿ ನದಿಯನ್ನು ಒಂದು ಹುಲ್ಲುಕಡ್ಡಿಯ ಮೇಲೆ ಕುಳಿತು ದಾಟಿದನು ಎಂದು ಹೇಳುತ್ತಾರೆ.

ಜಪಾನದ ಕಾಟಾಓಕಾ ಪರ್ವತದ ಮೇಲೆ ತಾ-ವೊ ಸತ್ತ ಎನ್ನುತ್ತಾರೆ. ಸ್ವರ್ಗಕ್ಕೆ ಹೋಗುವ ಆತುರದಲ್ಲಿ ಅವನು ಒಂದು ಜೋಡನ್ನು ಮರೆತನು. ಮೂರು ವರ್ಷಗಳ ನಂತರ ಆತನು ಒಂದು ಕೈಲಿ ಜೋಡು ಹಿಡಿದುಕೊಂಡು ಭಾರತಕ್ಕೆ ಹೊರಟಿರುವದನ್ನು ಜನ ಕಂಡರು. ಆಗ ಚಕ್ರವರ್ತಿ ಅವನ ಗೋರಿಯನ್ನು ಅಗೆಸಿದನು. ಅಲ್ಲಿ ಒಂದು ಸವೆದುಹೋದ ಜೋಡಿನ ವಿನಾ ಇನ್ನೇನೂ ಇರಲಿಲ್ಲ.

**ಚಾ-ಚಿಂಗ.** ಚಹದ ವಿಷಯಕ್ಕೇ ಮೀಸಲಾಗಿರುವ ಮೊಟ್ಟಮೊದಲನೆಯ ಪುಸ್ತಕವೆಂದರೆ ಚಾ-ಚಿಂಗ. ಇದನ್ನು ಕ್ರಿ. ಶ. ೭೮೦ ರ ಸುಮಾರಿಗೆ ಲು ಯು ಎಂಬಾತ ಬರೆದನು. ಈ ಪುಸ್ತಕ ಬರೆದ ಬಳಿಕ ಈತನು ಪ್ರಸಿದ್ಧಿ ಪಡೆದನು. ಈತ ಪುರೋಹಿತನಾಗಿದ್ದನು. ಚೀನದ ಚಹ ವ್ಯಾಪಾರಿಗಳು ಇವನನ್ನು ದೇವರಂತೆ ಕಾಣುತ್ತಿದ್ದರು. ಕ್ರಿ. ಶ. ೮೦೪ ರ ಸುಮಾರಿಗೆ ಇವನು ಸತ್ತನು.

ಲು ಯು ನ ಚಾ-ಚಿಂಗದ ಆಧಾರದಿಂದ ಜಪಾನೀಯರು ಚಾ-ನೊ-ಯು (ಚಹ ಸಮಾರಂಭ) ಪದ್ಧತಿಯನ್ನು ರೂಢಿಗೆ ತಂದರು. ಈ ಸಮಾರಂಭವನ್ನು ಚಾ-ಜಿನ್ನ (ಚಹ ಪಂಡಿತರು) ರೇ ನಡೆಸಬೇಕಾಗುತ್ತಿತ್ತು. ಈ ಪಂಡಿತರು ಉದಾತ್ತಧ್ಯೇಯದವರೂ ಸಚ್ಚರಿತ್ರರೂ ಸೌಂದರ್ಯೋಪಾಸಕರೂ ಆಗಿರಬೇಕಾಗುತ್ತಿತ್ತು.

ಚೀನೀಯರು ಚಹಪಾನಕ್ಕೆ ತುಂಬ ಮಹತ್ವ ಕೊಡುತ್ತಿದ್ದರು. ತನ್ನ ನಿತ್ಯದ ಚಹವನ್ನು ಒದಗಿಸಿದ್ದಕ್ಕಾಗಿ ಸತ್ತವನೊಬ್ಬನು ಕೃತಜ್ಞತೆ ಸೂಚಿಸಿದ ಕಥೆ ಒಂದು ಹೀಗಿದೆ:

ಚೆನ್ ವು ಓರ್ವ ವಿಧವೆ. ಯೆನ್‌ಸೇನದಲ್ಲಿ ಅವಳು ತನ್ನ ಇಬ್ಬರು ಮಕ್ಕಳೊಂದಿಗೆ ಇರುತ್ತಿದ್ದಳು. ಅವಳಿಗೆ ಚಹದಷ್ಟು ಸವಿಯಾದ ವಸ್ತು ಇನ್ನೊಂದಿರಲಿಲ್ಲ. ಅವಳ ತೋಟದಲ್ಲಿ ಯಾವನೊ ಓರ್ವ ಅಜ್ಞಾತ ಮನುಷ್ಯನ ಗೋರಿಯಿದ್ದಿತು. ಮೃತರ ಬಗ್ಗೆ ಗೌರವ ತೋರಿಸಲು ಕಲಿಸಲ್ಪಟ್ಟಿದ್ದ ಚೆನ್-ಯು ನಿತ್ಯವೂ ಆ ಗೋರಿಯ ಮೇಲೆ ಒಂದು ಬಟ್ಟಲ ಚಹ ಇಡದೆ ತಾನು ಚಹ ಕುಡಿಯುತ್ತಿರಲಿಲ್ಲ.

ಅವಳ ಮಕ್ಕಳಿಗೆ ಇದು ಸೇರಲಿಲ್ಲ. "ಯಾಕೆ ಈ ತೊಂದರೆ ತೆಗೆದುಕೊಳ್ಳುತ್ತಿ? ವ್ಯರ್ಥ ಚಹವನ್ನೇಕೆ ಹಾಳು ಮಾಡುತ್ತಿ? ನೀನು ಈ ಹವ್ಯಾಸ ಬಿಡದಿದ್ದರೆ ಗೋರಿಯನ್ನು ಕಿತ್ತುಹಾಕುತ್ತೇವೆ" ಎಂದು ಅವರು ತಾಯಿಯನ್ನು ಗದರಿಸಿದರು. ತಾಯಿ ಬಹು ದೈನ್ಯದಿಂದ ಬೇಡಿಕೊಂಡ ಬಳಿಕ ಅವರು ಸುಮ್ಮನಾದರು.

ಮುಂದೆ ಕೆಲ ದಿವಸಗಳಲ್ಲಿ ಅವಳ ಸ್ವಪ್ನದಲ್ಲಿ ಓರ್ವನು ಕಾಣಿಸಿಕೊಂಡನು. ಆತ, "ನನ್ನಲ್ಲಿ ಏನೂ ಇಲ್ಲ. ನಾನು ಈ ಗೋರಿಯಲ್ಲಿದ್ದು ೩೦೦ ವರ್ಷಗಳಾದವು. ನೀನಿಲ್ಲದಿದ್ದರೆ ನಿನ್ನ ಮಕ್ಕಳು ಈ ಗೋರಿಯನ್ನು ಕಿತ್ತೆಸೆದು ನನಗೆ ಇರಲು ಸ್ಥಳವಿರದಂತೆ ಮಾಡುತ್ತಿದ್ದರು. ನೀನು ನನಗೆ ಒಳ್ಳೆಯ ಚಹವನ್ನೂ ಕೊಡುತ್ತಿ. ನಾನು ಕೇವಲ ಎಲುವಿನ ಹಂದರ, ನಿಜ. ಆದರೂ ನಿನ್ನ ಉಪಕಾರವನ್ನು ತೀರಿಸಬೇಕು" ಎಂದನು.

ಮರುದಿನ ಮುಂಜಾನೆ ಅವಳು ಎದ್ದಾಗ ಅವಳಿಗೆ ಹಣದ ಚೀಲವೊಂದು ಕಾಣಿಸಿತು. ಬಹುಕಾಲದವರೆಗೆ ಹುಗಿದಿಟ್ಟಂತೆ ಅದು ಕಾಣುತ್ತಿತ್ತು. ಅದರ ಬಾಯಿಗೆ ಕಟ್ಟಿದ ದಾರ ಮಾತ್ರ ಹೊಸತಾಗಿ ಕಾಣುತ್ತಿತ್ತು.

ಚೆನ್ ವು ಮಕ್ಕಳನ್ನು ಕರೆದು ಹಣದ ಚೀಲ ತೋರಿಸಿ "ನೋಡಿದಿರಾ, ಸತ್ತವರು ಕೂಡ ಉಪಕಾರ ಸ್ಮರಿಸುತ್ತಾರೆ" ಎಂದಳು.

ಹೀಗಿದೆ ಚಹಾಮಹಿಮೆ!

# ಸುಯೇಜ ಕಾಲುವೆ ಯಾರದು ?

ಆರ್. ಆರ್. ನಾಡಿಗೇರ

ಸುಯೇಜ ಕಾಲುವೆಯ ಕಥೆ ಇತಿಹಾಸದ ಅತಿ ಚೋದ್ಯಕರ ಸನ್ನಿವೇಶಗಳಲ್ಲಿ ಒಂದಾಗಿದೆ. ಇಜಿಪ್ತದ ಜನರು ಭೂಮಧ್ಯ ಸಮುದ್ರವನ್ನು ಹಿಂದೀ ಸಾಗರದ ಕೈಯಾದ ಕೆಂಪು ಸಮುದ್ರಕ್ಕೆ ಜೋಡಿಸಬೇಕೆಂದು ೩೦ ಶತಮಾನಗಳ ವರೆಗೆ ಕನಸಲಿಸಿದ ನಂತರ ಫ್ರೆಂಚ ರಾಜದೂತ ಇಂಜನಿಯರನೊಬ್ಬನು ಸಾಹಸಪಟ್ಟು ಈ ಕಾಲುವೆ ತೋಡಿದನು. ಫ್ರೆಂಚ, ತುರ್ಕಿ ಮತ್ತು ಇಜಿಪ್ಶನ್ ಬಂಡವಳವು ಅಗೆದ ಈ ೧೦೫ ಮೈಲುದ್ದದ ಕಂದಕದಲ್ಲಿ ಬ್ರಿಟಿಶರು ಬುದ್ಧಿವಂತಿಕೆಯಿಂದ ಬಹುಭಾಗ ಹಕ್ಕನ್ನು ಸಂಪಾದಿಸಿಕೊಂಡರು.

ವಿರೋಧಾಭಾಸ ಇಲ್ಲಿಗೇ ಮುಗಿಯಲಿಲ್ಲ. ಕಾಲುವೆ ಇಜಿಪ್ತದ ಸ್ವಂತ ಭೂಪ್ರದೇಶದಲ್ಲಿದೆ. ಆದರೆ ಅದರ ಒಡೆತನ ಅಂತಾರಾಷ್ಟ್ರೀಯ ಕಂಪನಿಯೊಂದಕ್ಕೆ ಸೇರಿದೆ. ಇಜಿಪ್ತದ ನೆಲದಲ್ಲಿರುವ ಈ ಕಾಲುವೆಯಲ್ಲಿ ಸಂಚಾರದ ಹಕ್ಕು ಯುದ್ಧ ಮತ್ತು ಶಾಂತಿ ಕಾಲಗಳಲ್ಲಿ ಎಲ್ಲ ಸಮುದ್ರ ಸಂಚಾರಿ ರಾಷ್ಟ್ರಗಳಿಗಿರಬೇಕೆಂದು ೧೮೮೮ ರಲ್ಲಿ ಒಂದು ಅಂತಾರಾಷ್ಟ್ರೀಯ ಒಪ್ಪಂದವಾಯಿತು. ಆದರೆ ಬ್ರಿಟಿಶರು ತಮ್ಮ ಶತ್ರುಗಳಿಗೆ ಅದರ ಉಪಯೋಗ ಯುದ್ಧ ಕಾಲದಲ್ಲಿ ಸಿಕ್ಕದಂತೆ ಮಾಡಲು ಸಾಮಾನ್ಯವಾಗಿ ಯಾವಾಗಲೂ ಯಶಸ್ವಿಗಳಾಗಿದ್ದಾರೆ. ಹಿಟ್ಲರನಿಗೇನಾದರೂ ಇದರ ಉಪಯೋಗ ಸಿಗುವಂತೆ ಕಂಡರೆ ಕಾಲುವೆಯನ್ನು ಹಾರಿಸಿ ಧ್ವಂಸ ಮಾಡಿ ಬಿಡಬೇಕೆಂದು ಚರ್ಚಿಲ್ಲರು ಎರಡನೇ ಮಹಾಯುದ್ಧ ಕಾಲದಲ್ಲಿ ನಿರ್ಧರಿಸಿದ್ದರಂತೆ.

ಭೂಮಧ್ಯ ಸಮುದ್ರವನ್ನು ಕೆಂಪು ಸಮುದ್ರಕ್ಕೆ ಸೇರಿಸುವ ಈ ಮಾನವ ನಿರ್ಮಿತ ಕಂದಕದ ಉದ್ದ ೧೦೫ ಮೈಲು. ಅದರ ತಳದ ಕನಿಷ್ಠ ಅಗಲ ೧೯೬ ಫೂಟು ಮತ್ತು ಮೇಲ್ಭಾಗದ ಕನಿಷ್ಠ ಅಗಲ ೫೧೦ ಫೂಟು. ४೬ ಫೂಟು ಆಳ ನೀರಿರುವ ಅದರಲ್ಲಿ ३५ ಫೂಟು ಆಳದ ವರೆಗೆ ನಿಲುಕುವ ಹಡಗಗಳು ಚಲಿಸಬಲ್ಲವು. ಅದರಲ್ಲಿ ಹಾಯುವ ಹಡಗಗಳ ಒತ್ತಡ ಹೆಚ್ಚಿದಂತೆ ಹೆಚ್ಚುಹೆಚ್ಚಾಗಿ



ತೋಡುವ ಕೆಲಸ ನಡೆಯುತ್ತ ಬಂದಿದೆ. ೧೯೫೩ ರಲ್ಲಿ ೬೦ ಲಕ್ಷ ಘನ ಮೀಟರ ಮಣ್ಣನ್ನು ಕಿತ್ತು ಕಾಲುವೆಯನ್ನು ವಿಸ್ತರಿಸಲಾಯಿತು. ೪೦ ಫೂಟು ಆಳಕ್ಕೆ ನಿಲುಕುವ ಹಡಗಗಳಿಗೂ ಅದರಲ್ಲಿ ಹಾಯ್ದು ಹೋಗಲೆಡೆಯಿರಬೇಕೆಂಬ ಉದ್ದೇಶದಿಂದ ಅದನ್ನು ಸುಧಾರಿಸಲಾಗುತ್ತಿದೆ.

ಕೆಂಪು ಸಮುದ್ರದಿಂದ ಭೂಮಧ್ಯ ಸಮುದ್ರಕ್ಕೆ ಕಾಲುವೆಯನ್ನು ತೋಡುವ ವಿಚಾರ ಕ್ರಿಸ್ತಪೂರ್ವದಿಂದಲೇ ಇಜಿಪ್ತದ ಜನರ ಕಲ್ಪನೆಯಲ್ಲಿತ್ತು. ನೈಲ ನದಿಗೆ "ಪರೋವನ ಕಾಲುವೆ" ಯೆಂದು ಹೆಸರಾದ ಕಾಲುವೆಯನ್ನು ತೋಡಿ ಕೆಂಪು ಸಮುದ್ರಕ್ಕೆ ಜೋಡಿಸಿ, ಅದರ ಮೂಲಕ ಸಣ್ಣ ಹಡಗಗಳಿಗೆ ಸಾಗಲು ಅವಕಾಶ ಮಾಡಿಕೊಂಡಿದ್ದರು. ಕ್ರಿ. ಪೂ. ೫೦೦ ರ ಸುಮಾರಿಗೆ ಈ ಕಾಲುವೆಯನ್ನು ದೊಡ್ಡದು ಮಾಡಲು ನಿಕ್ಕೊ ಪರೋವನೆಂಬವನು ೧೨೦ ಸಾವಿರ ಗುಲಾಮರನ್ನು ಹಚ್ಚಿ ಉಪಕ್ರಮ ಪ್ರಾರಂಭಿಸಿದರೂ ಜ್ಯೋತಿಷಿಗಳು ಇದರಿಂದ ದುರದೃಷ್ಟವುಂಟಾಗುವುದೆಂದು ಹೇಳಿದ್ದರಿಂದ ಅರ್ಧದಲ್ಲೇ ಆ ಕೆಲಸ ನಿಂತಿತು. ಕಾಲಾಂತರದಲ್ಲಿ ಇದೆಲ್ಲವೂ ಹಾಳುಬಿದ್ದು ಹೋಯಿತು.

ಪೋರ್ತುಗೀಜರು ಆಫ್ರಿಕವನ್ನು ಸುತ್ತುಹಾಕಿ ಭಾರತ ಮತ್ತು ಪೂರ್ವ ದೇಶಗಳಿಗೆ ಜಲಮಾರ್ಗ ಶೋಧಿಸಿದ ಮೇಲೆ ೫,೦೦೦ ಮೈಲು ಸುತ್ತು ಬಳಸಿ ಹೋಗುವ ಈ ಹಾದಿಯ ಬದಲು ಸುಯೇಜದಲ್ಲಿ ಕಾಲುವೆ ತೋಡಿದರೆ ಹೇಗೆ ಎಂಬ ವಿಚಾರಕ್ಕೆ ಮತ್ತೆ ಪುಟ ದೊರೆಯಿತು. ಇಂಥ ಕಾಲುವೆಗಳ ಕಾರ್ಯದಲ್ಲಿ ಸಿದ್ಧಹಸ್ತರಾಗಿದ್ದ ವೆನಿಸಿಯನ್ ತಜ್ಞರು ಅದನ್ನು ತೋಡಲು ಮುಂದೆ ಬಂದರು. ಆದರೆ ಅದರಲ್ಲಿ ಯಾರೂ ಉತ್ಸಾಹ ತೋರಿಸಲಿಲ್ಲ. ಕೆಂಪು ಸಮುದ್ರದ ಪಾತಳಿ ಭೂಮಧ್ಯ ಸಮುದ್ರಕ್ಕಿಂತ ತಗ್ಗಾಗಿರುವದರಿಂದ ಕಾಲುವೆ ತೋಡಿದರೆ ಭೂಮಧ್ಯ ಸಮುದ್ರದ ನೀರೆಲ್ಲ ಹಿಂದೀ ಸಾಗರಕ್ಕೆ ಹರಿದುಹೋಗಬಹುದೆಂದು ಕೆಲ ತಜ್ಞರೆನಿಸಿದವರು ಹೆದರಿಸಿದ್ದರಿಂದ ಯೋಜನೆ ಮೂಲೆಗುಂಪಾಯಿತು.

ಕೊನೆಗೊಮ್ಮೆ ಕಾಲುವೆಯನ್ನು ಕಡಿಯುವ ಸಾಹಸಕ್ಕೆ ಕೈಹಾಕಿದ ಲೆಸೆಪ್ಸನೆಂಬ ಫ್ರೆಂಚ ಮನುಷ್ಯನಾದರೂ ಈ ಬಗೆಯ ಸುಳ್ಳುಸೊಟ್ಟು ಅಕ್ಷೇಪಗಳನ್ನು ಎದುರಿಸಿ ಗೆಲ್ಲಬೇಕಾಯಿತು. ಸರಕಾರಿ ನೌಕರಿಯಲ್ಲಿ ಪಳಗಿದ ಮನೆತನವೊಂದರಲ್ಲಿ ೧೮೦೫ ರಲ್ಲಿ ಹುಟ್ಟಿದ ಫರ್ಡಿನಂಡ ಲೆಸೆಪ್ಸನಿಗೆ ಈ ಕಾಲುವೆಯ ಹುಚ್ಚು ಆಕಸ್ಮಿಕವಾಗಿ ತಲೆಯಲ್ಲಿ ಹೊಕ್ಕಿತು. ಲಿಸ್ಬನ್ನಿಗೆ ಫ್ರೆಂಚ ರಾಯಭಾರಿಯಾಗಿ ಹೊರಟಿದ್ದ ಅವನನ್ನು ಅಲ್ಲಿ

ಸುಯೇಜ ಕಾಲುವೆ

ಕ್ವೆರಂಟೈನಿನಲ್ಲಿ ಹಾಕಿದರು. ಅಲ್ಲಿ ವೇಳೆ ಕಳೆಯಲು ಅವನು ಓದಿದ ಪುಸ್ತಕವೊಂದರಲ್ಲಿ,ನೆಪೋಲಿಯನ್ ಬೋನೆಪಾರ್ಟನ ಸೂಚನೆಯಂತೆ ೧೭೯೭ ರಲ್ಲಿ ಲೇಪೇರನೆಂಬ ಇಂಜನಿಯರನು ಈ ಕಾಲುವೆ ತಯಾರಿಕೆಯ ಬಗ್ಗೆ ಮಾಡಿದ ಯೋಜನೆಯ ವಿಚಾರವಿತ್ತು. ಅದು ಕೂಡಲೇ ಅವನ ಕಲ್ಪನಾಶಕ್ತಿಯನ್ನು ಕೆರಳಿಸಿತು. ಕೆಂಪು-ಭೂಮಧ್ಯ ಸಮುದ್ರಗಳ ಜೋಡಣೆಯನ್ನೇ ತನ್ನ ಜೀವನದ ಧ್ಯೇಯವನ್ನಾಗಿ ಅವನು ಮಾಡಿಕೊಂಡನು.

೧೦೦ ಮೈಲುದ್ದದ ಕಾಲುವೆ ತೋಡಿ ಪೂರ್ವ ದೇಶಗಳ ಸಮುದ್ರ ಮಾರ್ಗದ ದೂರವನ್ನು ೫,೦೦೦ ಮೈಲಿನಷ್ಟು ಕಡಿಮೆ ಮಾಡುವ ತನ್ನ ಹಂಬಲವನ್ನು ಸಾಧಿಸಲು ಲೆಸೆಪ್ಸನಿಗೆ ಮೊದಲನೇ ಸೌಕರ್ಯ ಅವನ ಮಿತ್ರನಾಗಿದ್ದ ಇಜಿಪ್ತದ ಸೈಯದ ಪಾಶಾನಿಂದ ದೊರಕಿತು. ಆದರೆ ಯುರೋಪಿನಲ್ಲಿ ಅವನನ್ನು ಕನಸುಗಾರನೆಂದು ನಕ್ಕು ಸಹಾಯ ನಿರಾಕರಿಸುವವರೇ ಹೆಚ್ಚಾಗಿದ್ದರು. ಪ್ರಮುಖ ರಾಜಧಾನಿಗಳಲ್ಲಿ ಈ ಯೋಜನೆಗಾಗಿ ಹಣ ದೊರಕಿಸಲು ಅಲೆಯುತ್ತಿದ್ದಾಗ ದೀರ್ಘಕಾಲ ಅವನು ನಿರಾಶೆಯನ್ನು ಅನುಭವಿಸಬೇಕಾಯಿತು.

ಕಾಲುವೆ ಯೋಜನೆಗೆ ಕೊನೆಯ ವರೆಗೆ ಅಪ್ರತಿಮ ವಿರೋಧವೊಡ್ಡಿದವರೆಂದರೆ ಬ್ರಿಟಿಶರು. ಕಾಲುವೆಯಾದರೆ ಫ್ರೆಂಚ ಸಾಮ್ರಾಜ್ಯದ ಪ್ರಭಾವ ಹೆಚ್ಚುವದೆಂದು ಅಂಜಿದ್ದ ಬ್ರಿಟಿಶ ಪ್ರಧಾನ ಮಂತ್ರಿ ಪಾಮರ್‌ಸ್ಟನ್ನನೂ ಅವನ ಮಂತ್ರಿಗಳೂ ಆಕಾಶಪಾತಾಳ ಒಂದು ಮಾಡಿಯಾದರೂ ಲೆಸೆಪ್ಸನ ಕೆಲಸಕ್ಕೆ ತಡೆಹಾಕುವಾಗಿ ಬೆದರಿಕೆ ಹಾಕಿದರು. ಇಂಗ್ಲೀಷರಿಂದ ಅವನಿಗೆ ಒಂದು ಕವಡೆಯೂ ಸಿಗಲಿಲ್ಲ.

"ಸಾರ್ವಜನಿಕ ಸುಯೇಜ ಕಾಲುವೆ ಕಂಪನಿ" ಯು ೧೮೫೮ ರಲ್ಲಿ ಇಜಿಪ್ತದ ಕಾಯದೆಯ ಪ್ರಕಾರ ಅಸ್ತಿತ್ವಕ್ಕೆ ಬಂದಾಗ ಅದರ ೪,೦೦,೦೦೦ ಶೇರುಗಳಲ್ಲಿ ಅರ್ಧದಷ್ಟನ್ನು ಫ್ರೆಂಚ ಬಂಡವಳಗಾರರೂ ಉಳಿದರ್ಧವನ್ನು ಇಜಿಪ್ತ ಹಾಗು ಅದರ ಅಧಿರಾಜ್ಯವಾಗಿದ್ದ ತುರ್ಕಿ ಸರಕಾರಗಳೂ ಕೊಂಡವು. ಅದೇ ವರ್ಷ ಎಪ್ರಿಲ ೨೫ ರಂದು ಸೈಯದ ಬಂದರದ ಕಡೆಯಿಂದ ಕಾಲುವೆ ಅಗೆಯುವ ಮೊದಲನೇ ಪೆಟ್ಟು ಬಿತ್ತು. ೮,೦೦೦ ಕೂಲಿಕಾರರ ಸಹಾಯ ಸಾಕೆಂದು ಬಗೆದಿದ್ದ ಲೆಸೆಪ್ಸನ ಲೆಕ್ಕ ತಪ್ಪಿ ಬರಬರುತ್ತ ೮೦,೦೦೦ ವರೆಗೂ ಜನರನ್ನು ಕೆಲಸಕ್ಕೆ ಹಚ್ಚುವ ಕಾಲ ಬಂತು. ಇಜಿಪ್ತದ ಖಡೀವನ ನೆರವಿನಿಂದ ಅವನು ಒತ್ತಾಯದಿಂದ ಕೂಲಿಕಾರರನ್ನು ತಂದು ಗುಲಾಮರಾಗಿ ದುಡಿಸಿಕೊಂಡನು. ಆಗ ಬ್ರಿಟಿಶರು ಅವನಿಗೆ ಕೊನೆಯ ಲತ್ತೆ ಕೊಡಲು ಯತ್ನಿಸಿದರು. ಕೂಲಿಕಾರರನ್ನು ದೊರಕಿಸಲು ಅವರು ಅಡ್ಡಿ ಬಂದರು. ಎರಡು ವರ್ಷ ಕೆಲಸ ನಿಂತುಬಿಟ್ಟಿತು. ಆದರೆ ಲೆಸೆಪ್ಸನು ಸೋಲೊಪ್ಪಿಕೊಳ್ಳುವವನಲ್ಲ. ಅವನು ಯಂತ್ರಗಳನ್ನು ತೊಡಗಿಸಿ ಕೆಲಸವನ್ನು ಕೊನೆಗಾಣಿಸಿದನು.

ಕಾಲುವೆಯ ಉದ್ಘಾಟನೆ ನಿಜವಾಗಿ ಅತ್ಯಂತ ವಿಜೃಂಭಣೆಯಿಂದ ನಡೆಯಿತು. ಆಸ್ಟ್ರಿಯದ ಸಾರ್ವಭೌಮ, ಜರ್ಮನಿಯ ರಾಜರು ಆಮಂತ್ರಿತರಾಗಿದ್ದರು. ಮುಖ್ಯ ಅತಿಥಿ ಫ್ರಾನ್ಸಿನ ಮೂರನೇ ನೆಪೋಲಿಯನ್ನನ ರಾಣಿ ಯುಗಾಯಿಯನ್ ಆಗಿದ್ದಳು. ಎಲ್ಲರೂ ಮನೋಹರವಾಗಿ ಸಿಂಗರಿಸಿದ "ಎಗೆಲ್" ಹಡಗದಲ್ಲಿ ಕುಳಿತು ಹೊರಟಾಗ ಕಾಲುವೆಯಲ್ಲಿ ಒಂದು ಹಡಗ ಸಿಕ್ಕಿಬಿದ್ದಿದೆಯೆಂದು ಲೆಸೆಪ್ಸನಿಗೆ ವಾರ್ತೆ ತಲುಪಿತು. ಲೆಸೆಪ್ಸನು ನಿರ್ವಿಕಾರದಿಂದ ಆ ಸಿಕ್ಕುಬಿದ್ದ ಹಡಗವನ್ನು ಮದ್ದಿನಿಂದ ಹಾರಿಸಲು ಆಜ್ಞಾಪಿಸಿ ಸಮಾರಂಭವನ್ನು ನಿರ್ವಿಘ್ನವಾಗಿ ನಿಸ್ತರಿಸಿದನು. ಅವನ ಹಡಗದ ಹಿಂದೆ ಹೊರಟ ೬೦ ರಾಷ್ಟ್ರಗಳ ಯುದ್ಧ ಹಡಗಗಳು ಲೆಸೆಪ್ಸನ ಅಂತಾರಾಷ್ಟ್ರೀಯ ಕೀರ್ತಿ ಗೌರವವನ್ನು ಸಾರಿದವು.

ತಾವು ಕೊನೆತನಕ ವಿರೋಧಿಸಿದ ಈ ಕಾಲುವೆಯಲ್ಲಿ ಬ್ರಿಟಿಶರು ಆರೇ ವರ್ಷಗಳಲ್ಲಿ ದೊಡ್ಡ ಹಕ್ಕು ಸಂಪಾದಿಸಿದ ಕಥೆ ರಾಜಕೀಯ ಧೂರ್ತತನದ ಒಂದು ಮಹಾ ಉದಾಹರಣೆ

ಯಾಗಿದೆ. ಅಷ್ಟರಲ್ಲಿ ಪಾಮರ್ಸ್ಟನ್ನನ ಸ್ಥಾನದಲ್ಲಿ ಬೆಂಜಾಮಿನ್ ಡಿಸ್ರೇಲಿ ಬ್ರಿಟಿಶ ಪ್ರಧಾನಿಯಾಗಿದ್ದನು. ೧೮೭೫ರಲ್ಲಿ ದುಂದುಗಾರಿಕೆಯ ಪರಾಕಾಷ್ಠೆಯಲ್ಲಿ ದಿವಾಳಿಗೆ ಹತ್ತಿರವಾಗಿದ್ದ ಇಜಿಪ್ತದ ಖಡೀವ ಇಸ್ಮೈಲನು ಸುಯೇಜ ಕಂಪನಿಯಲ್ಲಿ ತನಗಿದ್ದ ಶೇರುಗಳನ್ನು ಮಾರಲು ಆತುರನಾಗಿದ್ದನು. ಡಿಸ್ರೇಲಿಗೆ ತನ್ನ ರಾಯಭಾರಿಯ ಮೂಲಕ ಈ ಸುದ್ದಿ ತಿಳಿದೊಡನೆ ಇಲ್ಲಿ ಬ್ರಿಟನಿಗೆ ದೊರೆತ ಸಂಧಿಯನ್ನು ಕಂಡುಕೊಂಡ ಡಿಸ್ರೇಲಿಯು ಪಾರ್ಲಿಮೆಂಟನ್ನೂ ಕೇಳಧೆ ಗುಪ್ತವಾಗಿ ಆ ಶೇರುಗಳನ್ನು ಎತ್ತಿ ಹಾಕಿದನು.

ಇದಕ್ಕೆ ಬೇಕಾದ ಹಣವನ್ನು ಅವನು ಹೊಂದಿಸಿದ ಕಥೆ ಇತಿಹಾಸಪ್ರಸಿದ್ಧವಾಗಿದೆ. ಇಸ್ಮೈಲನಿಗೆ ಕೂಡಲೆ ನಗದು ಹಣ ಬೇಕಿತ್ತು. ಪಾರ್ಲಿಮೆಂಟನ್ನು ಕೇಳಲು ಸಮಯವೂ ಇದ್ದಿಲ್ಲ, ಸುಲಭವೂ ಇದ್ದಿಲ್ಲ. ಆದ್ದರಿಂದ ಡಿಸ್ರೇಲಿಯು ಪ್ರಸಿದ್ಧ ಹಣಗಾರ ಬ್ಯಾರನ್ ರಾಥ್ಸಚೈಲ್ಡನಲ್ಲಿಗೆ ರಾತೋರಾತ್ರಿ ಹೋಗಿ ೪೦ ಲಕ್ಷ ಪೌಂಡು ಸಾಲ ಬೇಡಿದನು.

ಊಟ ಮಾಡುತ್ತಿದ್ದ ರಾಥ್ಸಚೈಲ್ಡನು ಒಂದು ದ್ರಾಕ್ಷೆ ಹಣ್ಣನ್ನು ಬಾಯಲ್ಲಿ ಹಾಕಿಕೊಂಡು, "ಇಷ್ಟು ಹಣಕ್ಕೆ ಏನು ಜಾಮೀನು ?" ಎಂದು ಕೇಳಿದನು.

ಡಿಸ್ರೇಲಿ ಅಳುಕದೆ "ಇಡೀ ಬ್ರಿಟಿಶ ಸರಕಾರ" ಎಂದನು. ಮರುಮಾತಾಡದೆ ಆ ಸಾವುಕಾರ ತಟ್ಟನೆ ಹಣ ಎಣಿಸಲು ಪ್ರಾರಂಭಿಸಿದನು.

ವ್ಯವಹಾರವನ್ನು ಪರಿಷ್ಕಾರವಾಗಿ ಮುಗಿಸಿ ಕ್ರೈಸ್ತ ಇಂಗ್ಲಂಡಿನ ಯಹೂದ್ಯ ಪ್ರಧಾನಮಂತ್ರಿ ಡಿಸ್ರೇಲಿಯು ರಾಣಿ ಎಲಿಜಾಬೇಥಳಲ್ಲಿಗೆ ಹೋಗಿ, "ಇಂದಿನಿಂದ ನೀನು ಜಗತ್ತಿನ ಚಕ್ರವರ್ತಿನಿ !" ಎಂದನು.

ಸುಮಾರು ಆರು ಕೋಟಿ ರೂಪಾಯಿಯಷ್ಟು ಚಿನ್ನ ಕೊಟ್ಟು ಅಂದಿನ ನಟ್ಟಿರುಳ ವ್ಯವಹಾರದಲ್ಲಿ ಡಿಸ್ರೇಲಿಯು ಬ್ರಿಟಿಶ ಸರಕಾರಕ್ಕಾಗಿ ಕೊಂಡ ೧,೭೬,೬೦೨ ಶೇರುಗಳಿಗೆ ಹಿಂದುಗಡೆ ಹೊಸದಾಗಿ ಕೊಂಡ ಶೇರುಗಳೂ ಸೇರಿ ಇಂದು ಕಂಪನಿಯ ಬಂಡವಳದಲ್ಲಿ ಸೇಕಡಾ ೪೦ ರಷ್ಟು ಬ್ರಿಟಿಶ ಸರಕಾರದ ವಶದಲ್ಲಿದೆ. ೧೯೩೦ ರೊಳಗೇ ಬ್ರಿಟಿಶರು ಹಾಕಿದ ಬಂಡವಾಳಕ್ಕೆ ೮ ಪಟ್ಟು ಪ್ರತಿಫಲ ಮುಟ್ಟಿತ್ತು ! ಕಾಲುವೆಯ ಯಾಜಮಾನ್ಯದಲ್ಲಿ ಬಹುಭಾಗ ಪಡೆದ ಬ್ರಿಟಿಶರು ಇಜಿಪ್ತದ ಮೇಲೆ ರಾಜಕೀಯ ಅಧಿಕಾರವನ್ನೂ ಸ್ಥಾಪಿಸಿ ಹೇರಳ ಲಾಭವನ್ನು ಪಡೆದಿದ್ದಾರೆ.

ಇಂದು ಕಂಪನಿಯ ಡೈರೆಕ್ಟರ ಮಂಡಲದಲ್ಲಿ ಬಹುಸಂಖ್ಯಾಕರು (೧೬) ಫ್ರೆಂಚರಿದ್ದರೂ ಫ್ರೆಂಚ ಸರಕಾರಕ್ಕೆ ಅದರಲ್ಲಿ ನೇರವಾದ ಒಡೆತನವಿಲ್ಲ. ಫ್ರೆಂಚರಲ್ಲದೇ ೯ ಜನ ಬ್ರಿಟಿಶ, ೬ ಜನ ಇಜಿಪ್ಶನ್, ಒಬ್ಬ ಅಮೇರಿಕನ್, ಒಬ್ಬ ಡಚ್ಚ ಡೈರೆಕ್ಟರರಿದ್ದಾರೆ.

ಇಜಿಪ್ತದ ಅಧ್ಯಕ್ಷ ನಾಸೀರರು ಸುಯೇಜ ಕಂಪನಿಯ ರಾಷ್ಟ್ರೀಕರಣ ಮಾಡಿದ್ದರಿಂದ ಬ್ರಿಟಿಶರೂ ಫ್ರೆಂಚರೂ ಎಲ್ಲರಿಗಿಂತ ಸಿಟ್ಟಿಗೇಳಲು ಇದೇ ಕಾರಣ.

ಸುಯೇಜ ಕಾಲುವೆಯ ಮಹತ್ವವನ್ನು ಈ ಕೆಳಗಿನ ಕೆಲ ಅಂಕೆ ಸಂಖ್ಯೆಗಳಿಂದ ಊಹಿಸಬಹುದು :

೧೯೫೫ರಲ್ಲಿ ಈ ಕಾಲುವೆಯ ಮೂಲಕ ೧೧,೫೬,೦೦,೦೦೦ ಟನ್ ಸರಕು ಸಾಗಾಟವಾಯಿತು. ಇದರಲ್ಲಿ ಪೆಟ್ರೋಲು ಮತ್ತು ಅದರ ಜನ್ಯ ಪದಾರ್ಥಗಳಂಥ ಅತಿ ಮಹತ್ವದ ಸರಕುಗಳ ಅಂಶ ಸೇಕಡಾ ೬೬ ರಷ್ಟಿತ್ತು. ಉಳಿದ ಸರಕುಗಳೆಂದರೆ ಯುರೋಪಿನ ಉದ್ದಿಮೆಗಳಿಗೆ ಬೇಕಾದ ಕಚ್ಚಾ ಸರಕುಗಳು ಮತ್ತು ಯುರೋಪಿನಿಂದ ಪೂರ್ವ ದೇಶಗಳಿಗೆ ಹೋಗುವ ಸಿದ್ಧ ಸರಕುಗಳು.

೧೯೫೪ ರ ಆದಾಯ ವೆಚ್ಚಗಳ ಸಂಖ್ಯೆಗಳು ಕಾಲುವೆಯಿಂದ ಬರುವ ಪ್ರಚಂಡ ಲಾಭವನ್ನು ತೋರಿಸಲು ಸಾಕು. ಕಂಪನಿಯ ಒಟ್ಟು ಆಯ ಸುಮಾರು ೩೭೧೦ ಲಕ್ಷ ರೂಪಾಯಿ, ವೆಚ್ಚ ೧೭೨೯ ಲಕ್ಷ ರೂಪಾಯಿ ; ಬಡ್ಡಿ ಮೊದಲಾದ ವೆಚ್ಚ

೧೯೯ ಲಕ್ಷ ರೂಪಾಯಿ ಇದ್ದವು. ನಿಕ್ಕಿ ಲಾಭ ಸುಮಾರು ೧೭೮೦ ಲಕ್ಷ ರೂಪಾಯಿ. ಪ್ರತಿ ಶೇರಿನ ಮೇಲೆ ೧೨೫ ರೂಪಾಯಿ ಡಿವಿಡೆಂಡ್ ಹಂಚಲಾಯಿತು.

ಸುಯೇಜ ಕಾಲುವೆಯ ಕಂಪನಿಯು ಮೂಲ ಒಪ್ಪಂದದ ಪ್ರಕಾರ ಇನ್ನು ಹನ್ನೆರಡು ವರ್ಷಗಳಲ್ಲಿ ಹೇಗೂ ಇಜಿಪ್ತದ ವಶಕ್ಕೆ ಹೋಗುವುದಿತ್ತು. ಈ ಕಂಪನಿಯು ಇಜಿಪ್ತದ ಕಾಯದೆ ಪ್ರಕಾರ ಸ್ಥಾಪಿತವಾದುದರಿಂದ ಅದನ್ನು ರಾಷ್ಟ್ರೀಕರಿಸಲು ಅಧಿಕಾರ ಇಜಿಪ್ತದ ಸರಕಾರಕ್ಕಿದೆ ಎಂಬುದನ್ನು ಯಾರೂ ಅಲ್ಲಗಳೆಯುವುದಿಲ್ಲ. ಆದರೆ ಬ್ರಿಟಿಶರೂ ಫ್ರೆಂಚರೂ ಅಮೇರಿಕನ್ನರೂ ಈಗ ಕಾಯದೆಗೆ ತಲೆವಾಗುವ ಮನೋಭೂಮಿಕೆಯಲ್ಲಿಲ್ಲ.

ಇದಕ್ಕೆ ಕಾರಣ ಬರೀ ಸುಯೇಜಕಾಲುವೆಯಿಂದ ಬರುವ ಲಾಭ ಮಾತ್ರವಲ್ಲ. ಮಧ್ಯ-ಪೂರ್ವದಲ್ಲಿ ಬ್ರಿಟಿಶರೂ ಅಮೇರಿಕನ್ನರೂ ನಡೆಸುವ ಗಣಿಗಳಿಂದ ಬರುವ ಎಣ್ಣೆಗೆ ಸುಯೇಜವೇ ಹೆದ್ದಾರಿ. ಸುಯೇಜದ ಸಂಪೂರ್ಣ ಅಧಿಕಾರ ಕೈತಪ್ಪಿದರೆ ಯುದ್ಧಾವಶ್ಯಕವಾದ ಅಮೂಲ್ಯ ಎಣ್ಣೆ ಯುರೋಪಿಗೆ ಬರಲು ಎಲ್ಲಿ ತಡೆಯಾಗುವುದೋ ಎಂದು ಅವರು ಅಂಜಿದ್ದಾರೆ. ತಮ್ಮ ವರ್ಚಸ್ಸು ಮಧ್ಯಪೂರ್ವದಲ್ಲಿ ಇಳಿಮುಖವಾದರೆ ಅಲ್ಲಿ ರಶಿಯಕ್ಕೆ ಎಲ್ಲಿ ಪ್ರವೇಶ ಸಿಗುವುದೋ ಎಂಬ ಅಂಜಿಕೆ ಬೇರೆ.

ಮಧ್ಯಪೂರ್ವದಲ್ಲಿನ ಬ್ರಿಟಿಶರ ಫಜೀತಿ ರಶಿಯನ್ನರಿಗೆ ತುಂಬ ಸಂತೋಷ ತಂದಿದೆ. ಪುಕ್ಕಟೆಯಾಗಿ ಅರಬ ಜಗತ್ತಿನಲ್ಲಿ ಜನಪ್ರಿಯತೆ ಗಳಿಸಿಕೊಳ್ಳಲು ರಶಿಯನ್ನರಿಗೆ ಇದು ಸುಸಂಧಿಯಾಗಿದೆ.



## ಮೂವರು ದೇಶಭಕ್ತರು

ಯುದ್ಧಕಾಲದಲ್ಲಿ ಒಂದು ದಿನ ರಾತ್ರಿ ಭೋಜನಾನಂತರ ಅಮೇರಿಕದ ಅಧ್ಯಕ್ಷ ರೂಜವೆಲ್ಟರೂ ಬ್ರಿಟಿಶ ಪ್ರಧಾನಮಂತ್ರಿ ಚರ್ಚಿಲ್ಲರೂ ರಶಿಯದ ಸರ್ವಾಧಿಕಾರಿ ಸ್ಟಾಲಿನ್ನರೂ ಹರಟೆ ಹೊಡೆಯುತ್ತಿದ್ದರು. ಮಾತು ರಾಷ್ಟ್ರೀಯತೆಯ ಕಡೆ ಹೊರಳಿತು.

ಚರ್ಚಿಲ್ಲರೆಂದರು : “ ನನಗೆ ಇಂಗ್ಲೀಷನಾಗಿ ಹುಟ್ಟುವ ಸುಯೋಗ ಸಿಗದಿದ್ದರೆ ಅಮೇರಿಕನ್ನನಾಗಿ ಹುಟ್ಟಬೇಕೆಂದು ಬಯಸುತ್ತಿದ್ದೆ.''

“ ನನಗೆ ಅಮೇರಿಕನ್ನನಾಗಿ ಹುಟ್ಟುವ ಭಾಗ್ಯವಿಲ್ಲದಿದ್ದರೆ ಇಂಗ್ಲೀಷನಾಗಲು ಇಚ್ಛಿ-ಸುತ್ತಿದ್ದೆ'' ಎಂದು ರೂಜವೆಲ್ಟರೆಂದರು.

ಸ್ಟಾಲಿನ್ನರ ಉತ್ತರ ಬೇರೆಯೇ ಇತ್ತು. “ ರಶಿಯನ್ನನಾಗಿ ಹುಟ್ಟದಿದ್ದರೆ ನನಗೆ ನಾಚಿಕೆಯಾಗುತ್ತಿತ್ತು!'' ಎಂದರವರು.



ಅನುಭವವು ಉತ್ತಮ ಶಿಕ್ಷಕ ಎಂಬುದು ನಿಜ; ಆದರೆ ಈ ಗುರುವಿಗೆ ಸಲ್ಲಿಸಬೇಕಾದ ದಕ್ಷಿಣೆ ಮಾತ್ರ ಬಹಳ ದೊಡ್ಡದಾಗುವದು.

ವಿರೋಧಾಭಾಸಗಳ ನಗರ

# ಕಲಕತ್ತಾ



ಜಗತ್ತಿನಲ್ಲಿಯ ಅತಿ ದೊಡ್ಡ ನಗರಗಳಲ್ಲಿ ಕಲಕತ್ತೆಯು ಒಂದು. ಲಂಡನ, ನ್ಯೂಯಾರ್ಕ್, ಟೋಕಿಯೋ, ಮಾಸ್ಕೋಗಳ ನಂತರ ಕಲಕತ್ತೆಯ ಕ್ರಮಾಂಕವಿದೆ. ಆದರೆ ಕಲಕತ್ತೆ ನೋಡಲೇ ಬೇಕಾದಂಥ ನಗರ ಎಂಬ ಹೆಸರನ್ನೇನೂ ಪಡೆದಿಲ್ಲ. ಅಲ್ಲಿಯ ವೈಶಿಷ್ಟ್ಯವನ್ನು ಕುರಿತು ಹೇಳುವದಾದರೆ ವಿರೋಧಾಭಾಸದ ನಗರ ಇದು ಎನ್ನಬಹುದು. ಜಗತ್ತಿನ ಅತಿ ದೊಡ್ಡ ಪಟ್ಟಣಗಳಲ್ಲಿ ಇದು ತೀರ ಅರ್ವಾಚೀನ ಕಾಲದ್ದಾದರೂ ಇದನ್ನು ಅತಿ ಪ್ರಾಚೀನ ನಗರವೆಂದು ಹೇಳುವಂತಿದೆ. ಮಹಾಮಹಾ ಕಟ್ಟಡಗಳಂತೆ ತೀರ ಮುರಕು ಗುಡಿಸಲುಗಳಿವೆ. ಪಾಶ್ಚಾತ್ಯ ಮತ್ತು ಪೌರಸ್ತ್ಯ ಶಿಲ್ಪಕಲೆಗಳ ಸಂಗಮವನ್ನು ಇಲ್ಲಿ ಕಾಣಬಹುದು.

ದಿಲ್ಲಿಯಂತೆ ಕಲಕತ್ತೆಗೆ ಪುರಾತನ ಇತಿಹಾಸವಿಲ್ಲ. ಈಸ್ಟ ಇಂಡಿಯ ಕಂಪನಿಯ ಏಜಂಟನಾದ ಜಾಬ್ ಚಾರನೊಕ ಎಂಬಾತನು ಈ ನಗರವನ್ನು ಸ್ಥಾಪಿಸಿದನು. ಕಲಕತ್ತೆ ತನ್ನ ಇತಿಹಾಸದಲ್ಲಿ ಬಹಳಷ್ಟು ಏರಿಳಿತಗಳನ್ನು ಅನುಭವಿಸಿದೆ. ಬಂಗಾಲದ ಮುಸ್ಲಿಂ ಗವರ್ನರನು ೧೬೯೮ ರಲ್ಲಿ ಕಲಕತ್ತೆಯನ್ನು ೧,೩೦೦ ರೂಪಾಯಿಗಳಿಗೆ ಈಸ್ಟ ಇಂಡಿಯ ಕಂಪನಿಗೆ ಮಾರಿದನು. ಈಗ ಸುಮಾರು ಇಷ್ಟು ಹಣವನ್ನು ಕಲಕತ್ತೆಯಲ್ಲಿ ಒಂದು ಕೋಣೆಯನ್ನು ಬಾಡಿಗೆಗೆ ಹಿಡಿಯುವದಾದರೆ ಪಾಗಡಿ ಕೊಡಬೇಕಾಗುವದು. ೧೭೫೬ ರಲ್ಲಿ ಬಂಗಾಲದ ಗವರ್ನರನಾದ ಸಿರಾಜ ಉದ್ದೌಲನು ಈ ನಗರವನ್ನು ಕಸಿದುಕೊಂಡ ಬಳಿಕ ೧೭೫೭ ರಲ್ಲಿ ಕ್ಲೈವನು ಇದನ್ನು ಪುನಃ ಗೆದ್ದುಕೊಂಡನು. ಕಲಕತ್ತೆ ೧೭೭೩ ರಲ್ಲಿ ಭಾರತದ ಬ್ರಿಟಿಶರ ವಶದಲ್ಲಿದ್ದ ಪ್ರದೇಶಗಳ ರಾಜಧಾನಿಯಾಯಿತು.

೧೯೧೨ ರ ವರೆಗೆ ಬ್ರಿಟಿಶರ ಆಳಿಕೆಯಲ್ಲಿ ಕಲಕತ್ತೆ ಅವರ ರಾಜಧಾನಿಯಾಗಿತ್ತು. ಅಲ್ಲಿಂದ ಬ್ರಿಟಿಶರು ತಮ್ಮ ರಾಜಧಾನಿಯನ್ನು ದಿಲ್ಲಿಗೆ ಸ್ಥಳಾಂತರಿಸಿದರು. ಭಾರತಕ್ಕೆ ಸ್ವಾತಂತ್ರ್ಯ ದೊರೆತಬಳಿಕ ಕಲಕತ್ತೆ ವಿಭಕ್ತ ಬಂಗಾಲದ (ಈಗ ಪಶ್ಚಿಮ ಬಂಗಾಲ ರಾಜ್ಯವೆಂದು ಕರೆಯಲ್ಪಡುತ್ತಿರುವ ರಾಜ್ಯದ) ರಾಜಧಾನಿಯಾಯಿತು.

ಇತಿಹಾಸವು ಈ ನಗರದ ಮೇಲೆ ಅಳಿಯಲಾರದ ಮುದ್ರೆಯನ್ನೊತ್ತಿದೆ. ಈಸ್ಟ ಇಂಡಿಯ ಕಂಪನಿಯ ಕಾರಕೂನರಿಗೆ "ರೈಟರ್ಸ" (ಬರೆಯುವವರು) ಎಂದು ಕರೆಯುತ್ತಿದ್ದರು. ಈಗಲೂ ಕಲಕತ್ತೆಯ ಆಡಳಿತ ಕಚೇರಿ ಕಟ್ಟಡಗಳಿಗೆ ರೈಟರ ಬಿಲ್ಡಿಂಗ್ಸ ಎಂದೇ ಕರೆಯುತ್ತಾರೆ. ವಾರನ್ ಹೇಸ್ಟಿಂಗ್ಸನ ಕಾರ್ಯಕಾರಿ ಮಂಡಳದ ಸದಸ್ಯರಾದ ಕ್ಲೇವರಿಂಗ ಮತ್ತು ವೇನ್ಸನ್ನರು ವಾಸಿಸಿದ್ದ ಕಟ್ಟಡಗಳೆದುರು ಇನ್ನೂ ಅವರ ಅಲಂಕಾರ ಫಲಕಗಳಿವೆ. ವಾರನ್ ಹೇಸ್ಟಿಂಗ್ಸ ಮತ್ತು ಫಿಲಿಪ್ ಫ್ರಾನ್ಸಿಸರು ದ್ವಂದ್ವ ಯುದ್ಧವೆಸಗಿದ ಸ್ಥಳಕ್ಕೆ ಸಮೀಪವಾಗಿರುವ ರಸ್ತೆಗೆ ಇನ್ನೂ ಡ್ಯೂಯಲ್ (ದ್ವಂದ್ವ ಯುದ್ಧ) ಅವೆನ್ಯೂ ಎಂಬ ಹೆಸರಿದೆ.

ಹುಗ್ಲಿ ನದಿಯ ದಂಡೆಗುಂಟ ಹಬ್ಬಿರುವ ಎರಡು ಮೈಲುದ್ದದ ಮೈದಾನದಲ್ಲಿ ಕಂಡುಬರುವ ಅನೇಕಾನೇಕ ಪ್ರತಿಮೆಗಳು ಈ ನಗರದ ಐತಿಹಾಸಿಕ ಹಿನ್ನೆಲೆಯನ್ನು ಸಾರುತ್ತವೆ. ಅನೇಕ ರಸ್ತೆಗಳಿಗೆ, ಚೌಕಗಳಿಗೆ ಇನ್ನೂ ಹೇಸ್ಟಿಂಗ್ಸ ಸ್ಟ್ರೀಟ, ಡಾಲಹೌಸಿ ಸ್ಕ್ವೇರ್ ಎಂಬಿತ್ಯಾದಿ ಹೆಸರುಗಳಿವೆ. ಹೇಸ್ಟಿಂಗ್ಸನು ವಾಸಿಸುತ್ತಿದ್ದ ಮನೆ ಈಗ ಬಾಲಿಕೆಯರ ಶಾಲೆಯಾಗಿದೆ. ೧೭೦೦ ರಲ್ಲಿ ಔರಂಗಜೇಬ ಚಕ್ರವರ್ತಿಯ ಮೊಮ್ಮಗನು ಕಟ್ಟಿಸಿದನೆಂದು ಹೇಳಲಾಗುತ್ತಿರುವ ಬೆಲಿವೆಡರ ಕಟ್ಟಡವು ಈಸ್ಟ ಇಂಡಿಯಾ ಕಂಪನಿಗೆ ಮಾರಲ್ಪಟ್ಟಿತ್ತು. ಅದನ್ನು ಭಾರತದ ವೈಸರಾಯರ ಚಳಿಗಾಲದ ನಿವಾಸವನ್ನಾಗಿ ಉಪಯೋಗಿಸುತ್ತಿದ್ದರು. ಈಗ ಅಲ್ಲಿ ರಾಷ್ಟ್ರೀಯ ವಾಚನಾಲಯವಿದೆ.

ಪ್ರತಿಯೊಂದು ಮನೆಗೂ ಒಂದು ಇತಿಹಾಸವಿದೆ. ಮನೆಗಳ ಯಜಮಾನರು ಅವುಗಳ ದುರಸ್ತಿಯ ಕಡೆಗೆ ಲಕ್ಷ್ಯಕೊಟ್ಟಿಲ್ಲವಾದ್ದರಿಂದ ಅವು ತೀರ ದುಃಸ್ಥಿತಿಯಲ್ಲಿವೆ.

ನಗರದ ಉತ್ತರ ಭಾಗವು ದಟ್ಟ ವಸತಿಯಿಂದ ತುಂಬಿದೆ. ಚಿಕ್ಕ, ಕಿರಿದಾದ ಓಣಿಗಳಲ್ಲಿ ಅಂತಸ್ತಿನ ಮೇಲೆ ಅಂತಸ್ತು ಏರಿಸಿದ ಕಟ್ಟಡಗಳಿವೆ. ಬೃಹತ್ ಕಲಕತ್ತೆಯ ೫೦ ಲಕ್ಷ ಜನವಸತಿಯಲ್ಲಿ ಒಂದು ನಾಲ್ಕಾಂಶದಷ್ಟು ಜನರು ಮಣ್ಣಿನ ಗುಡಿಸಲುಗಳಲ್ಲಿ ವಾಸಿಸುತ್ತಾರೆ. ತಗಡಿನ ಚಪ್ಪರದ ಮನೆಗಳಲ್ಲಿರುವ ಜನರನ್ನು ಲೆಕ್ಕಕ್ಕೆ ಹಿಡಿದರೆ ಕಲಕತ್ತೆಯ ಅರ್ಧದಷ್ಟು ಭಾಗವನ್ನು ಹೊಲಸುಕೇರಿ ಎಂದು ಕರೆಯಬಹುದು.

ಕಲಕತ್ತೆಯನ್ನು ಉತ್ತರ ಮತ್ತು ದಕ್ಷಿಣ ಎಂದು ವಿಭಾಗಿಸಿದ್ದಾರೆ. ಸುಖವಸತಿ ಜನರ ಬೀದೆಂದು ಕರೆಯಲ್ಪಡುವ, ಆಧುನಿಕ ಅಂಗಡಿಗಳಿರುವ ಪಾರ್ಕಸ್ಟ್ರೀಟ ಎಂಬುದೇ ಉತ್ತರ ಮತ್ತು ದಕ್ಷಿಣ ಕಲಕತ್ತೆಗಳ ನಡುವಿನ ಗಡಿರೇಖೆ. ಪಾರ್ಕಸ್ಟ್ರೀಟಿನ ದಕ್ಷಿಣ ದಿಕ್ಕಿನಲ್ಲಿ ಅಗಲವಾದ ರಸ್ತೆಗಳಿವೆ; ಸುಂದರವಾದ ಭವ್ಯವಾದ ಕಟ್ಟಡಗಳಿವೆ. ಅವುಗಳಲ್ಲಿ ಕೆಲವು ಹಿಂದಕ್ಕೆ ಈಸ್ಟ ಇಂಡಿಯ ಕಂಪನಿಯ ಹಿರಿ ಅಧಿಕಾರಿಗಳವಾಗಿದ್ದವು. ಈಗ ಅಲ್ಲಿ ಈಗಿನ ಸರಕಾರದ ಹಿರಿ ಅಧಿಕಾರಿಗಳು ಇರುತ್ತಾರೆ.

ವಿಶಾಲವಾದ ಸಾರ್ವಜನಿಕ ಕಟ್ಟಡಗಳು, ಹಿಂದೆ ಕ್ಲೈವ್ ಸ್ಟ್ರೀಟ ಎಂದು, ಈಗ ನೇತಾಜಿ ಸುಭಾಷರೋಡ ಎಂದು ಕರೆಯಲ್ಪಡುತ್ತಿರುವ ವ್ಯಾಪಾರೋದ್ದಿಮೆ ಭಾಗವನ್ನು ಬಿಟ್ಟರೆ ಕಲಕತ್ತೆ ಒಂದು ದೊಡ್ಡ ಹಳ್ಳಿಯ ಸ್ವರೂಪದ್ದಿದೆ. ಜನವಸತಿ ಬೆಳೆದಂತೆ ಅದಕ್ಕೆ ಅವಶ್ಯಕವಾದ ಇತರ ಅನುಕೂಲಗಳು ಬೆಳೆದು ಬಂದಿಲ್ಲ.

ಶುದ್ಧನೀರಿನ ಕೊರತೆ ಬಹಳವಿದೆ. ಅನೇಕ ಮನೆಗಳಲ್ಲಿ ನಲ್ಲಿಗಳಿದ್ದರೂ ಅವು ನಾಮಮಾತ್ರ ಕಾರ್‍ಯಕೊಡುವವಾಗಿವೆ. ಅಧಿಕಾಂಶ ಜನರು ಅಶುದ್ಧ ನೀರನ್ನೇ ಕುಡಿಯಬೇಕಾಗುವದರಿಂದ ಕಾಲರಾ ರೋಗವು ಕಲಕತ್ತೆಯಲ್ಲಿ ಪ್ರತಿವರ್ಷದ ಮಾತಾಗಿದೆ.

ಸಾರಿಗೆ ವ್ಯವಸ್ಥೆಯು ಅಷ್ಟಕ್ಕಷ್ಟೇ ಇದೆ. ಬಸ್ಸುಗಳು ಮುರಿದು ಬೀಳುವಂತೆ ಕಾಣುತ್ತವೆ ಟ್ರಾಮು ಗಾಡಿಗಳು ತೀರ ಹಳೆಯ ಕಾಲದವಾಗಿವೆ.

ಜನರಿಗೆ ಕ್ಯೂ ನಿಂತು ಗೊತ್ತಿಲ್ಲ. ಬಸ್ಸು, ಟ್ರಾಮುಗಳಲ್ಲಿ ಏರುವ ಮತ್ತು ಇಳಿಯುವ ಬೇರೆ ಬೇರೆ ಬಾಗಿಲುಗಳು ಇರುವದಿಲ್ಲವಾದ್ದರಿಂದ ಪ್ರತಿ ನಿಲ್ದಾಣದಲ್ಲೂ ಗದ್ದಲವೇ ಗದ್ದಲ ನಡೆದಿರುತ್ತದೆ. ಕ್ಯೂ ಪದ್ಧತಿ ಏಕಿಲ್ಲ ಎಂದು ಕೇಳಿದಾಗ ಕಂಡಕ್ಟರರ ತಲೆ ಒಡೆಸುವ ಇಚ್ಛೆ ತಮಗಿಲ್ಲ ಎಂದು ಟ್ರಾಮುವೇ ಮುಖ್ಯಸ್ಥರೊಬ್ಬರು ಹೇಳಿದ್ದಾರೆ.

ಟೆಲಿಫೋನ ವ್ಯವಸ್ಥೆಯು ಅಸಮರ್ಪಕವಾಗಿದೆ. ರಸ್ತೆಯ ಅಕ್ಕಪಕ್ಕಗಳಲ್ಲಿ ಹೊಲಸು ಬಿದ್ದಿರುತ್ತದೆ. ನಗರಸಭೆ ಅದನ್ನು ತೆಗೆದು ಹಾಕುವ ಮೂರು ಪಟ್ಟು ಪ್ರಮಾಣದಲ್ಲಿ ಅದು ಕಲೆ ಬೀಳುತ್ತದೆ.

ಕಲಕತ್ತಾ ಕಾರ್ಪೊರೇಶನ್ನು ನಗರದ ಅರ್ಧದಷ್ಟು ಜನ ಕರ ಕೊಡುವದಿಲ್ಲವೆನ್ನುತ್ತದೆ. ಒಟ್ಟಿನಲ್ಲಿ ಅದಕ್ಕೆ ವರ್ಷಕ್ಕೆ ತಲಾ ೧೩ ರೂಪಾಯಿ ಕರ ಸಿಗುತ್ತದೆ.

ಬಂಗಾಲದ ವಿಭಜನೆಯ ನಂತರದ ದುರಂತದಿಂದ ಕಲಕತ್ತೆಗೆ ದೊಡ್ಡ ಪೆಟ್ಟು ಬಿದ್ದಿದೆ.

ಸುಮಾರು ೨೭,೦೦,೦೦೦ ನಿರಾಶ್ರಿತರ ಒಂದು ದೊಡ್ಡ ಶಿಬಿರವಾಗಿದೆ ಈ ನಗರ. ಒಬ್ಬನ ವ್ಯವಸ್ಥೆ ಮಾಡಿತು ಎನ್ನುವಷ್ಟರಲ್ಲಿ ಇಬ್ಬರು ನಿರಾಶ್ರಿತರು ಬರುತ್ತಾರೆ.

ಕಲಕತ್ತೆ ದೊಡ್ಡ ಶೈಕ್ಷಣಿಕ ಕೇಂದ್ರವಾಗಿದೆ. ಭಾರತದಲ್ಲೆ ಹಳೆಯದಾದ ವಿಶ್ವವಿದ್ಯಾಲಯ ವಿಲ್ಲಿದ್ದು ಅದರ ಕೈಕೆಳಗೆ ನೂರು ಕಾಲೇಜುಗಳು ಬಗೆಬಗೆಯ ಶಿಕ್ಷಣವೀಯುತ್ತಿವೆ. ಸರ್ ಸ್ಟುವರ್ಟ ಹಾಗ್ ಮಾರ್ಕೆಟ್ಟು (ನ್ಯೂ ಮಾರ್ಕೆಟ) ಪೌರಸ್ತ್ಯ ದೇಶಗಳಲ್ಲೆ ಅತ್ಯಂತ ಆಕರ್ಷಕವಾದ ಪೇಟೆಯಾಗಿದೆ.

ರಾಜಭವನ, ಹಾಯಕೋರ್ಟು, ಸೇಂಟ ಪಾಲ್ಸ ಕ್ಯಾಥೆಡ್ರೆಲ್, ರೇಸ ಕೋರ್ಸ, ಕಾಳಿ ದೇವಾಲಯ, ಜೈನ ಗುಡಿಗಳು, ಮಾರ್ಬಲ್ ಪೆಲೇಸ್ ಮುಂತಾದವುಗಳು ನೋಡತಕ್ಕಂಥ ವಿರುತ್ತವೆ.

ಕಲಾವಿದರ ನಗರವಿದು ಎನ್ನಬಹುದು. ಪ್ರತಿಯೊಂದು ಮನೆಯಲ್ಲೂ ಓರ್ವ ಗಾಯಕನೊ, ಶಿಲ್ಪಿಯೊ, ನಟನೊ, ಲೇಖಕನೊ, ಕವಿಯೊ ಯಾರಾದರೂ ಇದ್ದೇ ಇರುತ್ತಾರೆ.

ಇದು ಅತಿ ಸೆಕೆಯ ಊರಾದ್ದರಿಂದಲೇ ಏನೊ ಜನ ಸ್ವಾಭಾವಿಕವಾಗಿಯೆ ಆಲಸಿಗಳಿರುತ್ತಾರೆ. ಕಲಕತ್ತೆಯಲ್ಲಿ ಇನ್ನೂ ಪಾನ ಪ್ರತಿಬಂಧವಿಲ್ಲ. 'ನಾಯಿಟ್ ಕ್ಲಬ್' ಗಳು ಭರಭರಾಟೆಯಲ್ಲಿ ನಡೆಯುತ್ತವೆ. ಹಾಗಿದ್ದರೂ ರಾತ್ರಿ ೧೦ರ ಸುಮಾರಿಗೆ ರಸ್ತೆಗಳು ನಿರ್ಜನವಾಗಿರುತ್ತವೆ.

ದೇಶದ ನಿರ್ಯಾತ ವ್ಯಾಪಾರದಲ್ಲಿ ಅರ್ಧದಷ್ಟು ಕಲಕತ್ತೆಯ ಮೂಲಕ ನಡೆಯುತ್ತದೆ. ಕಲಕತ್ತೆಯಲ್ಲಿ ಮತ್ತು ಅದರ ಸುತ್ತುಮುತ್ತು ೧೦೦ ಸಣಬಿನ ಗಿರಣಿಗಳಿವೆ. ಅವುಗಳಲ್ಲಿ ಪ್ರತಿವರ್ಷ ೧೫೦ ಕೋಟಿ ರೂ. ಗಳ ಸರಕುಗಳು ಸಿದ್ಧವಾಗುತ್ತವೆ. ಪ್ರತಿವರ್ಷ ಕಲಕತ್ತೆಯಿಂದ ೨,೫೦೦ ಲಕ್ಷ ಪೌಂಡು ಚಹ ನಿರ್ಯಾತವಾಗುತ್ತದೆ.

೧೯೪೭ ರಿಂದ ಕಲಕತ್ತೆಯಲ್ಲಿ ಅನೇಕಾನೇಕ ಉದ್ದಿಮೆಗಳು ಹುಟ್ಟಿಕೊಂಡಿವೆ.

ನವನಾಗರಿಕತೆಯ ಸಂಪರ್ಕವಿದ್ದರೂ ಕಲಕತ್ತೆ ತನ್ನ ಹಳೆಯ ವೈಶಿಷ್ಟ್ಯವನ್ನು ಕಳೆದುಕೊಂಡಿಲ್ಲ.






ಜಗತ್ತಿನಲ್ಲಿ ನಾನಾವಿಧವಾದ ಆಟಗಳಲ್ಲಿ ೧೦ ಕೋಟಿ ಜನರು ಮಗ್ನರಾಗಿರುತ್ತಾರೆಂದು ಹೇಳಬಹುದು. ಆದರೆ ಇನ್ನಾವ ಆಟವೂ ಚದುರಂಗದಾಟದಷ್ಟು ಆಕರ್ಷಕವೂ ಮನೋಹಾರಿಯೂ ಆಗಿರಲಾರದು. ಈ ಆಟಕ್ಕೆ ಬೇಕಾಗುವಷ್ಟು ಬುದ್ಧಿಕೌಶಲ್ಯ ಇನ್ನಾವ ಆಟಕ್ಕೂ ಬೇಕಾಗುವದಿಲ್ಲ. ಈ ಆಟ ಬಹು ಪ್ರಾಚೀನವಾದದ್ದು. ಪರಸ್ಪರರ ಭಾಷೆಯನ್ನರಿಯದ ಇಬ್ಬರು ಆಡಬಹುದಾದ ಕೆಲವೇ ಆಟಗಳಲ್ಲಿ ಇದು ಒಂದು.

ಈ ಆಟದ ಸ್ವಾರಸ್ಯವಿರುವದು ಅದರ ಪರಿಪೂರ್ಣತೆಯಲ್ಲಿ: ಈ ಆಟದಲ್ಲಿ ಅದೃಷ್ಟವೆಂಬುದಕ್ಕೆ ಸ್ಥಾನವಿಲ್ಲ. ಉತ್ತಮ ಆಟಗಾರನು ಯಾವಾಗಲೂ ಗೆಲ್ಲುತ್ತಾನೆ. ಯಾರೂ ಕೈಚಳಕದಿಂದ ಆಟವನ್ನು ಗೆಲ್ಲಲಾರರು. ಆಟದಲ್ಲಿ ಗತ್ತು, ಪ್ರತಿಗತ್ತುಗಳ ರೀತಿ ಅನಂತವಾಗಿದೆ. ಅವುಗಳಲ್ಲಿ ಹೊಸ ಹೊಸ ವಿಧಾನಗಳನ್ನು ಕಂಡುಹಿಡಿಯಬಲ್ಲೆನೆಂಬ ಛಲವೇ ಈ ಆಟಕ್ಕೆ ಸ್ಫೂರ್ತಿಯನ್ನೀಯುತ್ತದೆ. ಸ್ಪರ್ಧೆಗು ಆಟಕ್ಕೆ ಕುಳಿತವರಲ್ಲಿ ಈರ್ಷೆಯು ಜಾಲದಲ್ಲಿ ಸಿಕ್ಕು ಅತ್ತವರೂ ಎಚ್ಚರದಪ್ಪಿದವರೂ ಇದ್ದಾರೆ.

ಈ ಆಟವನ್ನು ಕಲಿಯುವದು ಕಠಿಣ ಎಂಬ ಕಲ್ಪನೆ ಸಾಮಾನ್ಯರಲ್ಲಿದೆ. ಆದರೆ ಹಾಗೇನಿಲ್ಲ. ಈ ಆಟವನ್ನು ಕಲಿಯುವದು ಸುಲಭ. ಪ್ರಾಚೀನ ಕಾಲದಲ್ಲಿನ ಯುದ್ಧ ನೀತಿಯನ್ನು ಪ್ರದರ್ಶಿಸಲು ಉದಯಿಸಿದ ಈ ಆಟವು ತಂತಮ್ಮ ರಾಜ ಮತ್ತು ರಾಣಿಯರ ನೇತೃತ್ವದಲ್ಲಿ ಮುನ್ನಡೆಯುವ ಎರಡು ಸೈನ್ಯಗಳ ನಡುವಿನ ಕಾದಾಟವಾಗಿದೆ. ಎದುರಾಳಿ ಅರಸನನ್ನು ಹಿಡಿಯುವ ಇಲ್ಲವೆ ತಡೆಯುವ ರೀತಿಯಲ್ಲಿ ಆತನನ್ನು ಅಡ್ಡಗಟ್ಟಿ ಬಳಿಕ ಆಕ್ರಮಣ ಮಾಡುವದೇ ಆಟದ ಗುರಿಯಾಗಿದೆ.

ಈ ಆಟವನ್ನು ಕಲಿಯುವದು ಸುಲಭವಾದರೂ ಅದರಲ್ಲಿ ಕೌಶಲ್ಯ ಸಂಪಾದಿಸುವದಕ್ಕೆ ತುಂಬ ತಾಳ್ಮೆಯೂ ಕುಶಾಗ್ರ ಬುದ್ಧಿಯೂ ಅಗತ್ಯವಿದೆ.

ಚದುರಂಗದಾಟದ ಹುಚ್ಚು ಹತ್ತಿತೆಂದರೆ ಅದು ಮುಂದೆ ಬಿಡಿಸಲಾರದ ಹುಚ್ಚಾಗುತ್ತದೆ.

ಚಂದ್ರಗುಪ್ತನನ್ನು ಮೌರ್ಯ ಸಮ್ರಾಟನನ್ನಾಗಿ ಮಾಡಿದ ಬಳಿಕ ತನ್ನ ಕಾರ್ಯ ಮುಗಿಯಿತೆಂದು ಚಾಣಕ್ಯನು ತಿಳಿಯಲಿಲ್ಲ. ತಾನು ಸಮ್ರಾಟನನ್ನಾಗಿ ಮಾಡಿದ ವ್ಯಕ್ತಿಯು ತನ್ನ ಕಾರ್ಯದಲ್ಲಿ ವ್ಯತ್ಯಯ ತರುವ ವಿಚಾರ ಕೂಡ ಚಾಣಕ್ಯನಿಗೆ ಸಹನವಾಗುವಂತಿರಲಿಲ್ಲ. ಇದಕ್ಕಾಗಿ ಚಾಣಕ್ಯ ಹೂಡಿದ ತಂತ್ರ ಬಹು ಚಾಣಾ

ಕ್ಷತ್ರಸಿದ್ಧಿತ್ತು. ಮಹಾರಾಜ ಚಂದ್ರಗುಪ್ತನಿಗೆ ಅವನು ಚದುರಂಗದಾಟವನ್ನು ಕಲಿಸಿದನು. ಚಂದ್ರಗುಪ್ತನು ಈ ಆಟಕ್ಕೆ ಮನಸೋತು ದಿನವಿಡೀ ಆಟದ ನಾನಾ ರಹಸ್ಯಗಳ ವಿಚಾರದಲ್ಲೆ ಮಗ್ನನಾಗಿರುತ್ತಿದ್ದನು. ಚಾಣಕ್ಯನು ಆತನ ಹೆಸರಿನಲ್ಲಿ ರಾಜ್ಯಭಾರವನ್ನು ಅನಿರ್ಬಂಧ ರೀತಿಯಲ್ಲಿ ಸಾಗಿಸುತ್ತಿದ್ದನು.

ಮುಂದೆ ಬೌದ್ಧರ ಕಾಲದಲ್ಲಿ ಚದುರಂಗದಾಟಕ್ಕೆ ಬಹಳ ಪ್ರೋತ್ಸಾಹ ಸಿಕ್ಕಿತು. ಮಾನವನ ಮನಸ್ಸನ್ನು ಏಕಾಗ್ರಗೊಳಿಸಲು ಮತ್ತು ಮಾನವನ ಹಿಂಸಾಪ್ರವೃತ್ತಿಯನ್ನು ಶಾಂತಗೊಳಿಸಲು ಚದುರಂಗದಾಟವು ಒಂದು ಸಾಧನವೆಂದು ಬೌದ್ಧರು ಸ್ವೀಕರಿಸಿದ್ದರು.

ಚದುರಂಗದಾಟದ ವಿಚಾರದಲ್ಲಿ ಸರ್ ವಿಲಿಯಂ ಜೋನ್ಸ ಎಂಬ ಆಂಗ್ಲ ವಿದ್ವಾಂಸನು ಬಹಳಷ್ಟು ಸಂಶೋಧನೆ ಮಾಡಿದ್ದಾನೆ ಈತ ತನ್ನ ಪುಸ್ತಕದಲ್ಲಿ ಚದುರಂಗದ ಆಟವನ್ನು ರಾವಣನ ಪತ್ನಿ ಮಂಡೋದರಿ ಶೋಧಿಸಿದಳು ಎಂದು ಸಿದ್ಧ ಮಾಡಿದ್ದಾನೆ. ಯುದ್ಧಪ್ರೇಮಿಯಾದ ರಾವಣನು ಆಗಾಗ ಯುದ್ಧಗಳಲ್ಲಿ ಮಗ್ನನಾಗಿರುತ್ತಿದ್ದುದರಿಂದ ಮಂಡೋದರಿಯ ಪಾಲಿಗೆ ಚಿರವಿರಹಿಣಿಯ ಗತಿ ಪ್ರಾಪ್ತವಾಗಿತ್ತು. ತನ್ನ ವ್ಯಥೆಯನ್ನು ಕಡಿಮೆ ಮಾಡಿಕೊಳ್ಳಲು ಮತ್ತು ಪತಿಯ ಅಭಿರುಚಿಯನ್ನು ತೃಪ್ತಿಪಡಿಸಲು ಆಕೆ ಬುದ್ಧಿಕುಶಲತೆಯಿಂದ ಒಂದು ಆಟವನ್ನು ಶೋಧಿಸಿದಳು. ರಾವಣನ ವ್ಯೂಹರಚನೆ ಮತ್ತು ಪ್ರತಿಸ್ಪರ್ಧಿಗಳ ಪರಾಜಯ ಚಾಪಲ್ಯಗಳು ಹಿಂಗಿ ಆತ ಹೊರಗೆ ಹೋಗದಂತೆ ಮಾಡಬಲ್ಲ ಆಟವನ್ನು ಮಂಡೋದರಿ ಹುಡುಕಿದಳು. "ಭವಿಷ್ಯ ಪುರಾಣ" ದಲ್ಲಿ ಈ ಕಥೆಯು ಉಲ್ಲೇಖವಿದೆ. ವಾಲ್ಮೀಕಿ ರಾಮಾಯಣದಲ್ಲಿ ಚದುರಂಗದಾಟದ ಉಲ್ಲೇಖವಿರದಿದ್ದರೂ ಅದರಲ್ಲಿ ಬರುವ "ಚತುರಂಗ ಬಲ" ಮತ್ತು "ಅಷ್ಟಾಪದ" ಎಂಬ ಶಬ್ದಗಳಿಂದ ಆ ಕಾಲದಲ್ಲಿ ಚದುರಂಗದಾಟ ಪ್ರಚಲಿತವಿತ್ತು ಎಂದು ಊಹಿಸಬಹುದಾಗಿದೆ.

ಮಹಾಭಾರತ ಕಾಲದಲ್ಲೂ ಈ ಆಟ ಪ್ರಚಲಿತವಾಗಿತ್ತು. ವ್ಯಾಸ ಮಹರ್ಷಿಯು ಚದುರಂಗದಾಟವನ್ನು ಯುಧಿಷ್ಠಿರನಿಗೆ ಕಲಿಸಿದ್ದನೆಂದು ಒಂದೆಡೆ ಉಲ್ಲೇಖವಿದೆ.

ಭಾರತದಲ್ಲಿ ಮಾತ್ರವಲ್ಲ, ವಿಶ್ವದಲ್ಲೆಲ್ಲ ಈ ಆಟ ಜನಪ್ರಿಯವಾಗಿದೆ. ಚೀನ, ಅರಬಸ್ತಾನ, ಇರಾಣ, ಯುನಾನ ಮುಂತಾದ ಹದಿನಾಲ್ಕು ರಾಷ್ಟ್ರಗಳಲ್ಲಿ ಪ್ರತಿಯೊಂದೂ ಚದುರಂಗದಾಟ ತನ್ನಲ್ಲಿಯೆ ಹುಟ್ಟಿತು ಎಂದು ಹೇಳಿಕೊಳ್ಳುತ್ತದೆ. ಚೀನೀ ಭಾಷೆಯಲ್ಲಿ ಈ ಆಟಕ್ಕೆ "ಚೋಕೀ-ಚೂ-ಹಾಂಗ-ಕೀ" ಎಂಬ ಹೆಸರಿದೆ. ಇದರ ಅರ್ಥ "ಯುದ್ಧದಾಟ" ಎಂದಾಗುತ್ತದೆ. ಓರ್ವ ಚೀನೀ ಸಮರತಜ್ಞನು ಈ ಆಟವನ್ನು ಕಂಡು ಹಿಡಿದನು ಎಂದು ಚೀನದಲ್ಲಿ ಲೋಕಕಥೆಯಿದೆ.

ಇಂಥದೊಂದು ಕಥೆ ಲಂಕೆಯಲ್ಲಿಯೂ ಇದೆ. ಆ ಕಥೆ ಇಂತಿದೆ: ಒಮ್ಮೆ ಲಂಕೆಯ ಓರ್ವ ರಾಜನು ಶತ್ರು ಸೈನ್ಯವನ್ನು ನಾಲ್ಕೂ ದಿಕ್ಕುಗಳಿಂದ ಮುತ್ತಿದನು. ಶತ್ರು ರಾಜನು ಇದರಿಂದ ವಿವಂಚನೆಗೊಳಗಾದನು. ಆತನ ಚಿಂತೆಯನ್ನು ಹೋಗಲಾಡಿಸಲು ಆತನ ರಾಣಿ ಈ ಆಟದ ಮೂಲಕ ಶತ್ರುವಿನ ಮುತ್ತಿಗೆಯನ್ನು ಭೇದಿಸುವ ಯುಕ್ತಿಯನ್ನು ಹೇಳಿಕೊಟ್ಟಳು.

ಈ ರೀತಿಯ ಅನೇಕ ಕಥೆಗಳಿದ್ದರೂ ಭಾರತದ ಕಥೆಗೇ ಹೆಚ್ಚು ಪುಷ್ಟಿಯಿದೆ. "ಶತರಂಜ" ಎಂಬ ಶಬ್ದ ಪಾರಸೀ ಭಾಷೆಯಲ್ಲಿ ಚದುರಂಗಕ್ಕೆ ಇದ್ದರೂ ಆ ಭಾಷೆಯಲ್ಲಿ ಈ ಶಬ್ದಕ್ಕೆ ಅರ್ಥವೇ ಇಲ್ಲ. ಚತುರಂಗವೆಂಬುದು ಸಂಸ್ಕೃತ ಶಬ್ದವಿದ್ದು "ಶತರಂಜ" ಎಂಬ ಪರ್ಶಿಯನ್ ಶಬ್ದ "ಚತುರಂಗ"ದ ಅಪಭ್ರಂಶವೆಂದು ಈಗ ಸಾಮಾನ್ಯವಾಗಿ ನಿಷ್ಪಕ್ಷಪಾತಿಗಳು ಒಪ್ಪುತ್ತಾರೆ.

ಇತಿಹಾಸದ ದಿಶೆಯನ್ನು ಈ ಆಟ ಬದಲಾಯಿಸಿದ ಘಟನೆಗಳು ಎಷ್ಟೋ ಇವೆ.

ಬ್ರಿಟನ್ನಿನ ಅರಸು ಜಾನನ ಸೈನ್ಯ ಒಮ್ಮೆ ಶತ್ರುಗಳಿಂದ ಪರಾಜಿತವಾಯಿತು. ಸೇನಾಪತಿ ಈ ಸಮಾಚಾರವನ್ನು ಅರಸನಿಗೆ ತಿಳಿಸಲೆಂದು ಅರಮನೆಗೆ ಬಂದನು. ಆದರೆ ಆಗ ಚದುರಂಗದಾಟದಲ್ಲಿ ಮಗ್ನನಾಗಿದ್ದ ಅರಸನು ಅವನಿಗೆ ಭೆಟ್ಟಿ

ಕೊಡಲೇ ಇಲ್ಲ.

ತೈಮೂರಲಿಂಗನಂಥ ಕ್ರೂರ ಸೇನಾನಾಯಕನು ಯುದ್ಧರಂಗದಲ್ಲಿ ಕೂಡ ಒಂದು ದಿನವಾದರೂ ಚದುರಂಗವನ್ನಾಡದೆ ಕಳೆಯುತ್ತಿರಲಿಲ್ಲ.

ಒಮ್ಮೆಯಂತೂ ಈ ಆಟ ಒಂದು ಮಹಾಯುದ್ಧಕ್ಕೆ ಕಾರಣವಾಗುವದರಲ್ಲಿತ್ತು. ಬ್ರಿಟನ್ನಿನ ರಾಜಕುಮಾರ ಹೆನ್ರಿ ಮತ್ತು ಫ್ರಾನ್ಸಿನ ರಾಜಕುಮಾರ ಲೂಯಿ ಚದುರಂಗವಾಡುತ್ತ ಕುಳಿತಿದ್ದರು. ಆಟದಲ್ಲಿ ಸೋತ ಲೂಯಿ ಕ್ರುದ್ಧನಾಗಿ ಶಿಷ್ಟಾಚಾರವನ್ನು ಮರೆತು ಚದುರಂಗದ ಪ್ಯಾದೆಗಳನ್ನು ಹೆನ್ರಿಯ ಮುಖಕ್ಕೆ ಎಸೆದನು. ಹೆನ್ರಿ ಸಂತಪ್ತನಾಗಿ ಲೂಯಿಯನ್ನು ಸಂಹರಿಸಲು ಖಡ್ಗ ಹಿರಿದನು. ಸುತ್ತಲಿನ ಜನ ವಿಶ್ವಪ್ರಯತ್ನದಿಂದ ಅವರೀರ್ವರನ್ನು ಶಾಂತಗೊಳಿಸದಿದ್ದರೆ ಈ ಘಟನೆ ಬ್ರಿಟನ್ ಮತ್ತು ಫ್ರಾನ್ಸಗಳಲ್ಲಿ ಮಹಾಯುದ್ಧಕ್ಕೆ ಕಾರಣವಾಗುತ್ತಿತ್ತು.

ಬ್ರಿಟನ್ನಿನ ಒಬ್ಬ ಅರಸನು ಆಟದಲ್ಲಿ ತನ್ನ ಮಂತ್ರಿ ತನಗಿಂತ ಕುಶಲತೆಯಿಂದ ಆಡಿದ್ದನ್ನು ಕಂಡು ಕುಪಿತನಾಗಿ ಅವನ ಶಿರಶ್ಛೇದ ಮಾಡಿಸಿದ ಉಲ್ಲೇಖವಿದೆ.

ಚದುರಂಗದಾಟಕ್ಕೆ ಸಂಬಂಧಿಸಿದ ಹಿಂದಿನ ಕಾಲದ ಇಂಥ ಘಟನೆಗಳಂತಿರಲಿ. ಇತ್ತೀಚೆಗೆ ನಡೆದ ಕುತೂಹಲಕಾರಿಯಾದ ಘಟನೆಗಳೂ ಇವೆ. ಕಳೆದ ಶತಮಾನದಲ್ಲಿ ಸ್ಪೇನದ ಓರ್ವ ಮತ್ತು ಇಟಲಿಯ ಓರ್ವನಿಗೆ ಚದುರಂಗದಾಟದ ಸ್ಪರ್ಧೆ ನಡೆಯಿತು. ಅವರಿಬ್ಬರೂ ತಂತಮ್ಮ ಊರುಗಳಲ್ಲೇ ಇದ್ದು ಆಟವಾಡಿದರು. ಈ ಆಟಕ್ಕಾಗಿ ಇಟಲಿ ಮತ್ತು ಸ್ಪೇನಗಳಿಗೆ ಹೋಗಿ ಬಂದು ಮಾಡುವ ಸಂದೇಶವಾಹಕರು ನಿಯಮಿಸಲ್ಪಟ್ಟರು. ಆಟಗಾರರ ಪರಸ್ಪರರ ಗತ್ತುಗಳನ್ನು ಇವರು ಪರಸ್ಪರರಿಗೆ ತಿಳಿಸುತ್ತಿದ್ದರು. ಈ ಆಟ ಇವರಿಬ್ಬರಲ್ಲಿ ಸಾಯುವವರೆಗೂ ನಡೆಯಿತು. ಸ್ಪರ್ಧೆಯಲ್ಲಿ ಓರ್ವನು ಸತ್ತಾಗ ಅವನ ಸ್ಥಳದಲ್ಲಿ ಅವನ ಪ್ರತಿನಿಧಿಯೆಂದು ಇನ್ನೋರ್ವನು ಆಡತೊಡಗಿದನು.

ಈಗ ಈ ಆಟವನ್ನು ಪತ್ರದ್ವಾರಾ ಮತ್ತು ತಂತಿದ್ವಾರಾ ಕೂಡ ಆಡುತ್ತಾರೆ. ೧೮೬೭ರಲ್ಲಿ ಓರ್ವ ಅಮೇರಿಕನ್ ಮತ್ತು ಓರ್ವ ಬ್ರಿಟಿಶ್‌ನಲ್ಲಿ ತಂತಿಯ ಮೂಲಕ ಈ ಆಟದ ಪಂದ್ಯ ನಡೆದಾಗಿನಿಂದ ಅಂಚೆಯ ಮುಖಾಂತರ ಈ ಆಟ ನಡೆಯುವದಕ್ಕೆ ಪ್ರಾರಂಭವಾಯಿತು.

ಆಸ್ಟ್ರಿಯಾದ ಕೆ. ಡಿ. ಜಾನ ಎಂಬಾತನು ತನ್ನ ಮಹಲಿನ ನೆಲಕ್ಕೆ ಹಾಸಿದ ಕಲ್ಲುಗಳ ಮೇಲೆ ಚದುರಂಗದ ಪಟವನ್ನು ಬರೆಯಿಸಿ ನಿರ್ಜೀವ ಪ್ಯಾದೆಗಳ ಸ್ಥಾನದಲ್ಲಿ ವೇಷಧಾರಿ ಮನುಷ್ಯರನ್ನು ನಿಲ್ಲಿಸಿ ಆಟವಾಡುತ್ತಿದ್ದನು.

ರಶಿಯದಿಂದ ಗಡೀಪಾರಾದ ಬಳಿಕ ಊರೂರು ಅಲೆಯುತ್ತಿದ್ದ ಲೆನಿನ್ನನು ಮನಸ್ಸನ್ನು ರಮಿಸಿಕೊಳ್ಳಲೆಂದು ಚದುರಂಗವಾಡಲು ಕಲಿತನು. ಮುಂದೆ ಏಕಕಾಲಕ್ಕೆ ಅನೇಕರೊಡನೆ ಈ ಆಟವನ್ನು ಆಡುವ ಮಟ್ಟಿಗೆ ಆತನು ನಿಪುಣನಾದನು.

ವರ್ತಮಾನ ಕಾಲದಲ್ಲಿ ಜಗತ್ತಿನಲ್ಲಿ ರಶಿಯವೇ ಚದುರಂಗದಾಟಕ್ಕೆ ಪ್ರಸಿದ್ಧವಾಗಿದೆ. ಅಲ್ಲಿ ರೇಲ್ವೆ ನಿಲ್ದಾಣಗಳಲ್ಲಿ, ಬ್ಯಾಂಕುಗಳಲ್ಲಿ, ಉದ್ಯಾನಗಳಲ್ಲಿ ಎಲ್ಲಿ ನೋಡಿದಲ್ಲಿ ಜನ ಅವಕಾಶ ದೊರೆತೊಡನೆ ಚದುರಂಗದಾಟದಲ್ಲಿ ಮಗ್ನರಾಗುತ್ತಾರೆ ಎಂದು ಮಾರ್ಶಲ್ ಮೈಕ್ ಡ್ಯೂಥಿ ಎಂಬ ಪ್ರವಾಸಿ ಬರೆದಿದ್ದಾನೆ. ೧೯೫೦ ರಲ್ಲಿ ರಶಿಯದಲ್ಲಿ ೭ ಲಕ್ಷ ಚದುರಂಗ ಪ್ರವೀಣರಿದ್ದರು ಎಂದು ಡ್ಯೂಮ ಅಲೆಗ್ಸಾಂಡರ ಎಂಬ ಕ್ರೀಡಾತಜ್ಞನು ಹೇಳಿದ್ದಾನೆ.

ರಶಿಯದಲ್ಲಿ ಕಮ್ಯುನಿಜಂ ಸತ್ತೆ ಬಂದ ಬಳಿಕ ಶ್ರೀಮಂತರು, ರಾಜಕಾರಣಿಗಳು, ವಿರೋಧಿಗಳು ಸಹಸ್ರಾರು ಸಂಖ್ಯೆಯಲ್ಲಿ ಸೆರೆಮನೆ ಸೇರಿದರು. ಈ ಸೆರೆಯಾಳುಗಳಲ್ಲಿ ಒಬ್ಬ ಚದುರಂಗ ಪ್ರವೀಣನ ವಿಷಯ ಸ್ಟಾಲಿನ್ನನಿಗೆ ಗೊತ್ತಾಯಿತು. ಸ್ಟಾಲಿನ್ನನಿಗೂ ಚದುರಂಗದಾಟದ ಹುಚ್ಚು ಇತ್ತು. ಸೆರೆಮನೆಗೆ ಹೋಗಿ ಆ ಆಟಗಾರನನ್ನು ಕಂಡು ತನ್ನೊಡನೆ ಆಡಬೇಕೆಂದು ಸ್ಟಾಲಿನ್ ಕೇಳಿದನು. ಅದಕ್ಕೆ ಆ ಸೆರೆಯಾಳು

"ಆಡಲಡ್ಡಿಯಿಲ್ಲ. ಆದರೆ ನೀನು ಸೋತರೆ ನನ್ನನ್ನು ಬಿಡುಗಡೆ ಮಾಡಿ ರಶಿಯದ ಹೊರಗೆ ಸುರಕ್ಷಿತ ಕಳಿಸಬೇಕು. ಈ ಕರಾರಿಗೊಪ್ಪಿದರೆ ಮಾತ್ರ ಆಡುತ್ತೇನೆ" ಎಂದ. ಸ್ಟಾಲಿನ್ನನು ಅದ ಕ್ಕೊಪ್ಪಿದನು. ಆಟದಲ್ಲಿ ಸೋತ ಸ್ಟಾಲಿನ್ನನು ಕರಾರಿನಂತೆ ಆ ಸೆರೆಯಾಳನ್ನು ಬಿಡುಗಡೆ ಮಾಡಿದನು ಎಂದು ವಿಲ್ ಡ್ಯುರಾಂಟಿ "ರಶಿಯದಲ್ಲಿ ೧೫ ವರ್ಷಗಳು" ಎ [illegible]ಕದಲ್ಲಿ ಬರೆದಿದ್ದಾನೆ.

ಭಾರತದ ಚದುರಂಗ [illegible]ವೀಣರಲ್ಲಿ ಓರ್ವರಾದ ಶ್ರೀ. ಜಿ. ಆರ್. ಕೆ. [illegible]ಕರ ಎಂಬವರು ಈ ಆಟದ ವಿಷಯದಲ್ಲಿ ಸಂಶೋಧನ ಕಾರ್ಯವನ್ನೂ ಮಾಡಿದ್ದಾರೆ. ಚದುರಂಗಪ್ರಿಯನಾದ ಎರಡನೆ ಬಾಜೀರಾವ ಪೇಶವೆಯ ಪ್ರೇರಣೆಯಿಂದ ಬರೆಯಲ್ಪಟ್ಟಿದ್ದ ಒಂದು ಸಂಸ್ಕೃತ ಗ್ರಂಥವನ್ನೂ ತಿರುವೆಂಗಡಾಚಾರ್ಯ ವಿರಚಿತ ''ವಿಲಾಸಮಣಿಮಂಜರಿ'' ಎಂಬ ಸಂಸ್ಕೃತ ಗ್ರಂಥವನ್ನೂ ಇವರು ಪ್ರಕಟಿಸಿದ್ದಾರೆ. ''ವಿಲಾಸಮಣಿಮಂಜರಿ'' ಯಲ್ಲಿ ಚದುರಂಗದಾಟದ ವಿಧಿ-ವಿಧಾನಗಳು ಉಲ್ಲೇಖವಾಗಿವೆ.

ಕಣ್ಣು ಕಟ್ಟಿಕೊಂಡು ಈ ಆಟವನ್ನಾಡುವ ಪ್ರತಿಭಾವಂತರೂ ಇದ್ದಾರೆ. ಎದುರಾಳಿಯ ಪಟ್ಟನ್ನು ಓರ್ವ ನ್ಯಾಯನಿರ್ಣಾಯಕ (ಅಂಪಾಯರ) ನು ಹೇಳುತ್ತಾನೆ. ಆಗ ಕಣ್ಣು ಕಟ್ಟಿಕೊಂಡವ ತನ್ನ ಮುಂದಿನ ಪಟ್ಟನ್ನು ಹೇಳುತ್ತಾನೆ. ಕಣ್ಣು ಕಟ್ಟಿಕೊಂಡವನಿಗೆ ತನ್ನೆಲ್ಲ ಕಾಯಿಗಳ ಸ್ಥಾನಗಳು ಸರಿಯಾಗಿ ನೆನಪಿರಬೇಕಾಗುವದಲ್ಲದೆ ತನ್ನ ಮುಂದಿನ ಪಟ್ಟುಗಳ, ಎದುರಾಳಿಯ ಸಂಭವನೀಯ ಪಟ್ಟುಗಳ ಕಲ್ಪನೆಯೂ ಇರಬೇಕಾಗುತ್ತದೆ. ೧೯೪೭ ರಲ್ಲಿ ಕಣ್ಣು ಕಟ್ಟಿಕೊಂಡು ಏಕಕಾಲಕ್ಕೆ ೪೫ ಜನರೊಡನೆ ಆಡಿ ಅವುಗಳಲ್ಲಿ ಕೇವಲ ಎರಡರಲ್ಲಿ ಮಾತ್ರ ಸೋತು ಉಳಿದವರನ್ನು ಗೆದ್ದು ಅರ್ಜೆಂಟಿನದ ಮಿಗಲ್ ನದಾರ್ಫ ಎಂಬಾತನು ವಿಕ್ರಮ ಸ್ಥಾಪಿಸಿದ್ದಾನೆ.

ಭಾರತದಲ್ಲಿ ಪ್ರಥಮತಃ ಪ್ರಚಾರಕ್ಕೆ ಬಂದ ಚದುರಂಗದಾಟವನ್ನು ಕ್ರಿ. ಶ. ಪೂ. ೨೦೦ ರ ಸುಮಾರಿಗೆ ಉತ್ತರ ಆಫ್ರಿಕೆಯ ಮೂರರು ಸ್ಪೇನಕ್ಕೆ ತಂದರೆಂದು ಹೇಳುತ್ತಾರೆ. ಅಲ್ಲಿಂದ ಮುಂದೆ ಈ ಆಟ ಇಡೀ ಯುರೋಪವನ್ನು ಮೋಹಿಸಿತು.

ಟ್ರೆಂಟನ್ ಯುದ್ಧವನ್ನು ಗೆಲ್ಲಲು ಜಾರ್ಜ ವಾಶಿಂಗ್ಟನ್ನನಿಗೆ ಚದುರಂಗದಾಟ ಸಹಾಯ ಮಾಡಿತು. ತನ್ನ ಆಕ್ರಮಣದ ಸಿದ್ಧತೆಯನ್ನು ಆತ ಗುಪ್ತವಾಗಿಟ್ಟಿದ್ದರೂ ಓರ್ವ ರಾಜನಿಷ್ಠನು ಬ್ರಿಟಿಶ್ ಸೇನಾಪತಿಗೆ ಮುಂಜಾಗ್ರತೆಯ ಪತ್ರವನ್ನು ಕಳುಹಿದ್ದನು. ಆದರೆ ಚದುರಂಗದಾಟದಲ್ಲಿ ಮಗ್ನನಾಗಿದ್ದ ಬ್ರಿಟಿಶ್ ಸೇನಾಪತಿ ಆ ಕಾಗದವನ್ನು ಕಿಸೆಗೆ ತುರುಕಿದನು. ಮುಂದೆ ಅನೇಕ ತಾಸುಗಳ ನಂತರ ಅವನದನ್ನು ತೆಗೆದು ಓದಿದಾಗ ಸಮಯ ಮೀರಿಹೋಗಿತ್ತು.

---



# ಅಧ್ಯಾತ್ಮ ಕಾರ್ಯಾಲಯದ ಪ್ರಕಟನೆಗಳು

## ಶ್ರೀ ದಿವಾಕರ ರಂಗನಾಥರ ಅಮೂಲ್ಯ ಗ್ರಂಥಗಳು

| | |
|---|---|
| ೧. ಅಂತರಾತ್ಮನಿಗೆ ( ೪ನೆಯ ಆವೃತ್ತಿ ) | ರೂ. ೧—೦—೦ |
| ೨. ಗೀತೆಯ ಗುಟ್ಟು ( ೪ನೆಯ ಆವೃತ್ತಿ ) | ೨-೧೨—೦ |
| ೩. ಗೀತಾ ನಿತ್ಯಪಾಠ ( ೨ನೆಯ ಆವೃತ್ತಿ ) | ೦—೬—೦ |
| ೪. ಉಪನಿಷತ್ಪ್ರಕಾಶ ( ೫ನೆಯ ಆವೃತ್ತಿ ) | ೩—೮—೦ |
| ೫. ಛಾಂದೋಗ್ಯೋಪನಿಷತ್ತು ( ೧ನೆಯ ಆವೃತ್ತಿ ) | ೩—೮—೦ |
| ೬. ಬೃಹದಾರಣ್ಯಕೋಪನಿಷತ್ತು ( ೧ನೆಯ ಆವೃತ್ತಿ ) | ೩—೮—೦ |
| ೭. ಉಪನಿಷತ್ ರಹಸ್ಯ ( ೨ನೆಯ ಆವೃತ್ತಿ ) | ೩—೮—೦ |
| ೮. ಉಪನಿಷತ್ಕಥಾವಲಿ ( ೩ನೆಯ ಆವೃತ್ತಿ ) | ೧—೬—೦ |
| ೯. ಭಕ್ತಿಸೂತ್ರಗಳು ( ೨ನೆಯ ಆವೃತ್ತಿ ) | ೦-೧೦—೦ |
| ೧೦. ಕರ್ಮಯೋಗ ( ೨ನೆಯ ಆವೃತ್ತಿ ) | ೧—೮—೦ |
| ೧೧. ಹರಿಭಕ್ತಿ ಸುಧೆ ( ೩ನೆಯ ಆವೃತ್ತಿ ) | ೨—೮—೦ |
| ೧೨. ರಾಮಕೃಷ್ಣ ಚರಿತಾಮೃತ ( ೩ನೆಯ ಆವೃತ್ತಿ ) | ೩—೦—೦ |
| ೧೩. ಬಾಪೂ ( ೩ನೆಯ ಆವೃತ್ತಿ ) | ೨—೦—೦ |
| ೧೪. ಗಾಂಧೀಜಿ ( ನಾನು ಕಂಡಂತೆ ) ( ೧ನೆಯ ಆವೃತ್ತಿ ) | ೧—೪—೦ |
| ೧೫. ಸತ್ಯಾಗ್ರಹ ( ೨ನೆಯ ಆವೃತ್ತಿ ) | ೩—೮—೦ |
| ೧೬. ಮಹಾತ್ಮರ ಮನೋರಂಗ ( ೨ನೆಯ ಆವೃತ್ತಿ ) | ೩—೮—೦ |
| ೧೭. ಸೆರೆಯ ಮರೆಯಲ್ಲಿ ( ೨ನೆಯ ಆವೃತ್ತಿ ) | ೨—೮—೦ |
| ೧೮. ವಚನಶಾಸ್ತ್ರ ರಹಸ್ಯ ( ೩ನೆಯ ಆವೃತ್ತಿ ) | ೬—೦—೦ |
| ೧೯. ಮಹಾಯೋಗಿ ( ಮಹರ್ಷಿ ಅರವಿಂದರು ) ( ೧ನೆಯ ಆವೃತ್ತಿ ) | ೨—೮—೦ |
| ೨೦. ಯಾತ್ರಿಕ ( ಮನೋಹರ ಗ್ರಂಥಮಾಲೆಯ ಪ್ರಕಾಶನ ) | ೨—೦—೦ |

ದೊರೆಯುವ ಸ್ಥಳ ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ.



# ಮನುಷ್ಯನೂ ವಜ್ರ ಮಾಡುತ್ತಿದ್ದಾನೆ

ವಜ್ರವು ಈ ವರೆಗೆ ನಿಸರ್ಗದಲ್ಲಿ ಮಾತ್ರ ಸಿಗುತ್ತಿತ್ತು. ಇದ್ದಲಿಯು ಒಂದು ವಿಶಿಷ್ಟ ರೂಪವಾದ ವಜ್ರವನ್ನು ಸೃಷ್ಟಿಸಲು ನಿಸರ್ಗಕ್ಕೆ ಸಾವಿರಗಟ್ಟಳೆ ವರ್ಷಗಳು ಹಿಡಿಯುತ್ತಿದ್ದವು. ಆದರೆ ಇದೀಗ ಮನುಷ್ಯನೇ ಅಚ್ಚ ವಜ್ರಗಳನ್ನು ವೈಜ್ಞಾನಿಕ ಸಾಧನಗಳಿಂದ ನಿರ್ಮಿಸಲು ಪ್ರಾರಂಭಿಸಿದ್ದಾನೆ.

ನಿಸರ್ಗದ ಗುತ್ತಿಗೆಯನ್ನು ಮನುಷ್ಯನು ಕಸಿದುಕೊಂಡ ಈ ಸಮಾಚಾರವನ್ನು ಈಚೆಗೆ ಅಮೇರಿಕದ ಜನರಲ್ ಇಲೆಕ್ಟ್ರಿಕ್ ಕಂಪನಿಯು ಪ್ರಕಟಿಸಿದೆ. ಅದರ ಪ್ರಯೋಗಶಾಲೆಯಲ್ಲಿ ವಿಜ್ಞಾನಿಗಳು ಕೃತಕ ರೀತಿಯಿಂದ ಅಚ್ಚವಜ್ರಗಳನ್ನು ಯಶಸ್ವಿಯಾಗಿ ತಯಾರಿಸಿದ್ದಾರೆ. ಈ ವಜ್ರಗಳನ್ನು ಯಾವ ರೀತಿಯಿಂದ ಪರೀಕ್ಷಿಸಿದರೂ ಅವು ಗಣಿಗಳಲ್ಲಿ ಸಿಗುವ ನೈಸರ್ಗಿಕ ವಜ್ರಗಳಂತೆಯೇ ಇವೆಯೆಂದು ಸಿದ್ಧವಾಗಿದೆ.

ವಜ್ರಗಳನ್ನು ತಯಾರಿಸುವ ಯತ್ನ ತೀರ ಹೊಸದೇನೂ ಅಲ್ಲ. ೭೫ ವರ್ಷಗಳ ಹಿಂದೆ ಸ್ಕಾಟ್ಲಂಡಿನವನಾದ ಜೇಮ್ಸ ಬೆನೆಟಾಯಿನ್ ಹ್ಯಾನೆಯೆಂಬ ೨೫ ವರ್ಷದ ತರುಣ ವಿಜ್ಞಾನಿ ಎಲ್ಲಕ್ಕೂ ಮೊದಲು ವಜ್ರ ನಿರ್ಮಾಣದ ಪ್ರಯೋಗಗಳನ್ನು ಪ್ರಾರಂಭಿಸಿದನು. ಇದ್ದಲಿಗೂ ವಜ್ರಕ್ಕೂ ಗುಣದಲ್ಲಿ ಭೇದವಿಲ್ಲೆಂದು ವಿಜ್ಞಾನಿಗಳಿಗೆ ಬಹಳ ಕಾಲದಿಂದ ಗೊತ್ತಿತ್ತು. ಆದ್ದರಿಂದ ಹ್ಯಾನೆಯು ಬಹಳ ದಾರ್ಢ್ಯವುಳ್ಳ ಕಬ್ಬಿಣದ ನಳಿಗೆಯಲ್ಲಿ ಹೈಡ್ರೊಕಾರ್ಬನವನ್ನು ಬೋನ್ ಆಯಿಲ್ ಮತ್ತು ಲೀಥಿಯಂ ಧಾತುವಿನೊಡನೆ ಹಾಕಿ ಬಾಯಿ ಮುಚ್ಚಿ ಅದನ್ನು ಅತ್ಯಂತ ಉಷ್ಣವಾದ ಕುಲುಮೆಯಲ್ಲಿಟ್ಟು ಕಾಸಿದನು. ಈ ಅಪಾಯಕರ ಪ್ರಯೋಗವನ್ನು ಅವನು ೮೦ ಸಲ ಮರಳಿ ಮರಳಿ ಮಾಡಿದನು. ನಳಿಗೆಗಳು ಅತಿ ಬಲಿಷ್ಠ ಕಬ್ಬಿಣದಿಂದ ತಯಾರಿಸಲ್ಪಟ್ಟಿದ್ದರೂ ಅವು ಆತ್ಯಂತಿಕ ತಾಪವನ್ನು ತಾಳಲಾರದೆ ನಡುವೇ ಒಡೆದು ಹೋಗುತ್ತಿದ್ದವು. ಕೇವಲ ಮೂರು ಸಲ ಅವಶ್ಯಕವಾದ ಉಷ್ಣತಾಮಾನವನ್ನು ತಲಪುವ ವರೆಗೆ ಹ್ಯಾನೆಯ ಪ್ರಯೋಗ ನಳಿಗೆಗಳು ನಾಶವಾಗದೆ ಉಳಿದವು. ಅವುಗಳನ್ನು ತೆರೆದಾಗ ಒಳಗೆ ತಳತಳಿಸುವ ಪದಾರ್ಥವೊಂದು ಕಾಣಿಸಿತು. ಅದು ವಜ್ರವೇ ಎಂದು ಹ್ಯಾನೆ ಹೇಳಿದನು. ಆದರೆ ಇತರ ವಿಜ್ಞಾನಿಗಳು ಇದೇ ರೀತಿಯಾಗಿ ಪ್ರಯೋಗವನ್ನು ಪುನರಾವರ್ತಿಸಿದಾಗ ಅವರಿಗೆ ಏನೂ ಸಾಫಲ್ಯ ದೊರೆಯಲಿಲ್ಲ. ಹೀಗೆ ಹ್ಯಾನೆಯ ಹೇಳಿಕೆ ಸಂಶಯಾತ್ಮಕವಾಗಿಯೇ ಉಳಿಯಿತು.

ಹ್ಯಾನೆಯ ನಂತರ ವಜ್ರ ನಿರ್ಮಾಣದ ಯತ್ನ ಫ್ರಾನ್ಸಿನ ಹೆನ್ರಿ ಮೋಜಾಂ ಎಂಬವನಿಂದ ಆಯಿತು. ಅವನು ಮೊದಲು ನೈಸರ್ಗಿಕ ವಜ್ರಗಳನ್ನೇ ಪರೀಕ್ಷಿಸಿದನು. ಕೆಲ ಉಲ್ಕೆ (ಮೆಟ್ರಾಯ್ಟ) ಗಳಲ್ಲಿ ವಜ್ರದ ಚಿಕ್ಕ ಕಣಗಳಿರುತ್ತವೆಂದು ಅವನು ನಿರ್ಣಯಿಸಿದನು. ಈ ತಿಳಿವಳಿಕೆಯಿಂದ ಪ್ರಯೋಜನ ಹೊಂದಲು ಅವನು ಕಬ್ಬಿಣವನ್ನು ಕರಗಿಸಿ ಅದರಲ್ಲಿ ಕಾರ್ಬನ (ಅಂಗಾರ) ವನ್ನು ಹಾಕಿ ಕಲಕಿ ಆ ದ್ರವವನ್ನು ಒಮ್ಮೆಲೇ ತಣಿಸಿದನು. ಕುದಿಯುವ ಈ

...ಶ್ರಣಕ್ಕೆ ಹೊರಗಿನಿಂದ ಅತಿ ಶೈತ್ಯ ತಗಲಿದಾಗ ಅದು ಗಟ್ಟಿಯಾಗುವುದೆಂದು ಅವನ ಅಂದಾಜಾಗಿತ್ತು. ಈ ಪ್ರಯೋಗದಿಂದ ಅವನಿಗೆ ಸಿಕ್ಕಿದ ಪದಾರ್ಥವನ್ನು ಅವನು ಮೈಕ್ರೊಸ್ಕೋಪಿಕ (ಅತಿ ಸೂಕ್ಷ್ಮ) ವಜ್ರವೆಂದು ಕರೆದನು.

ಆದರೆ ಇಂದಿನ ವಜ್ರನಿರ್ಮಾಣದ ಯಶಸ್ಸಿಗೆ ಬಹಳ ಮಟ್ಟಿಗೆ ನೋಬೆಲ ಬಹುಮಾನ ಪಡೆದ ಇಬ್ಬರು ವಿಜ್ಞಾನಿಗಳು ಭಾಗಿಗಳಾಗಿದ್ದಾರೆ: ಒಬ್ಬರು, ಅಮೇರಿಕದ ಹಾವರ್ಡ ವಿಶ್ವವಿದ್ಯಾಲಯದ ವಿಜ್ಞಾನಿ ಪರ್ಸಿ ವಿಲಿಯಂಸ್ ಬ್ರಿಜಮನ್; ಇನ್ನೊಬ್ಬರು ಭಾರತದ ಚಂದ್ರಶೇಖರ ವೆಂಕಟ ರಾಮನ್ನರು. ಭಾರತದ ರಾಮನ್ನರು ಈಗ ಅನೇಕ ವರ್ಷಗಳಿಂದ ರತ್ನಗಳ ಸ್ವರೂಪವನ್ನು ಕುರಿತು ನಿರಂತರ ಸಂಶೋಧನೆಗಳನ್ನು ನಡೆಸಿ ಅವುಗಳ ರಚನೆಯ ಮೇಲೆ ಬಹಳ ಬೆಳಕು ಚೆಲ್ಲಿರುವುದರಿಂದ ವಜ್ರಗಳನ್ನು ಪ್ರಯೋಗಶಾಲೆಯಲ್ಲಿ ತಯಾರಿಸಲು ತುಂಬ ಸಹಾಯವಾಗಿದೆ.

ವಜ್ರವನ್ನು ನಿಸರ್ಗವು ನಿರ್ಮಿಸುವ ರೀತಿಯನ್ನು ನೋಡಿದರೆ ಅದು ಆತ್ಯಂತಿಕ ಉಷ್ಣತೆ ಮತ್ತು ಆತ್ಯಂತಿಕ ಒತ್ತಡಗಳ ಸಹಾಯದಿಂದ ಅಸ್ತಿತ್ವದಲ್ಲಿ ಬರುವುದೆಂದು ತಿಳಿಯುತ್ತದೆ. ಬ್ರಿಜಮನ್ನರ ಶೋಧಗಳು ಅತಿ ಕಡಿಮೆ ಕ್ಷೇತ್ರದಲ್ಲಿ ಅತಿಶಯ ಭಾರದ ಒತ್ತಡವನ್ನು ಕೇಂದ್ರೀಕರಿಸುವ ಕೆಲಸ ಸಾಧಿಸಿದವು.

ಬ್ರಿಜಮನ್ನರ ಪ್ರಯೋಗಗಳು ಯಾವುದೇ ವಿಶಿಷ್ಟ ಉದ್ದೇಶಕ್ಕಾಗಿದ್ದಿಲ್ಲ. ಅವರು, ಬೇರೆ ಬೇರೆ ಪದಾರ್ಥಗಳು ಯಾವ ಯಾವ ಪರಿಸ್ಥಿತಿಯಲ್ಲಿ ನಿಸರ್ಗದಲ್ಲಿ ನಿರ್ಮಾಣಹೊಂದುವವೆಂಬದನ್ನು ಕಂಡುಹಿಡಿಯಲು ಹೊರಟಿದ್ದರು.

ಒತ್ತಡದ ಪರಿಣಾಮಗಳನ್ನು ಅಭ್ಯಸಿಸುತ್ತಿದ್ದಾಗ ಅವರಿಗೆ ಸಹಜವಾಗಿ ವಜ್ರದ ಉತ್ಪತ್ತಿಯ ಕಾರಣಗಳ ಕಡೆಗೂ ಕುತೂಹಲ ಹೊರಳಿತು. ಗ್ರಾಫೈಟಿನಲ್ಲಿ ಬೆರೆತಿರುವ ಕಾರ್ಬನದ ಮೇಲೆ ಅತಿಶಯ ಭಾರದ ಒತ್ತಡ ಕೊಟ್ಟರೆ ಅದು ವಜ್ರವಾಗಿ ರೂಪಾಂತರ ಹೊಂದಬಹುದೆ? ಎಂಬ ಪ್ರಶ್ನೆ ಸುಳಿಯಿತು. ಜನರಲ್ ಇಲೆಕ್ಟ್ರಿಕ್ ಕಂಪನಿಯ ಹಾಗು ನಾರ್ಟನದ ಹಣದ ನೆರವಿನಿಂದ ಅವರು ಗ್ರಾಫೈಟಿನ ಮೇಲೆ ಪ್ರತಿ ಚೌರಸ ಇಂಚು ಕ್ಷೇತ್ರದಲ್ಲಿ ೪,೫೦,೦೦೦ ಪೌಂಡ್ ಭಾರದ ಒತ್ತಡವೀಯುವ ಯಂತ್ರವನ್ನೂ ಅದಕ್ಕೆ ೫,೦೦೦ ಡಿಗ್ರಿ ಫೆರನ್ಹೈಟ ಉಷ್ಣತೆಯನ್ನು ಕೊಡುವ ವ್ಯವಸ್ಥೆಯನ್ನೂ ಮಾಡಿದರು. ಆದರೆ ವಜ್ರನಿರ್ಮಾಣದಲ್ಲಿ ಅವರಿಗೆ ವಿಶೇಷ ಆಸ್ಥೆ ಇರಲಿಲ್ಲ. ಆದ್ದರಿಂದ ಅವರು ಖನಿಜವು ವಜ್ರವಾಗಿ ರೂಪಾಂತರ ಹೊಂದಬೇಕಾದರೆ ಎಷ್ಟು ಭಾರ ಹಾಗು ಎಷ್ಟು ಕಾವು ಬೇಕಾದೀತೆಂಬದನ್ನು ನಿರ್ಧರಿಸುವ ತೊಂದರೆಯನ್ನು ತೆಗೆದುಕೊಳ್ಳಲಿಲ್ಲ. ಆದರೆ ಅವರ ಪ್ರಯೋಗಗಳ ಫಲವಾಗಿ ವಜ್ರನಿರ್ಮಾಣಕ್ಕೆ ದಾರಿಯುಂಟಾಯಿತು.

ಜನರಲ್ ಇಲೆಕ್ಟ್ರಿಕದವರಿಗೆ ವಜ್ರನಿರ್ಮಾಣದಲ್ಲೇ ಆಸಕ್ತಿಯಿತ್ತು. ಅವರು ೧೯೪೦ ರಿಂದಲೇ ಇದಕ್ಕಾಗಿ ಕಾರ್ಯಾರಂಭ ಮಾಡಿದ್ದರು. ವಜ್ರನಿರ್ಮಾಣ ಸಂಶೋಧನೆಗಾಗಿಯೆ ಅವರು ನಾಲ್ಸ ಎಂಬಲ್ಲಿ ಒಂದು ಪ್ರಯೋಗಶಾಲೆ ಸ್ಥಾಪಿಸಿ ಆಂಥನಿ ನೆರಾಡ ಎಂಬವರ ನೇತೃತ್ವದಲ್ಲಿ ಪ್ರಯೋಗ ಮಾಡತೊಡಗಿದರು. ಡಾ. ಗೀ ಸೂಟ್ಸರೆಂಬ ವಿಜ್ಞಾನಿಗಳು ಅದರ ಡೈರೆಕ್ಟರರಾಗಿದ್ದರು. ಅಸಂಭವವನ್ನು ಸಾಧಿಸುವ ಸಾಹಸಕ್ಕೆ ತಾವು ಕೈಹಾಕಿರುವುದಾಗಿ ಸೂಟ್ಸರಿಗೆ ಗೊತ್ತಿತ್ತು. ಆದರೆ ತಮಗೆ ವಜ್ರ ತಯಾರಿಸುವದರಲ್ಲಿ ಯಶ ಸಿಗದಿದ್ದರೂ ತಮ್ಮ ಪ್ರಯೋಗಗಳ ಫಲಿತಾಂಶಗಳಿಗೆ ವೈಜ್ಞಾನಿಕ ದೃಷ್ಟಿಯಲ್ಲಿ ತುಂಬ ಮಹತ್ವ ದೊರೆಯದಿರದೆಂಬ ಭರವಸೆಯಿಂದ ಅವರು ಕೆಲಸ ಮಾಡತೊಡಗಿದರು.

ಕಂಪನಿಯು ಅವರಿಗೆ ೨೦ ಚದರ ಇಂಚು ಕ್ಷೇತ್ರದಲ್ಲಿ ಒಂದು ಸಾವಿರ ಟನ್ ಭಾರವನ್ನು ಕೇಂದ್ರಿಸುವ ಯಂತ್ರವೊಂದನ್ನು ಒದಗಿಸಿತು. ಒತ್ತಡವನ್ನು ಇನ್ನೂ ತೀವ್ರಗೊಳಿಸುವಂತೆ ಅಂದರೆ ಅದು ಕಡಿಮೆ ಕ್ಷೇತ್ರದ ಮೇಲೆ ಬೀಳುವಂತೆ ಬದಲಾವಣೆ ಮಾಡಿಕೊಂಡರು. ಗ್ರಾಫೈಟಿನ ಮೇಲೆ ಬ್ರಿಜಮನ್ನರು ಮಾಡಿದ ಪ್ರಯೋಗಗಳ ಅನುಭವದಿಂದ ಲಾಭಪಡೆದು ಅವರು ಈ ಪ್ರೆಸ್

ಯಂತ್ರದ ಒತ್ತಡವೆಲ್ಲ ಒಂದು ಅಗಲಕಿರಿದಾದ ಪಿಸ್ಟನ್ ಮೇಲೆ ಬೀಳುವಂತೆ ಕೇಂದ್ರಿಸಿದರು. ಈ ಪಿಸ್ಟನದ ಇಡೀ ಒತ್ತಡವು ಒಂದೂವರೆ ಇಂಚು ವ್ಯಾಸದ ಕೆಲವೇ ಇಂಚುದ್ದದ ನಳಿಗೆಯ ಮೇಲೆ ಬೀಳುವಂತೆ ಮಾಡಲಾಯಿತು. ಈ ನಳಿಗೆಯನ್ನು ಬಲಿಷ್ಠವಾದ ಉಕ್ಕಿನಿಂದ ನಿರ್ಮಿಸಲಾಗಿತ್ತು.

ಜನರಲ್ ಇಲೆಕ್ಟ್ರಿಕದವರು ವಜ್ರವನ್ನು ತಯಾರಿಸಿದ ಕ್ರಮವನ್ನು ವಿವರವಾಗಿ ಪ್ರಕಟಿಸಿಲ್ಲ. ಅದು ವ್ಯವಹಾರದ ಗುಟ್ಟಾಗಿದೆ. ಆದರೆ ಕೆಲ ವಿಷಯಗಳು ಹೊರಬಿದ್ದಿವೆ. ಅವರ ಪ್ರಯೋಗ ಶಾಲೆಯಲ್ಲಿ ವಜ್ರ ತಯಾರಾಗುವ ಅತಿ ಚಿಕ್ಕಕ್ಷೇತ್ರದಲ್ಲಿ ೫,೦೦೦ ಡಿಗ್ರಿ ಉಷ್ಣತಾಮಾನವನ್ನು ಬಹಳ ಹೊತ್ತಿನವರೆಗೆ ಸಾಧಿಸುವ ಕುಲುಮೆಯೊಂದಿದೆ. ಪ್ರತಿ ಚದರ ಇಂಚಿಗೆ ೪,೫೦,೦೦೦ ಪೌಂಡ ಭಾರದ ಒತ್ತಡ ಬಿದ್ದರೆ ಗ್ರಾಫೈಟು ವಜ್ರವಾಗಿ ರೂಪಾಂತರ ಹೊಂದಬಲ್ಲದೆಂದು ಹಿಂದಿನ ವಿಜ್ಞಾನಿಗಳ ಶೋಧಗಳಿಂದ ವ್ಯಕ್ತವಾಗಿತ್ತು. ಆದರೆ ಎಷ್ಟು ಭಾರವನ್ನು ಎಷ್ಟು ಕಾವಿನಲ್ಲಿ ಎಷ್ಟು ಹೊತ್ತಿನ ವರೆಗೆ ಕೊಡುತ್ತಿರಬೇಕೆಂಬುದು ಇನ್ನೂ ಖಂಡಿತವಾಗಿದ್ದಿಲ್ಲ. ಜನರಲ್ ಇಲೆಕ್ಟ್ರಿಕದವರ ಸಂಶೋಧನೆ ಇದನ್ನು ನಿರ್ಧರಿಸುವುದಕ್ಕಾಗಿತ್ತು.

ಒಂದು ದಿನ ಪ್ರಯೋಗ ಶಾಲೆಯ ೪೬ ವಯಸ್ಸಿನ ವಿಜ್ಞಾನಿ ಡಾ. ಹರ್ಬರ್ಟ ಸ್ಟ್ರಾಂಗರು ಭಾರದಾಯಕ ಯಂತ್ರವನ್ನು ತೆರೆದಾಗ ಒಳಗಿದ್ದ ಪದಾರ್ಥ ಹೆಪ್ಪುಗಟ್ಟಿದ್ದು ಅವರಿಗೆ ಕಾಣಿಸಿತು. ಅದನ್ನು ಹೊರತೆಗೆದು ಪಾಲೀಶ ಮಾಡಲಾಗಿ ಅದು ತಳತಳಿಸತೊಡಗಿತು. ಅದನ್ನು ನಾನಾ ವಿಧವಾಗಿ ಪರೀಕ್ಷಿಸಿದ್ದಾಯಿತು. ಎಲ್ಲದರಲ್ಲಿಯೂ ಅದು ಗಣಿಯಿಂದ ತೆಗೆದ ವಜ್ರದಂತೆಯೇ ಇತ್ತು.

ಜನರಲ್ ಇಲೆಕ್ಟ್ರಿಕದವರು ತಯಾರಿಸಿದ ಎಲ್ಲಕ್ಕೂ ದೊಡ್ಡ ವಜ್ರವು ೧।೧೬ ಇಂಚಿನಷ್ಟು ಇದೆ. ಉಳಿದದ್ದೆಲ್ಲ ವಜ್ರದ ಧೂಳಿಯೆನ್ನಬಹುದು. ಆದರೆ ವಜ್ರಧೂಳಿಗೂ ಔದ್ಯೋಗಿಕ ದೃಷ್ಟಿಯಲ್ಲಿ ಬಹಳ ಮಹತ್ವವಿದೆ. ಕತ್ತರಿಸುವದಕ್ಕಾಗಿ, ಲೇಥ ಮತ್ತು ಕೊರೆಯುವುದಕ್ಕಾಗಿ ಇರುವ ಯಂತ್ರಗಳಲ್ಲಿ ಈ ವಜ್ರಕಣಗಳ ಉಪಯೋಗವಾಗುತ್ತದೆ. ಈ ಕಣಗಳಿಗೆ ಪೌಂಡಿಗೆ ೭,೦೦೦ ಡಾಲರ ವರೆಗೂ ಬೆಲೆಯಿದ್ದು, ಪ್ರತಿ ವರ್ಷ ಹತ್ತು ಕೋಟಿ ರೂಪಾಯಿಗಿಂತಲೂ ಹೆಚ್ಚು ಬೆಲೆಯ ವಜ್ರಕಣಗಳು ಅಮೇರಿಕದಲ್ಲಿ ಖರ್ಚಾಗುತ್ತವೆ.

ಮಾನವನಿರ್ಮಿತ ವಜ್ರದ ಸಿದ್ಧಿಯನ್ನು ಕಳೆದ ಫೆಬ್ರುವರಿಯಲ್ಲಿ ಜನರಲ್ ಇಲೆಕ್ಟ್ರಿಕದವರು ಬಹಿರಂಗಪಡಿಸಿದರು. ಆದರೆ ಕಾರ್ಬಾರ್ನ ಸಂಸ್ಥೆಯ ವಿಜ್ಞಾನಿಗಳು ತಾವು ೧೯೫೩ರಲ್ಲೇ ವಜ್ರ ತಯಾರಿಸಿದ್ದಾಗಿ ಹೇಳುತ್ತಾರೆ. ತಾವು ತಯಾರಿಸಿದ ಈ ವಜ್ರಗಳನ್ನು ತಾವಷ್ಟೇ ಪರೀಕ್ಷಿಸಿದ್ದಲ್ಲದೆ ಪ್ರಸಿದ್ಧ ಪಾಲೊವಾರ ಸಂಸ್ಥೆಯ ಡಾ. ಎಚ್. ಎಫ್. ಮಾರ್ಕರ ಕಡೆಗೂ ಪರೀಕ್ಷೆ ಮಾಡಿಸಿದ್ದರಲ್ಲಿ ಅದು ನೈಸರ್ಗಿಕ ವಜ್ರದ ಎಲ್ಲ ಗುಣಗಳಿಗೂ ಸರಿದೂಗುವಂತಿತ್ತೆಂದು ಕಾರ್ಬಾರ್ನದವರ ಹೇಳಿಕೆ.

ಕಾರ್ಬಾರ್ನ ವಜ್ರಸಿದ್ಧಿಯ ಪೂರ್ಣ ಯಶಸ್ಸು ಸ್ವಿಸ್ ವೈಜ್ಞಾನಿಕರಾದ ಡಾ. ಲೀ ಟೋಮಾರ್ಕಿನ್ ಮತ್ತು ಮೋರಿಯೋ ವಿಲೇಲಾ ಇವರಿಗೆ ಸಲ್ಲಬೇಕು. ವಿಲೇಲಾ ಅವರು ತಮ್ಮ ವಿರಾಮವೇಳೆಯಲ್ಲಿ ವಜ್ರನಿರ್ಮಾಣಕ್ಕೆ ಬೇಕಾದ ಉಷ್ಣತೆ ಮತ್ತು ಒತ್ತಡವೀಯಬಲ್ಲ ಯಂತ್ರ ತಯಾರಿಸಿದರು. ಈ ಯಂತ್ರದ ಸುದ್ದಿ ಕೇಳಿದ ಟೋಮಾರ್ಕಿನ್ನರು ತಮಗೆ ಎಂದಿನಿಂದಲೂ ಆಸ್ಥೆಯಿದ್ದ ವಜ್ರನಿರ್ಮಾಣಕ್ಕೆ ಈ ಯಂತ್ರ ಪ್ರಯೋಜನ ಬಿದ್ದೀತೆಂದುಕೊಂಡು ಏಳು ಲಕ್ಷ ರೂಪಾಯಿ ಸಂಗ್ರಹಿಸಿ "ವಿಟ್ರನ್ ಸಂಶೋಧನ ಸಂಸ್ಥೆ" ಯನ್ನು ತೆಗೆದರು. ಈ ಸಂಸ್ಥೆಯು ರಾಕ್ಲಂಡ್ ಪ್ರದೇಶದಲ್ಲಿ ಕಾರ್ಬಾರ್ನ ಪ್ರಯೋಗ ಶಾಲೆಯನ್ನು ತೆರೆಯಿತು.

ತಮ್ಮ ಯಶಸ್ಸನ್ನು ಅವರು ಪ್ರಕಟಿಸದಿರುವ ಒಂದು ಕಾರಣವೆಂದರೆ, ಅವರ ಪ್ರಯೋಗನಳಿಗೆಯಲ್ಲಿ ದೊಡ್ಡ ಆಕಾರದ ವಜ್ರವೊಂದು ಸಿದ್ಧವಾಗಲಿಲ್ಲ. ಅವು ವಜ್ರದ ಕಣಗಳು ಮಾತ್ರವಾಗಿದ್ದವು. ದ್ರವದ ಎಲ್ಲ ಭಾಗವೂ ಒಂದೇ ಕಡೆ ಏಕತ್ರಿತವಾಗಿ ಗಟ್ಟಿಯಾಗುವಂತೆ ಒತ್ತಡವಿತ್ತರೆ ದೊಡ್ಡ ವಜ್ರ ತಯಾರಾಗುವುದು. ಆ ಪ್ರಯತ್ನದಲ್ಲಿ ಈಗ ಕಾರ್ಬಾರ್ನ ಸಂಸ್ಥೆ ನಿರತವಾಗಿದೆ.

# ಅವರು ನಿಜ ನಾಗರನ್ನೇ ಪೂಜಿಸುತ್ತಾರೆ

"ಕಲ್ಲ ನಾಗರ ಕಂಡರೆ
ಹಾಲನೆರೆಯೆಂಬರು
ನಿಜ ನಾಗರ ಕಂಡರೆ
ಕೊಲ್ಲುಕೊಲ್ಲೆಂಬರು"

ಎಂಬ ಬಸವಣ್ಣನವರ ಟೀಕೆಗೆ ಸಾತಾರಾ ಜಿಲ್ಹೆಯ ಶಿರಾಳಾ ಗ್ರಾಮದ ಜನರು ಮಾತ್ರ "ಇದು ನಮಗಲ್ಲ" ಎನ್ನ ಬಹುದಾಗಿದೆ. ಯಾಕಂದರೆ ಅವರು ನಾಗ ಪಂಚಮಿಯ ದಿನ ನಿಜ ನಾಗರನ್ನೇ ಪೂಜಿಸುತ್ತಾರೆ.

ನಾಗಪಂಚಮಿಗೆ ಇನ್ನೂ ಕೆಲದಿನಗಳಿರುವಾಗ ಈ ಹಳ್ಳಿಯವರು ಸಮೀಪದ ಅಡವಿಹೊಲಗಳಲ್ಲಿರುವ ಸರ್ಪಗಳನ್ನು ಹುಡುಕಿ ಹಿಡಿದು ತರುತ್ತಾರೆ. ಸರ್ಪ ಅತಿ ಪವಿತ್ರವಾದುದು ; ಆದ್ದರಿಂದ ಹಿಡಿಯುವಾಗ ಅದಕ್ಕೆ ತುಸುವಾದರೂ ನೋವಾಗದಂತೆ ಈ ಜನರು ಜಾಗ್ರತೆ ವಹಿಸುತ್ತಾರೆ.

ಪ್ರತಿವರ್ಷ ಶಿರಾಳದ ಜನರು ನೂರಾರು ಸರ್ಪಗಳನ್ನು ಹಿಡಿದು ಮಣ್ಣಿನ ಗಡಿಗೆಗಳಲ್ಲಿ ತುಂಬಿಡುತ್ತಾರೆ. ಅವರ ಸ್ತ್ರೀಯರು ಈ ಸಜೀವ ನಾಗಗಳನ್ನು ಪೂಜಿಸಿ ಅವಕ್ಕೆ ಹಾಲು, ಕುಂಕುಮಗಳನ್ನು ಅರ್ಪಿಸುತ್ತಾರೆ.

ನಾಗದೇವನಿಗೆ ಘಟಬಂಧನದಲ್ಲಿ ಪೂಜೆ ಆಗಬಾರದು. ಅದಕ್ಕೆ ಅವನನ್ನು ಹೊರಬಿಡುವರು. ಆದರೆ ಪೂಜೆ ಮುಗಿದ ಬಳಿಕ ತಿರುಗಿ ಇವನ್ನು ಗಡಿಗೆಗಳಲ್ಲಿ ತುಂಬುವದೇನೂ ಸುಲಭ ಕೆಲಸ



ವಲ್ಲ; ಅಪಾಯವೂ ಕಡಿಮೆಯಲ್ಲ. ಸರ್ಪವನ್ನು ಬಾಲದಿಂದೆತ್ತಿ ದೂರ ಹಿಡಿದು ಅದರ ತಲೆಯನ್ನು ಗಡಿಗೆಯಲ್ಲಿ ತುಂಬಲು ಹಳ್ಳಿಗ ಪ್ರಯತ್ನಿಸುತ್ತಾನೆ. ಸರ್ಪ ಮತ್ತೆ ಗಡಿಗೆಯಲ್ಲಿ ಸುರುಳಿ ಸುತ್ತಿ ಬಿದ್ದುಕೊಳ್ಳುವಂತೆ ಮಾಡಲು ಬಹಳಷ್ಟು ವೇಳೆ ಹಿಡಿಯುತ್ತದೆ.

ಈಗ ಸುಮಾರು ೪೦೦ ವರ್ಷಗಳಿಂದಲೂ ಶಿರಾಳದ ಹಳ್ಳಿಗರು ಸರ್ಪಗಳನ್ನು ಹಿಡಿದು ನಾಗಪಂಚಮಿಯ ದಿನ ಈ ರೀತಿ ಪೂಜಿಸುತ್ತ ಬಂದಿದ್ದಾರೆ. ನಾಗಪಂಚಮಿಯ ದಿನ ಸರ್ಪಗಳು ಕಚ್ಚುವದಿಲ್ಲ ಎಂಬ ದೃಢವಿಶ್ವಾಸದಿಂದ ಚಿಕ್ಕಮಕ್ಕಳು ಕೂಡ ಹೂಮಾಲೆಗಳಂತೆ ಈ ನಾಗಗಳನ್ನು ಕೊರಳಿಗೆ ಸುತ್ತಿಕೊಳ್ಳುತ್ತಾರೆ. ಸರ್ಪಗಳ ಅಂಜಿಕೆ ಅವರಿಗೆ ಎಳ್ಳಷ್ಟೂ ಇರು ದಿಲ್ಲ.

ಸಂಜೆ ಸರ್ಪಗಳಿರುವ ಗಡಿಗೆಗಳ ಮೆರವಣಿ ಹೊರಡುತ್ತದೆ. ಮೆರವಣಿಗೆಯ ಮುಂಭಾಗದ ಒಂದು ಎತ್ತಿನ ಗಾಡಿಯ ಮೇಲೆ ಸರ್ಪವೊಂ ಹೆಡೆಯೆತ್ತಿ ಭುಸುಗುಡುತ್ತಿರುತ್ತದೆ. ಮೆರವಣಿ ಬಯಲಿಗೆ ಬಂದ ಬಳಿಕ ಅಲ್ಲಿ ಎಲ್ಲ ಸರ್ಪಗ ಪ್ರದರ್ಶನದ ಏರ್ಪಾಡಿದೆ.

ನಾಗಪಂಚಮಿಯ ಮರುದಿನ ಸರ್ಪಗಳನ್ನ ಅವುಗಳನ್ನು ಹಿಡಿದ ಸ್ಥಳದಲ್ಲಿ ಬಿಟ್ಟುಬರುತ್ತಾರ

ಶಿರಾಳದಲ್ಲಿ ಹಾವಾಡಿಗರಿಗೆ ಉಪವಾಸವೆ ಅಲ್ಲಿ ಅವರ ಹಾವುಗಳನ್ನಾಡಿಸಲು ಜನರು ಅ ಕಾಶ ಕೊಡುವದಿಲ್ಲ.



## ಅಸ್ತಿತ್ವ ಮತ್ತು ಗಮನ

"ನನ್ನ ಮನೆ ನನಗೆ ಹೇಳುತ್ತದೆ: ನನ್ನ ಬಿಟ್ಟು ಹೋಗಬೇಡ. ನಿನ್ನ ಭೂತಕಾಲ ಇಲ್ಲೇ ಇರುವುದಲ್ಲವೆ?"

ಮತ್ತೆ ನನ್ನ ಹಾದಿ ಹೇಳುತ್ತದೆ: "ನಡೆ, ನನ್ನೊಡನೆ ಬಾ. ನಾನು ನಿನ್ನ ಭವಿಷ್ಯತ್ತಾಗಿದ್ದೇನೆ ತಾನೆ?"

ನಾನು ನನ್ನ ಮನೆ ಮತ್ತು ಹಾದಿ ಎರಡಕ್ಕೂ ಹೇಳುವೆ: "ನನಗೆ ಭೂತಕಾಲವೂ ಇಲ್ಲ. ಭವಿಷ್ಯತ್ತೂ ಇಲ್ಲ. ನಾನು ಇಲ್ಲಿ ಉಳಿದರೂ ನನ್ನ ಇರುವಿಕೆಯಲ್ಲಿ ಹೋಗುವುದೂ ಸೇರಿರುತ್ತದೆ. ನಾನು ನಡೆಯತೊಡಗಿದರೆ ನಾನಿರುವುದೂ ಸಾಗುವುದರಲ್ಲಿ ಅಡಕವಾಗುತ್ತದೆ. ಬದಲಾವಣೆ ಮಾಡುವ ಶಕ್ತಿ ಪ್ರೇಮ ಮತ್ತು ಮರಣದಲ್ಲಿ ಮಾತ್ರ ಇದೆ."

—"ಮೃಗಜಲಕೇ ಮೋತಿ"ಯಿಂದ

## ತಿದ್ದುಪಡಿ

ಈ ಸಂಚಿಕೆಯ ನಾಲ್ಕು ಪುಟಗಳಲ್ಲಿ ಪತ್ರಿಕೆಯ ಹೆಸರು "ಪರಾಗ"ವೆಂದು ಮುದ್ರಿತವಾಗಿದೆ. ಇದು ನಾವು ಉದ್ದೇಶಿಸಿದ ಮೂಲ ಹೆಸರು. ಅನಂತರ ಗೆಳೆಯರ ಸೂಚನೆಯಂತೆ "ಕಸ್ತೂರಿ"ಯೆಂಬ ಹೆಸರು ಸ್ವೀಕರಿಸಲಾಯಿತು. ಮುದ್ರಣದಲ್ಲಿ ಈ ಹೆಸರು ಉಳಿದುಹೋದದ್ದನ್ನು ನಾವು ಬಲ್ಲೆವು.

## ಪಂಪಾ–ಯಾತ್ರೆ

•

ಹಂಪೆಯ ಯಾತ್ರೆಯಲ್ಲಿ ದಾರಿಯುದ್ದಕ್ಕೂ ಯಜಮಾನರೇ ನಮಗೆ ಅನ್ನದಾತರು. ಪರಸ್ಥಳಗಳಲ್ಲಿ ಅವರು ಇತರರ ಕೈಯಲ್ಲಿ ಊಟಮಾಡುತ್ತಿರಲಿಲ್ಲ. ಅವರೇನೊ ಶುಚಿಯಾಗಿ ರುಚಿಯಾಗಿ ಎಲ್ಲರಿಗೂ ಅಡಿಗೆ ಮಾಡಿ ಹಾಕುತ್ತಿದ್ದರು. ಆದರೆ ಎಲ್ಲ ಕೆಲಸಗಳನ್ನೂ ಅವರಿಂದಲೇ ಮಾಡಿಸುವುದು ಧರ್ಮವೇ ? ಮರ್ಯಾದೆಯೇ ? ಎಂದುಕೊಂಡವರು ಚಿಲ್ಲರೆ ಕೆಲಸಗಳೊಂದೊಂದನ್ನೂ ನಾವು ಒಬ್ಬೊಬ್ಬರು ಮಾಡುತ್ತಿದ್ದೆವು.

ಅಡಿಗೆ ಊಟಗಳು ಮುಗಿಯುವ ಹೊತ್ತಿಗೆ ಹನ್ನೊಂದು ಗಂಟೆಯಾಯಿತು. ಬೇಸಿಗೆಯ ಬಿಸಿಲು, ಅದರಲ್ಲಿಯೂ ಹಂಪೆಯಲ್ಲಿ. ಆ ಮಟಮಟ ಮಧ್ಯಾಹ್ನದಲ್ಲಿ. ಹೊರಡುವ ಮುಂದೆಯೇ ಮುಸುರೆಯ ಪಾತ್ರೆಗಳನ್ನೆಲ್ಲ ತೊಳೆದು ಸಾಯಂಕಾಲ ಬಂಗಲೆಗೆ ಹೊರಡುವುದಕ್ಕೆ ಎಲ್ಲವನ್ನೂ ಅಣಿಮಾಡಿಟ್ಟು ಹೋಗಬೇಕೆಂದು ಯಜಮಾನರು ಸ್ವಲ್ಪ ಒತ್ತಿಯೇ ಹೇಳಿದರು. ಮುಸುರೆಯ ಪಾತ್ರೆಗಳಿಗೆ ಏನು ಮದುವೆ, ಏನು ಮಡಿ ಹೇಳಿ. ಆಮೇಲೆ ತೊಳೆದುಕೊಂಡರೆ ಆಗುವುದಿಲ್ಲವೆ? ನೀವೂ ನಾವೂ ಆದರೆ ಆಗುತ್ತೆ. ಯಜಮಾನರಿಗೆ ಹಾಗಲ್ಲ.

ಆ ಕೆಲಸವನ್ನು ಮಾಡಿ ಮುಗಿಸಲು ಅಂಗಳದ ಕಾಲುವೆಗೆ ಹೋದೆವು. ಅವರೂ ನಮ್ಮೆಲ್ಲರ ಅಸಮಾಧಾನವನ್ನು ಕಂಡಿದ್ದರು. ಆಗ ಒಂದು ಚಮತ್ಕಾರವನ್ನು ಮಾಡಿ ನಮ್ಮನ್ನು ಒಲಿಸಿಕೊಂಡರು. ಲಂಚ ಸ್ವಾಮಿ, ಲಂಚ, ಅಲ್ಲದೆ ಮತ್ತೇನು? ಸ್ಟೌ ಹೊತ್ತಿಸಿದವರು ಒಂದು ಕೊಳಗ ನೀರು ಮರಳಿಸಿ "ಮೂರ್ತಿ, ಇಲ್ಲಿ ಬಾರಯ್ಯ ಸ್ವಲ್ಪ'' ಎಂದರು. ಮೂರ್ತಿಗಳು ಒಳಗೆ ಹೋಗಲು, "ಆ (ಕಾಫಿ) ಪುಡಿ ಇನ್ನೆಷ್ಟು ಇದೆಯೋ, ಹಾಕಿ ಮುಗಿಸಿಬಿಡು. ಆ ಅನಿಷ್ಟವನ್ನು ಇನ್ನೆಲ್ಲಿ ಹಿಂದಕ್ಕೆ ಹೊತ್ತುಕೊಂಡು ಹೋಗುವುದು" ಎಂದರು. ಬಾವಿಯ ಹತ್ತಿರವಿದ್ದ ನನಗೆ ಕಿವಿ ನೆಟ್ಟಗಾಯಿತು. ನಾವು ಪಾತ್ರೆಗಳನ್ನು ತಿಕ್ಕಿ ಸಂಭ್ರಮದಿಂದ ಒಳಕ್ಕೆ ಎತ್ತಿಕೊಂಡು ಹೋದೆವು. ಆ ಒಳಗಾಗಿ ಕಾಫೀ ಸಿದ್ಧವಾಗಿತ್ತು. ಉದ್ದಕ್ಕೆ ಹೋಗಿ ಯಜಮಾನರಿಗೆ ನಮಸ್ಕಾರ ಮಾಡೋಣವೇ ಎಂಬಷ್ಟು ಭಕ್ತಿ ಬಂದು, ಅವರಲ್ಲಿಯೂ ದೇವರಲ್ಲಿಯೂ ನಮ್ಮ ನಂಬಿಕೆ ಬಲವಾಗಿ ಹುರಿಗೊಂಡಿತು.

ಆಗ ತಾನೇ 'ಪೃಷ್ಠೋಷ್ಮವಾಗಿ' ಊಟಮಾಡಿ ಹೊಟ್ಟೆಗಳು ಪೀಪಾಯಿಗಳಂತೆ ಆಗಿದ್ದುವು. ಆ ಬಿಸಿಲಿನಲ್ಲಿ ಅದೇ ಕ್ಷಣವೇ ಒಂದು ಕೊಳಗ ಬಿಸಿಬಿಸಿ ಕಾಫೀ ಕುಡಿಯುವುದು ಎಂದರೇನು? ಎಂದು ನೀವು ನಗಬಹುದು. ಆದರೂ ಒಬ್ಬೊಬ್ಬರಾಗಿ ನಾವು ಲೋಟಗಳಲ್ಲಿ ಅಮೃತವನ್ನು ತುಂಬಿದೆವು. ತುಂಬಿ, ಪಾನಮಾಡಿ ಆತ್ಮಶಾಂತಿಯನ್ನು ಮಾಡಿಕೊಂಡೆವು.

"ಇನ್ನು ಹೊರಡಬಹುದು ತಾನೇಪ್ಪ" ಎಂದರು ಯಜಮಾನರು. ಓಹೋ ಎಂದು ಹೊರಟೆವು.

ವಿರೂಪಾಕ್ಷ ದೇವಸ್ಥಾನದ ಮುಂದೆ ಸುಮಾರು ಇನ್ನೂರು ಮುನ್ನೂರು ಗಜಗಳ ದೂರ ಅಗಲವಾದ ತೇರುಬೀದಿ ; ಮೈಸೂರು ನೂರಡಿ ರಸ್ತೆಗಿಂತಲೂ ವಿಶಾಲವಾಗಿಯೂ ಜನಪೂರ್ಣವಾಗಿಯೂ ಪೂರ್ವದಲ್ಲಿ ಅದು ಇದ್ದಿರಬೇಕು. ಇಕ್ಕಡೆಗಳಲ್ಲಿಯೂ ಕಲ್ಲು ಮಂಟಪಗಳು. ರಸ್ತೆಯ ಕೊನೆಯಲ್ಲಿ ನಮ್ಮ ದಾರಿಯ ಎಡಗಡೆ ಬೃಹದಾಕಾರದ ಕಲ್ಲುಬಸವನ ವಿಗ್ರಹ. ಆಗಿನ ಕಾಲದವರಿಗೆ ಮಾಡುವುದಕ್ಕೆ ಬೇರೆ ಏನೂ ಕೆಲಸವಿರಲಿಲ್ಲವೆಂದು ತೋರುತ್ತದೆ; ಎಲ್ಲಿ ದೊಡ್ಡ ಬಂಡೆಯೊಂದು ಸಿಕ್ಕಿದರೆ ಅಲ್ಲಿ ಬಸವ, ಗಣೇಶ, ಹನುಮಂತ, ನರಸಿಂಹ ಈ ವಿಗ್ರಹಗಳನ್ನು ಕೆತ್ತುತ್ತಿ

ದ್ದರು. ಕೆಲಸದ ಶ್ರಮವೂ ಅಗಾಧತೆಯೂ ಅವರಿಗೆ ತೋರುತ್ತಲೇ ಇರಲಿಲ್ಲವೇನೋ! ಹದಿನೈದು ಇಪ್ಪತ್ತು ಅಡಿ ಎತ್ತರದ ನರಸಿಂಹಸ್ವಾಮಿ! ಹದಿನೈದು ಅಡಿಯ ಗಣೇಶ!! ಅವರಿಗೆ ಹುಚ್ಚು ಹಿಡಿದಿರಬೇಕು. ಅಂಥ ಅವುಗಳ ಹೆಸರು ಬಲ್ಲಿರೇನು? ಒಂದು ಸಾಸಿವೆ ಕಾಳಿನ ಗಣೇಶವಂತೆ; ಇನ್ನೊಂದು ಕಡಲೆಕಾಳಿನ ಗಣೇಶವಂತೆ; ಹೀಗೆಯೆ ಹಲಸಿನ ಕಾಯಿ ಗಣೇಶನೆಂದು ಒಂದನ್ನು ಮಾಡಿದರೆ ಅದು ಹೇಗಿರುತ್ತಿದ್ದಿತೋ!

ಮುಂದೆ ಹೋಗಹೋಗುತ್ತ ರಸ್ತೆಯು ಚಿಕ್ಕದಾಯಿತು. ದಾರಿಯಲ್ಲಿ ಇರುವ ಮುಳ್ಳುಗಿಡ, ಮುಳ್ಳು ಕೊಂಟುಗಳನ್ನು ಬಿಟ್ಟರೆ ಕಣ್ಣು ಹರಿಯುವ ವರೆಗೂ ಸುತ್ತಲಿನ ಏನು ಸುಂದರ ದೃಶ್ಯಗಳು! ನೂರಾರು ವರ್ಷಗಳಿಂದ ಸುಮಾರು ಒಂದೇಸಮನಾಗಿ ತಮ್ಮ ಸ್ಥಿತಿಯನ್ನು ಕಾಪಾಡಿಕೊಂಡು, ಪ್ರಪಂಚದ ಕಷ್ಟ ಸುಖಗಳನ್ನೂ ಮಂಗಳಾಮಂಗಳಗಳನ್ನೂ ಅವಿಚಲಿತ ದೃಷ್ಟಿಯಿಂದ ನೋಡುತ್ತ ಧೃಢವಾಗಿ ಪಟುವಾಗಿ ನಿಂದಿರುವ ಪರ್ವತಗಳು; ಪರ್ವತ ಶಿಖರಗಳ ಮೇಲೆ ಆಕಾಶದ ಬಿಳಿಮೋಡಗಳಿಂದ ಸುತ್ತುವರಿಯಲ್ಪಟ್ಟು ಸೇವೆಗೊಳ್ಳುತ್ತ ಸಿಡಿಲು ಬಳ್ಳಿಗಳೊಡನೆ ಸರಸವಾಡುತ್ತ ಉಚ್ಚ ಪೀಠಗಳ ಮೇಲಿರುವ ದೇವಾಲಯ, ತಪೋಗೃಹ, ಆಶ್ರಮಗಳು; ಎಡಗಡೆ ಹತ್ತಿರದಲ್ಲಿಯೆ ಕಲ್ಲುಬಂಡೆಗಳ ಹಿಂದೆ ಕಲಕಲ ನಿನಾದದಿಂದ ಹರಿಯುತ್ತಿರುವ ತರಂಗಿಣೀ ತುಂಗಭದ್ರೆಯ ಕೋಲಾಹಲ. ಸ್ವಲ್ಪ ದೂರ ನೇರವಾಗಿ ಹೋಗಿ ಉತ್ತರ ಕ್ಷಣದಲ್ಲಿಯೆ ಎಲ್ಲಿಯೋ ಹೊಕ್ಕು, ಹೇಗೋ ತಿರುಗಿ, ಮರೆಯಾಗಿ, ಮುಖವನ್ನು ಮುಚ್ಚಿಕೊಂಡು, ಪುನಃ ಮೈಲುಗಳ ದೂರದಲ್ಲಿ ಪರ್ವತ ಸಾನುವೊಂದರಲ್ಲಿ ಕಣ್ಣಿಗೆ ಬೀಳುತ್ತ ನಮ್ಮೊಡನೆ ಹುಡುಗಾಟವಾಡಲೆಳಸುವಂತೆ ಮುಂದುವರಿದಿರುವ ಮೆಟ್ಟಿಲುದಾರಿ. ಬಲುದೂರ ಹೀಗೆಯೇ ಪ್ರಕೃತಿಯ ಈ ತೆರದ ವಿಚಿತ್ರ ರಮಣೀಯತೆಯನ್ನು ನೋಡುತ್ತ ಆನಂದಿಸುವ ನಾವೇ ಪುಣ್ಯಶಾಲಿಗಳೆಂದು ಅಂದುಕೊಳ್ಳುತ್ತ ಮುಂದೆಮುಂದೆ ಹೊರಟೆವು.

ಇನ್ನೆರಡು ಮಾರುಗಳ ದೂರದಲ್ಲಿ ಎರಡು ದೇವಸ್ಥಾನಗಳು; ಒಂದು ಕೋದಂಡರಾಮಸ್ವಾಮಿಯ ದೇವಸ್ಥಾನ; ನದಿಯ ದಂಡೆಯಲ್ಲಿಯೇ ಇನ್ನೊಂದು. ಈಚೆ ಬೆಟ್ಟದ ಕಿಬ್ಬಿಯಲ್ಲಿ ಲಕ್ಷ್ಮೀನಾರಾಯಣಸ್ವಾಮಿಯ ದೇವಸ್ಥಾನ. ನಮ್ಮಲ್ಲಿ ಕೆಲವರು ಅದನ್ನೇನು ನೋಡುವುದು? ಅಂಥಾದ್ದು ಇಲ್ಲಿ ಒಂದು ಸಾವಿರವಿದೆ ಬನ್ನಿ; ಕೋದಂಡರಾಮನ ದರುಶನ ತೆಗೆದುಕೊಂಡು ಮುಂದೆ ಹೋಗೋಣ; ಅಲ್ಲಿ ಪೂಜೆ ನಡೆಯುತ್ತಿರುವಂತೆ ಕಾಣುವುದು ಎಂದರು. ಆದರೂ ನನಗೆ ಸ್ವಲ್ಪ ರಾಯರು ದೊಡ್ಡ ಮನಸು ಮಾಡಿ ನನ್ನಂತೆಯೇ, ನೋಡಿಕೊಂಡು ಹೋಗೋಣ ಏಳಿ, ಎಂದರು.

ಆ ದೇವಸ್ಥಾನವು ದೊಡ್ಡದಲ್ಲ. ಹೊರಗಡೆ ಕೆತ್ತನೆಯ ಕೆಲಸವೊಂದೂ ಇಲ್ಲ. ಯಾವ ಜಕ್ಕಣಾಚಾರ್ಯನ ಶಿಲ್ಪವೂ ಅಲ್ಲಿ ಇಲ್ಲ. ಒಂದೇ ಬಂಡೆಯಲ್ಲಿ ದೇವಸ್ಥಾನವನ್ನು ಕೊರೆದು ಅದನ್ನು ಸಾಮಾನ್ಯವಾಗಿ ಕಟ್ಟಿದ್ದಾರೆ. ಒಳಗೆ ಮೂರು ವಿಗ್ರಹಗಳಿವೆ; ತೆಳ್ಳಗೆ ಉದ್ದ ಉದ್ದವಾಗಿ ಒಂದರ ಪಕ್ಕದಲ್ಲಿ ಒಂದು ಅತ್ಯುತ್ತಮವಾಗಿ ಕಡೆದು ಮಾಡಲ್ಪಟ್ಟಿವೆ. ಒಂದು ಶ್ರೀಮನ್ನಾರಾಯಣ ವಿಗ್ರಹ; ಅದರ ಎರಡು ಪಕ್ಕಗಳಲ್ಲಿಯೂ ಶ್ರೀದೇವೀಭೂದೇವೀ ವಿಗ್ರಹಗಳು. ನಿಜವಾದ ದೇವತಾವಿಗ್ರಹಗಳಿವು. ಹೀಗಿದ್ದರಲ್ಲವೆ, ಜನರಿಗೆ ಅವುಗಳಲ್ಲಿ ಭಕ್ತಿಯೂ ಪ್ರೀತಿಯೂ ಹುಟ್ಟುವುದು? ಆದರೆ ನಾವು ಹತಭಾಗ್ಯರು. ಯಾರೋ

ಕ್ರೂರಕರ್ಮಿಗಳು–ಘಾತುಕರು–ಈ ಸೌಂದರ್ಯವನ್ನೇ ದೂರದಿಂದ ಹುಡುಕಿಕೊಂಡು ಬಂದು ವಿಗ್ರಹಗಳ ಚೆಂದವನ್ನೂ ಚೆಲುವನ್ನೂ ನೋಡಿ ಸಹಿಸಲಾರದೆ ಅವನ್ನು ಭಿನ್ನ ಮಾಡಿದ್ದಾರೆ. ದೇವನ ಅಖಂಡ ಮೂರ್ತಿಯನ್ನು ಈ ಕರ್ಮಭೂಮಿಯಲ್ಲಿ ನೋಡುವುದು ಅಸಾಧ್ಯವೆಂದು ಕಾಲ ಕಾಲದಲ್ಲಿಯೂ ಯಾವುದೋ ಅದೃಷ್ಟ ವ್ಯಕ್ತಿಯೊಂದು ಸಾರಿ ಸಾರಿ ಹೇಳುವುದು ಎನ್ನುವಂತೆ, ಈ ಮೂರ್ತಿಗಳ ಪಾದಭಾಗವೊಂದು ಮಾತ್ರ ಉಳಿದು ಉಳಿದ ಶ್ರೀತನುವೆಲ್ಲವೂ ಈಗ ಕಾಣದಂತಾಗಿದೆ. ಸಾಧಾರಣದವರಿಗೆ ಕಾಣಿಸದ ಕಡೆ ಎಲ್ಲಿಯೋ ಒಂದು ಮೂಲೆಯಲ್ಲಿ ಶ್ರದ್ಧಾಳುಗಳಾಗಿ ಅರಸುವವರಿಗೆ ಮಾತ್ರ ಭಗವಂತನ ಪಾದದರ್ಶನವಾಗುವದೆಂದು ಹಿರಿಯರು ಹೇಳಿದ್ದನ್ನು ಕೇಳಿದ್ದೇವೆ. ಆದರೆ ಈ ರೀತಿ ಅವನ್ನು ಕಂಡರೆ ಸಂತೋಷಕ್ಕಿಂತಲೂ ಹೆಚ್ಚಾಗಿ ದುಃಖವೇ ಆಗುವುದೆಂದು ವಿಶದವಾಗಿ ಹೇಳಬೇಕಾದುದೇನಿದೆ?

ಮೇಲ್ಗಡೆ ಸಪ್ತ ಫಣಗಳಿಂದ ದೇವನಿಗೆ ಛತ್ರಿ ಹಿಡಿದಂತೆ ನಿಂತಿರುವ ಫಣಿರಾಜನಿಗೂ ದುರ್ಗತಿ ತಪ್ಪಿಲ್ಲ. ಫಣಿರಾಜನ ಕಂಠವು ಕತ್ತರಿಸಿಹೋಗಿದೆ. ಎಲ್ಲಿಗೋ ನಡುವೆ ಹರಿದುಹೋಗಿರುವ ಫಣಭಾಗದಿಂದ ಒಂದೆರಡು ಜೊತೆ ನಾಲಗೆಗಳು ಒಡೆಯನಿಗೆ ಏನೊ ಹೇಳುವುದಕ್ಕೆಂದು ಹೊರಟು ಹೇಳಿ ಮುಗಿಸುವಷ್ಟರಲ್ಲೇ ಜೀವರಸ ಪ್ರವಾಹವು ನಿಂತುಹೋಗಲು ನಿಶ್ಚೇಷ್ಟವಾಗಿ ನಿಂತುಬಿಟ್ಟಂತೆ ಕಾಣುತ್ತದೆ. ಈಗಲೂ ಇಷ್ಟು ದಿನಗಳ ಮೇಲೆ ಈ ಮುನ್ನೂರು ಮೈಲುಗಳ ದೂರದಿಂದ ಒಮ್ಮೆ ಆ ದೃಶ್ಯವನ್ನು ನೋಡಿದರೆ ದುಶ್ಶಮಿತವಾದ ತೀವ್ರವೇದನೆಯೊಂದು ಮನಸ್ಸಿನಲ್ಲಿ ಉಂಟಾಗಿ ಶೂಲದ ಇರಿತದಂತೆ ನೋಯಿಸುತ್ತದೆ. ಆದರೂ ಅದೇ ದೃಷ್ಟಿಯು ಪುನಃ ಪುನಃ ಪ್ರೀತಿಯಿಂದ, ಭಕ್ತಿಯಿಂದ, ನಯದಿಂದ ನಿರ್ಮಲಾಂತಃಕರಣದಿಂದ, ಅಶ್ರುಜಲಾಂಜಲಿಗಳಿಂದ ಆ ಪವಿತ್ರ ಪಾದಗಳ ಬಳಿಗೆ ಹೋಗಿ ಅವನ್ನು ತೊಳೆದು ಕುಸುಮ ಪರಿಮಳಗಳಿಂದ ಪೂಜಿಸಲೆಳಸಿ ಸರ್ವದಾ ಅಲ್ಲಿಯೇ ಇರಲು ಆತುರಾತುರವಾಗಿಯೂ ಇರುತ್ತದೆ.

ಮುಂದೆ ಕೋದಂಡರಾಮ ಸ್ವಾಮಿಯ ಗುಡಿ. ಅಲ್ಲಿ ಜನರ ಗದ್ದಲ ಬಹಳ; ಸಮಾರಾಧನೆಯ ಸಂಭ್ರಮದ ಓಡಾಟ ಬೇರೆ. ಅಷ್ಟು ಜನರ ಗದ್ದಲವಿರುವ ಕಡೆಯೂ ಅರ್ಚಕರ ಆರಾಧನೆ ಪೂಜೆಗಳು ನಡೆಯುತ್ತಿರುವ ಕಡೆಯೂ ವಾಸಿಸಿಕೊಂಡಿರುವುದಕ್ಕೆ ದೇವನು ಹಿಂಜರಿಯುತ್ತಾನಂತೆ. ಅವನಿಗೆ ಜನರ ಭಯ ಬಹಳ.

ಕೋದಂಡರಾಮಸ್ವಾಮಿ ದೇವಸ್ಥಾನದ ಎದುರಿನಲ್ಲಿ ನದಿಯ ಪಾತ್ರವು ಬಹಳ ಅಗಲವಾಗಿದೆ. ನೀರಿನ ಪ್ರವಾಹವು ಬಂದು ಬಂದು ಇಲ್ಲಿ ಸುಮಾರು ಒಂದು ಸಣ್ಣ ಕೆರೆಯಷ್ಟು ಅಂಗಳವನ್ನು ಮಾಡಿಕೊಂಡಿದೆ. ಎದುರಿಗಿರುವ ದೇವರು ದೇವಸ್ಥಾನಗಳ ಸಮ್ಮುಖದಲ್ಲಿ ತುಂಗಭದ್ರೆಯು ನಮ್ರಳಾಗಿ ಪ್ರಣಾಮಗೈಯಲೆಳಸಿ ಪ್ರದಕ್ಷಿಣೆ ಮಾಡಿ ಮುಂದೆ ಹೋಗುವಂತಿದೆ. ನದಿಯ ಆಚೆ ಕಡೆಯ ದಂಡೆಯಲ್ಲಿ ಶ್ರೀರಾಮದೂತನು ಹುಟ್ಟಿದ ಅಂಜನಾಪರ್ವತ; ನಮಗೆ ಎಡಗಡೆ ಬೆಟ್ಟಗಳ ನಡುವೆ ಜಾಗಮಾಡಿಕೊಂಡು ಹರಿದು ಬರುತ್ತಿರುವ ನದಿ. ವಿಶಾಲವಾದ ನಮ್ಮ ಮುಂದಿನ ಜಲಾಂಗಣ; ತುಂಗಭದ್ರೆಯು ಅಲ್ಲಿಂದ ಮುಂದೆ ಅತಿ ಸಂಭ್ರಮದಿಂದ ಪ್ರಯಾಣ ಮಾಡುತ್ತ ಎದುರಿಗೆ ಸಿಕ್ಕಿದ ಕಲ್ಲುಬಂಡೆಗಳನ್ನು ಅಪ್ಪಳಿಸಿಕೊಂಡು, ಅವುಗಳ ಮೇಲೆ ಝಲ್ಲನೆ ಹರಿದು, ಸುಳಿದು ಸಗರ್ವದಿಂದ ಹೋಗುತ್ತಿರುವ ದೃಶ್ಯ.

ರಾಯರು ಕೇಳಿದರು "ಇಲ್ಲೆಲ್ಲೊ, ಚೆನ್ನಯ್ಯ, ಸಂನ್ಯಾಸಿ ದಿಬ್ಬವೆಂಬ ಜಾಗವಿದೆ ಅಂತಾರಲ್ಲ?" ಎಂದು.

ಚೆ--ಅಗೊಳ್ಳಿ ಸ್ವಾಮಿ, ಅದು ಕಲ್ಲು ಮಂಟಪ, ನದಿಯ ಆಚೆ ಕಡೆ.

ಆ ಮಂಟಪವನ್ನು ಆಗಲೆ ನಾವೆಲ್ಲ ನೋಡಿದ್ದೆವು. ಇತರ ಕಲ್ಲು ಮಂಟಪಗಳಂತೆಯೇ ಹೊರಗಣ ಆಕಾರದಲ್ಲಿ—ಅದೂ ಅತಿ ಸಾಮಾನ್ಯವಾದುದು. ಈಗ ಅದೇ ಮಂಟಪವೇ ಸಂನ್ಯಾಸಿ

ದಿಬ್ಬವೆಂದು ತಿಳಿಯುತ್ತಲೇ ರಾಯರ ಮನಸ್ಸು ಸಂಪೂರ್ಣವಾಗಿ ಆ ಕಡೆ ಹೊರಟುಹೋಯಿತು. ಐತಿಹಾಸಿಕ ಸಂಬಂಧಗಳಿಂದ, ಅವರ ಕಣ್ಣಿಗೆ--ನಮ್ಮೆಲ್ಲರ ಕಣ್ಣಿಗೆ ಆ ನಿರ್ಜೀವ ಮಂಟಪವು ವಿದ್ಯಾರಣ್ಯರ ತಪಃಸ್ಥಾನವಾಗಿ ಎದುರಿಗೆ ಚಿತ್ರಿತವಾಗಿ ನಿಂತಿತು. ರಾಯರು ಸ್ವಲ್ಪ ಹೊತ್ತಿನ ಬಳಿಕ "ಅಲ್ಲಿಗೆ ಹೋಗುವುದಕ್ಕೆ ದಾರಿಯಿಲ್ಲವೇನಯ್ಯ" ಎಂದರು.

ಚೆ--ಇಲ್ಲ ಸ್ವಾಮಿ. ಆನೆಗೊಂದಿಯ ಕಡೆಯಿಂದ ಬೆಟ್ಟವನ್ನು ಹತ್ತಿ ಇಳಿದು ಬಂದರೆ ಆಗಬಹುದು. ಆದರೆ ಬಲು ಕಷ್ಟ.

ನಿಜವಾಗಿಯೂ ಅದು ನಿರ್ಗಮ ಪ್ರದೇಶವೇಯೆ. ಇಲ್ಲದಿದ್ದರೆ ವಿದ್ಯಾರಣ್ಯರು ಆ ಸ್ಥಳದಲ್ಲಿ ತಮ್ಮ ಆಶ್ರಮವನ್ನು ನಿರ್ಮಾಣಮಾಡಿಕೊಳ್ಳುತ್ತಿದ್ದರೆ? ಜನರ ಸುಳಿವಿಲ್ಲದೆ, ಅವರ ಗದ್ದಲಕ್ಕೆ ದೂರವಾದ ಆ ಏಕಾಂತಸ್ಥಾನವು ಎಷ್ಟು ರಮಣೀಯವಾಗಿದೆ! ವಿಶ್ವವ್ಯಾಪಾರ ತತ್ವಗಳನ್ನು ಕುರಿತು ಚಿಂತಿಸುತ್ತ, ಶಮದಮ ಯೋಗಾದಿ ತಪಶ್ಚರ್ಯೆಗಳಿಂದ ಆತ್ಮಶಕ್ತಿಯನ್ನು ವೃದ್ಧಿಪಡಿಸಿಕೊಂಡು, ಮನಸ್ಸನ್ನು ಸ್ತಿಮಿತಕ್ಕೆ ತಂದುಕೊಂಡು ನಿಶ್ಚಿಂತರಾಗಿರಲು ಕಲಿಯುವದಕ್ಕೆ ಈ ಶಾಂತಿನಿಕೇತನವು ಎಷ್ಟು ತಕ್ಕುದಾಗಿದೆ ಎಂಬುದನ್ನು ವರ್ಣಿಸಿ ಹೇಳುವದು ಸಾಧ್ಯವಿಲ್ಲ. ಇಲ್ಲಿ ಕುಳಿತು ತಾನೇ ಆ ವೀರ ತಪಸ್ವಿಗಳು ಹಿಂದೂ ಧರ್ಮವನ್ನು ಉದ್ಧಾರ ಮಾಡುವ ಯೋಚನೆಗಳನ್ನು ಪಕ್ವಮಾಡಿಕೊಂಡುದು!

ಮುಂದೆ ಅನತಿದೂರದಲ್ಲಿಯೇ ಎತ್ತರವಾದ ತುಲಾಪುರುಷದಾನಸ್ತಂಭಗಳು. ವಿಜಯನಗರದ ಅರಸರು ಪರ್ವ, ಗ್ರಹಣೇತ್ಯಾದಿ ಪುಣ್ಯಕಾಲಗಳಲ್ಲಿ ತುಲಾಭಾರ ಮಾಡಿಸಿಕೊಂಡು ರತ್ನ ಕನಕಾದಿ ದ್ರವ್ಯಗಳನ್ನು ಯಥೇಚ್ಛವಾಗಿ ದಾನ ಮಾಡುತ್ತಿದ್ದ ಸ್ಥಳವಂತೆ. ಅದು ಶಾಂತಿ ಕರ್ಮವೋ, ಶಾಸ್ತ್ರವಿಧಿಯೋ, ತಮ್ಮ ವೈಭವ ದರ್ಪಗಳ ಉದ್ದಂಡ ಧೋರಣೆಯನ್ನು ಲೋಕಕ್ಕೆ ಪ್ರಕಟಿಸಿ ಖ್ಯಾತಿಗೊಳ್ಳಲು ಹಿಂದಿನವರು ನಡೆಸುತ್ತಿದ್ದ ದಂಭವೃತ್ತಿಯೋ, ಇವೆಲ್ಲ ಪೂರ್ಸೋ ಹೇಳುವವರಾರು? ನಮ್ಮದು ಅತಿವೃಷ್ಟಿ ಅನಾವೃಷ್ಟಿಯ ಖಂಡ. ಇಲ್ಲಿ ಯಾವ ವಿಷಯದಲ್ಲಿಯೂ, ಜನರಲ್ಲಿ ಸಮತೆಯಾಗಲಿ ಸ್ತಿಮಿತಗತಿಯಾಗಲಿ, ಮಧ್ಯವೃತ್ತಿಯಾಗಲಿ ಇರದು. ಈ ಸ್ವಭಾವವು ಉಷ್ಣದೇಶಗಳವರಾದ ನಮಗೆ ಸೃಷ್ಟಿಕರ್ತನು ಕೊಟ್ಟ ಅಖಂಡ ಶಾಪವೆಂದು ತೋರುವುದು.

ಸ್ವಲ್ಪ ದೂರದಲ್ಲಿಯೇ ಒಂದು ದೊಡ್ಡ ದೇವಸ್ಥಾನ. ಅದೇ ವಿಟ್ಠಲಸ್ವಾಮಿಯ ಗುಡಿಯೆಂದು ತಿಳಿಯಿತು. ಹೊರಗಡೆ ಎತ್ತರವಾದ ಪೌಳೀಗೋಡೆಯ ಪ್ರಾಕಾರ; ಎಲ್ಲರೂ 'ವಿಟ್ಠಲಸ್ವಾಮಿ ಗುಡಿ, ವಿಟ್ಠಲಸ್ವಾಮಿ ಗುಡಿ' ಎಂದು ಹೇಳುತ್ತಿದ್ದುದನ್ನು ಮಾತ್ರ ಕೇಳಿದ್ದೆ. ಹೊರ ಪ್ರಾಕಾರವನ್ನು ನೋಡಿದವನು, "ಇಷ್ಟೇಯೇ! ಇಲಿಯನ್ನು ಹುಲಿಯೆಂದು ಕರೆದು ಹೋ ಎನ್ನುವುದೇ ನಮ್ಮ ಜನದ ಸ್ವಭಾವ" ಎಂದುಕೊಂಡೆನು. ಆದರೆ ಒಳಗಡೆ ಹೋದ ಮೇಲೆ ನನ್ನ ಈ ಭಾವನೆಯು ತಪ್ಪಾದುದನ್ನು ಮನಗಂಡೆನು.

. . . . . ನಾವು ಹೊರಟ ದಾರಿಯಿಂದ ಗುಡಿಗೆ ಪ್ರವೇಶ ತೆಂಕಣ ದ್ವಾರದಿಂದ. ಚೆನ್ನಯ್ಯನು ಬಾಗಿಲಿನಲ್ಲಿ ಜಗುಲಿಯ ಮೇಲೆ ಹುಳಿ ಮಾವಿನ ಕಾಯಿಗಳನ್ನು ತಿನ್ನುತ್ತ ಕುಳಿತುಕೊಂಡನು.

ಆ ದೇವಸ್ಥಾನದಲ್ಲಿ ನೋಡಬೇಕಾದುದು ಮುಖ್ಯವಾಗಿ ಮೂರು: ಮುಖದ ಮಹಾಮಂಟಪ, ಪಕ್ಕದಲ್ಲಿರುವ ದೇವರ ಕಲ್ಯಾಣಮಂಟಪ, ಎದುರಿನಲ್ಲಿ ಸಣ್ಣ ಕಲ್ಲು ರಥ. ಪ್ರಾಕಾರದ ಒಳಗಡೆ ಅನೇಕ ಶಿಲಾಶಾಸನಗಳಿವೆ.

ಆ ದೇವಸ್ಥಾನದ ಮುಖಭಾಗಕ್ಕೆ ಬಂದು ನಿಂತರೆ ಅದೇನು ಚಿತ್ರಕೃತಿಯ ಸಂವಿಧಾನ ಏನು ಶಿಲ್ಪಕಲಾಕೌಶಲ್ಯ! ದ್ರಾವಿಡ ಶೈಲಿಯ ವಾಸ್ತುರಚನೆಯಲ್ಲಿ ಈ ತೆರನಾದ ಇನ್ನೊಂದು ಶಿಲ್ಪಕೃತಿಯಿಲ್ಲವೆಂದು ಹೇಳಿದರೆ ತಪ್ಪಾಗದು. ಮಹಾಮಂಟಪಕ್ಕೆ ಹತ್ತಿ ಹೋಗಲು ಮಾಡಿರುವ ಮೆಟ್ಟಲುಗಳ ಎರಡು ಕಡೆಗಳಲ್ಲೂ ಸುಂದರ

ವಾಗಿ ಕೆತ್ತಿ ಮಾಡಿದ, ಸರ್ವಾಲಂಕಾರಭೂಷಿತಗಳಾಗಿ ಮುಂಗಾಲ್ಗಳನ್ನೆತ್ತಿ ನಿಂತಿರುವ ಮದಗಜಗಳು. ಹಂಪೆಯಲ್ಲಿನ ಸರ್ವತ್ರ ಶಿಥಿಲ ಸ್ಥಿತಿಯು ಈ ಆನೆಗಳಿಗೂ ಬಂದಿದೆ. ಅವುಗಳ ಮುಖದಿಂದ ಸೊಂಡಿಲು ಕತ್ತರಿಸಿಹೋಗಿದೆ.

ಮೇಲೆ ಹತ್ತಿ ಹೋಗಿ ನೋಡಿದರೆ ಸುತ್ತಲೂ ಸಾಲುಗಂಬಗಳು; ಎಲ್ಲವೂ ಒಂದೇ ಸಮನಾಗಿ ಸೌಂದರ್ಯೈಕ ದೃಷ್ಟಿಯಿಂದ ಮಾಡಿದುವು. ಗರ್ಭಗುಡಿಯ ಬಾಗಿಲ ವರೆಗೆ ವಿಶಾಲವಾದ ಸ್ತಂಭಮಾರ್ಗ; ಅವುಗಳ ಆಚೆಯಲ್ಲಿ ಉಪ-ಕಂಬ ಸಾಲುಗಳು; ಮಧ್ಯ ಉಪರಂಗ. ಪ್ರತಿಯೊಂದು ಕಂಬದಲ್ಲಿಯೂ ಕರಭ ಸಾಳ್ವಗಳ ಮೇಲೆ ಕುಳಿತ ಪಹರೆಯವರು. ಮೇಲ್ಗಡೆ ಪಟ್ಟಿಕೆಗಳಲ್ಲಿ ಸುತ್ತಲೂ ಚಿತ್ರಕೆಲಸ; ರಾಮಾಯಣ ಮಹಾಭಾರತಗಳಲ್ಲಿನ ಘಟನಾವಳಿಗೆ ಸಂಬಂಧಪಟ್ಟವು. ನಾನು ಈ ವರೆಗೆ ನೋಡಿದ ನಾಟಕ ಶಾಲೆಗಳಲ್ಲಿನ ಯಾವ ಓಲಗದ ಪರದೆಯೂ ಇಷ್ಟು ಮನೋಹರವಾಗಿ, ಹೃದಯಾಪಹಾರಕವಾಗಿ ಇದ್ದುದನ್ನು ನೋಡಿರಲಿಲ್ಲ.

ಇಲ್ಲಿ ಇಷ್ಟು ಶೃಂಗಾರವೇತಕ್ಕೆ? ಎಂದು ಒಂದು ಸಲ ಪ್ರಶ್ನೆ ಬಂತು. ದೇವರು ಇಷ್ಟು ಸೌಂದರ್ಯವನ್ನು ಒಂದೇ ಕಡೆ ರಾಶಿ ಹಾಕಿ ಮಿಕ್ಕ ಭಾಗಗಳಿಗೆ ಬಡತನವನ್ನೇಕೆ ಕೊಟ್ಟನೋ! ಎಂದುಕೊಂಡು, ಅಲ್ಲದೆ ಇಲ್ಲಿ ದೇವತಾ ವಿಗ್ರಹವಿಲ್ಲ, ಇಷ್ಟು ಸೊಗಸಾದ ಕಟ್ಟಡವು ತನ್ನಂಥವನಿಗೆ ತಕ್ಕುದಲ್ಲವೆಂದೂ ಇಂಥ ಶೃಂಗಾರ ನೆಲೆಯು ತನ್ನ ಯೋಗ್ಯತೆಗೆ ತಡೆಯುದೆಂದೂ ಮೀರಿದುದೆಂದೂ ಹೇಳಿ ವಿಟ್ಠಲ ಸ್ವಾಮಿಯು ಹಂಪೆಗೆ ಬಾರದೆ ಪಂಢರಪುರದ ತನ್ನ ಹಳೆಯ ಬಡ ಮಂದಿರದಲ್ಲೇ ನಿಂತು ಬಿಟ್ಟಿರುವಲ್ಲಿ, ಈ ಸೌಂದರ್ಯಕ್ಕೆ ಪವಿತ್ರತೆ ಹೇಗೆ ಬರಬೇಕು? ದೇವರ ವಾಸವಿಲ್ಲದ ದೇವಸ್ಥಾನವು ಮಂಗಳಸ್ಥಾನವೆಂತಾದೀತು? ಎಂದು ತೋರಿತು. ಉತ್ತರಕ್ಷಣದಲ್ಲಿಯೇ, ಛೇ! ಸೌಂದರ್ಯವೇ ಭಗವಂತನ ಪ್ರತಿರೂಪ; ಅದಕ್ಕೆ, ಇತರ ಕರಣಗಳಿಂದ ಸಿದ್ಧಿ ಬರಬೇಕಾದ ಆವಶ್ಯಕತೆಯೇನಿದೆ? ಎಂದೂ ವಿಧವಿಧವಾಗಿ ಮನಸ್ಸು ಭ್ರಮಿಸತೊಡಗಿತು. ಭಾವನೆಗಳು ಹಾಗಿರಲಿ, ಆ ಸೌಂದರ್ಯವನ್ನು ನೋಡಿದರೆ—ಶಾಂತಂ ಪಾಪಂ—ಅಮಂಗಳವನ್ನು ನುಡಿಯಬಾರದು, ಅದು ಸಾಧ್ವಿಯ ಸಾತ್ವಿಕ ಸೌಂದರ್ಯದಂತೆ ಕಳೆಗೊಂಡಿರಲಿಲ್ಲ. ಅತುಳ ಲಾವಣ್ಯಮಯಿಯಾಗಿ, ಹಾವಭಾವ ವಿಲಾಸಗಳಿಂದ ಲೋಕವನ್ನು ಬೆರಗುಮಾಡಿ ಸೋಲಿಸುವ ನಾರಿಯು ಅಥವಾ ಚಿರವೈಧವ್ಯಪರಿಣತವಾಗಿ ವ್ಯರ್ಥವಾದ ಸೌಂದರ್ಯದಂತೆ ತೋರತೊಡಗಿತು.

ಅಪವಿತ್ರ ಭಾವನೆಗಳನ್ನು ದೂರಮಾಡಲು ಕಲ್ಯಾಣ ಮಂಟಪದ ಕಡೆಗೆ ಬಂದು, ಅದನ್ನು ನೋಡುತ್ತಲೆ ಮನವು ಪರವಶವಾದಂತಾಯಿತು. ಅಲ್ಲಿಯೂ ಹೀಗೇ. ಕಂಬ ಸಾಲುಗಳು; ವಿಶಾಲವಾದ ಮಧ್ಯರಂಗ, ಅಕ್ಕಪಕ್ಕಗಳಲ್ಲಿ ನಾಲ್ಕು ಕಡೆ ಉಪರಂಗಗಳು. ಒಂದೊಂದು ಕಂಬವೂ ಒಂದೊಂದೇ ಕಲ್ಲಿನಿಂದ ಕಡೆದು ಕೆತ್ತಿ ಮಾಡಿದಂತಹುದು. ನಿಲುಗಂಬದ ಅಡಿಯ ಭಾಗದಲ್ಲಿ ಒಳಮುಖವಾಗಿ ಸಿಂಹಜಾತಿಯ ಮೃಗಗಳು; ಮಧ್ಯದಲ್ಲಿ ಪೀಠದ ಮೇಲೆ ಹೊರಮುಖವಾಗಿ ನಾಲ್ಕೈದು ಶಿಲಾದಂಡಗಳು; ಒಳಭಾಗದಲ್ಲಿ ಕರಭಾರೂಢರಾದ ಸವಾರರು. ಮಂಟಪದ ನಾಲ್ಕು ಕಡೆಯೂ ಹೀಗೆಯೆ. ಮಂಟಪದ ಒಳ ಮಾಳಿಗೆಯ ಪ್ರತಿ ಭಾಗವೂ ಸ್ಫುಟವಾಗಿ ಕಂಡು ಶೋಭಿಸುವಂತೆ—ಹಸುರು, ನೀಲಿ, ಗುಲಾಬಿ, ಕೆಂಪು ಮುಂತಾದ ಬಣ್ಣಗಳಿಂದ ಅವನ್ನು ಹೆಚ್ಚು ಉಜ್ವಲವಾಗಿ, ಕಾಂತಿಯುತವಾಗಿ ಮಾಡಿದ್ದಾರೆ.

ಭವ್ಯಗಾನವೊಂದು ಘನೀಭೂತವಾಗಿ ಶಿಲ್ಪಕೃತಿಯಾಗಿ ಪರಿಣಮಿಸಿದಂತೆ ಇಲ್ಲಿನ ನೋಟ. ಆ ರಾಜರ ಕಲಾಭಿರುಚಿ, ಅಲಂಕಾರ ದೃಷ್ಟಿ, ರಸಿಕತೆ ಇವುಗಳನ್ನು ಏನೆಂದು ಹೇಳೋಣ! ಆ ಚಿತ್ರಗಾರರು, ಶಿಲ್ಪಿಗಳು ತಾನೇ ಎಂಥವರು! ಯಾವ ಚಕ್ರವರ್ತಿಯ ವಿವಾಹ ಮಂಟಪವು ಈ ತೆರನಾದ ಶಿಲ್ಪಕೌಶಲವನ್ನು ತೋರಿಸಬಲ್ಲುದು! ಕಲ್ಯಾಣಮಂಟಪವೆಂದರೆ ಇದಕ್ಕಲ್ಲವೆ ಈ

ಹೆಸರು ಸಲ್ಲತಕ್ಕದ್ದು ಎಂದುಕೊಂಡೆನು. ಯಾವ ಚಿತ್ರಗಾರನು ತನ್ನ ಚಿತ್ರಗಳನ್ನು ಇಷ್ಟು ಉಜ್ವಲವಾಗಿ, ಸುಂದರವಾಗಿ, ಸಜೀವವಾಗಿ ಚಿತ್ರಿಸಬಲ್ಲನೋ ನಾನರಿಯೆ. ಸಂಧ್ಯಾರುಣರಾಗಗಳಿಂದ ಬಣ್ಣಗೊಂಡು ವಿಧವಿಧವಾಗಿ ಕಾಂತಿಪಡೆದು ಕ್ಷಣಕ್ಷಣಕ್ಕೂ ಹೊಸ ಶೃಂಗಾರಗಳನ್ನು ತೋರಿಸಿ ಮೋಹಿಸುವ ಮುಗಿಲ ಶ್ರೇಣಿಗಳು ಒಂದೊಂದೂ ತಮ್ಮಷ್ಟಕ್ಕೆ ತಾವೆ ಕೂಡಿಬಂದು ಈ ರೀತಿಯಲ್ಲಿ ಆಕಾರ ತಾಳಿ ಘನಿಷ್ಠವಾಗಿ ಇಲ್ಲಿ ಊರಿ ನಿಂತುಬಿಟ್ಟಿರುವಂತೆ ಈ ಮಂಟಪವು ಶೋಭಿಸುವುದಲ್ಲ! ಒರಟಾದ, ಜಡವಾದ ಕಲ್ಲಿಗೆ ಹೀಗೆ ಜೀವಕಳೆ ತುಂಬುವವನು ಸೃಷ್ಟಿಕರ್ತನಿಗೆ ಸಮಾನನಲ್ಲವೆ!

ಯಜಮಾನರೂ ರಾಯರೂ ಗಡಿಯಾರ ತೆಗೆದು ನೋಡಿದರು. ನಾಲ್ಕೂಕಾಲು ಗಂಟೆಯಾಗಿತ್ತು. 'ಹಿಂದಿರುಗಿ ಬರುವುದು ಬಹಳ ಹೊತ್ತಾಗಿ, ಕತ್ತಲಾಗಿ ಹೋಗುತ್ತೆ' ಎಂದರು. ಚೆನ್ನಯ್ಯನೂ 'ಹೊರಡೋಣ ಸ್ವಾಮಿ' ಎಂದ. ಮೂರ್ತಿಸ್ವರೂಪದಲ್ಲಿ ಅಲ್ಲಿ ವಾಸಮಾಡಿಕೊಂಡಿರದಿದ್ದರೂ ಅಲ್ಲೇ ಎಲ್ಲೆಲ್ಲಿಯೂ ಅಡಗಿ ಆ ಕಲ್ಲು ಕಟ್ಟಡಕ್ಕೆ ಜೀವವನ್ನಿತ್ತಿರುವ ಆ ಸೌಂದರ್ಯಮೂರ್ತಿಯಿಂದ ಅಪ್ಪಣೆಪಡೆದು ಮುಂದೆ ಹೊರಟೆವು.

ಇತರ ದೇವಸ್ಥಾನಗಳಂತೆಯೇ ಇಲ್ಲಿಯೂ ಮುಂಭಾಗದಲ್ಲಿ ತೇರುಬೀದಿ, ನಾಲ್ಕೂ ಕಡೆ ದೇವಸ್ಥಾನಗಳು; ಈಗ ಅವೆಲ್ಲ ಭೂಶಾಯಿತವಾಗಿವೆ. ಅಲ್ಲಿನ ದೇವರುಗಳ ಕೈ ಒಂದು ಕಡೆ, ಕಾಲೊಂದು ಕಡೆ, ರುಂಡ ಮುಂಡಗಳು ಬೇರೆ ಬೇರೆ ಕಡೆ; ಹೀಗೆ ತಮ್ಮ ಅವಯವ ಭಾಗಗಳನ್ನೂ ಕಳೆಗಳನ್ನೂ ಕಳೆದುಕೊಂಡು ವಿಗ್ರಹಗಳು ಭಿನ್ನವಾಗಿ ಎಲ್ಲೆಲ್ಲಿಯೂ ಬಿದ್ದಿವೆ. ಅವುಗಳ ಮೇಲ್ಗಡೆ ಪೊದೆಗಳೂ ಮುಳ್ಳುಗಿಡಗಳೂ ಕ್ರೂರವಾಗಿ ಹಬ್ಬಿವೆ. ಕ್ರೂರತರವಾದ ಮುಳ್ಳು ಹಂದಿಗಳು ಯಥೇಷ್ಟವಾಗಿ ಅವುಗಳೊಳಗೆ ವಾಸಮಾಡಿಕೊಂಡಿವೆ. "ಈ ಪ್ರದೇಶವೆಲ್ಲ ಈಗ ನಮಗೆ ಸೇರಿದವು; ಇಲ್ಲಿಗೆ ಬರುವ ಜನರು ನೀವು ಜೋಕೆಯಿಂದಿರಬೇಕು" ಎಂದು ಹೇಳುವಂತೆ ತಮ್ಮ ಪ್ರಾಬಲ್ಯದ ಗಡಿಗಳನ್ನು ಸೂಚಿಸಲೋ ಎಂಬಂತೆ—ನಾಲ್ಕಾರು ಮಾರುಗಳ ದೂರ ಮೊನಚಾದ ತಮ್ಮ ಮುಳ್ಗರಿಗಳನ್ನು ಎಸೆದಿವೆ. ಕ್ರೂರತಮವಾಗಿ, ಪಾಳುದೇವತೆಯು ಎಲ್ಲೆಲ್ಲಿಯೂ ವಿಕಟಹಾಸದಿಂದ ತನ್ನ ಪ್ರಭಾವವೆಂಥದೆಂಬುದನ್ನು ಬಿರ್ರನೆ ಬೀಸುವ ಉರಿಗಾಳಿಗೆ ಚೀರಿ ಹೇಳಿ ಆ ಪ್ರದೇಶವನ್ನು ಸ್ಮಶಾನವನ್ನಾಗಿ ಮಾಡಿದೆ.

ಸ್ಮಶಾನವಲ್ಲದೆ ಮತ್ತೇನು? ರಕ್ತ, ಮಾಂಸ, ರಸ, ರಾಗ, ಬಣ್ಣ ಕಾಂತಿಗಳಿಂದ ಪರಿಪುಷ್ಟರಾದ ಯುವಕ ಯುವತಿಯರು ನಗುನಗುತ್ತ ಸರಸವಾಡುತ್ತಿದ್ದ ಸುಖಭೂಮಿಯಲ್ಲಿ ಈಗ ವಿಷಧರ ಸರ್ಪಗಳು, ಮುಳ್ಳು ಹಂದಿಗಳು, ಕಳ್ಳಕಾಕರು; ಎಲ್ಲಿ ಹೂದೋಟಗಳ ಪರಿಮಳವನ್ನು ಹೊತ್ತುಕೊಂಡು ತಣ್ಣಗೆ ತಂಗಾಳಿ ಬೀಸುತ್ತಿತ್ತೊ ಅಲ್ಲಿ ಈಗ ದಾರುಣವಾದ ಉರುಗಾಳಿ. ಪ್ರಪಂಚದ ಚಕ್ರಾಧಿಪತಿಗಳ ಸಂದಣಿಯಲ್ಲಿ ಎಲ್ಲ ಅಂಶಗಳಲ್ಲಿಯೂ ಸಮತೂಗಲು ಅರ್ಹರಾಗಿದ್ದ ಸಮ್ರಾಜರು ಆಳುತ್ತಿದ್ದ ಆ ಪ್ರದೇಶದಲ್ಲಿ ಮುಳ್ಳುಪೊದೆ; ಅವರ ದರ್ಪ ಪೌರುಷಗಳು ಪ್ರತಿಧ್ವನಿತವಾಗುತ್ತಿದ್ದ ಅರಮನೆಗಳಲ್ಲಿ ನರಿಗೂಗೆಗಳ ಕರ್ಕಶ ಧ್ವನಿ.

ವಿಜಯನಗರವು ಧ್ವಂಸವಾದುದಂತೂ ಹಾಗಿರಲಿ, ಆ ರಾಜರ ಇಂದ್ರಸದೃಶವಾದ ವೈಭವಗಳೂ ಉಚ್ಚಾಭ್ಯುದಯಾಭಿಲಾಷೆಗಳೂ ಮಹಾಸನ್ನಾಹಗಳೂ ಕಾರ್ಯಮುಖೇನ ಅಮರತ್ವವನ್ನು ಪಡೆಯಬೇಕೆಂದು ಅವರು ಮಾಡಿದ ಅದ್ಭುತವಾದ ಪ್ರಯತ್ನಗಳೂ ಒಟ್ಟಿಗೆ ಇಲ್ಲಿ ನಾಶಪಡೆದು, ಅವರ ವೈಭವರಂಗವನ್ನು ಈಗ ಮಹಾಸ್ಮಶಾನವನ್ನಾಗಿ ಮಾಡಿದೆ.

ಅಲ್ಲಿ ಸುತ್ತಲೂ ಎಲ್ಲಿಯಾದರೂ ಯಾವ ವಸ್ತುವನ್ನಾದರೂ ನೋಡಿ. ಒಂದು ದೃಷ್ಟಿಯಿಂದಲ್ಲದಿದ್ದರೆ ಇನ್ನೊಂದು ವಿಧದಲ್ಲಿ ಅನನ್ಯಸಾಧಾರಣವಾಗಿ, ಮಹತ್ತರವಾಗಿರುವುವೇ ಹೊರತು ಸಾಮಾನ್ಯವಾಗಿ ಕಾಣವೇ ಕಾಣವು.

ಅಲ್ಲಿನ ಕೋಟೆ ಕೊತ್ತಲಗಳು, ಶಿಥಿಲವಾದ ಅರಮನೆ ಶಿಬಿರಗಳು, ವಿಗ್ರಹ ದೇವಸ್ಥಾನಗಳು, ಲಾಯ ಉಗ್ರಾಣಗಳು, ಕಟ್ಟೆ ತೊಟ್ಟಿಗಳು, ವಿಹಾರ ಓಲಗಸ್ಥಾನಗಳು ಇವುಗಳ ದೃಶ್ಯವನ್ನು ನೋಡಿದ ಕೂಡಲೇ—ಪೂರ್ವದ ಮಹತ್ವವನ್ನು ಕಳೆದುಕೊಂಡು ಈಗ ವೈಧವ್ಯವನ್ನು ಅನುಭವಿಸುತ್ತಿರುವ ಶ್ರೀಮಂತ ರಮಣಿಯೊಬ್ಬಳಂತೆ ಕಾಣುವುವೇ ಹೊರತಾಗಿ ನಾಡಾಡಿಯಾಗಿ ಕಾಣವು. ಖಿನ್ನಳಾಗಿ, ಅಧೋಮುಖಳಾಗಿ, ಕಾಂತಿಹೀನಳಾಗಿ--ಆದರೂ ದೀನತಾಲೇಶವಿಲ್ಲದೆ--ಒಬ್ಬರ ಅವಲಂಬನ ಸಹಾಯಗಳನ್ನೂ ಬೇಡದೆ, ಸಗರ್ವದಿಂದ ತನ್ನ ಕರ್ಮಫಲವನ್ನು ಅನುಭವಿಸುತ್ತಿರುವಂತೆ ಇರುವುದನ್ನು, ಈ ದೂರದಿಂದ, ನಾನ್ನೂರು ವರ್ಷಗಳು ಕಳೆದು ಹೋದ ಮೇಲೆ, ಒಂದೆರಡು ದಿನ ಮಾತ್ರ ಅಲ್ಲಿ ನೋಡುವುದಕ್ಕೆ ಹೋಗಿದ್ದ ನಮಗೇ ಕಣ್ಣೀರು ಉಕ್ಕಿ ಹರಿದು, ದುಃಖಾಗ್ನಿಯಿಂದ ಹೃದಯವು ಸುಟ್ಟು ಹೋಗುತ್ತಿರುವಲ್ಲಿ, ಅದನ್ನು ದಿನದಿನವೂ ಸ್ವಂತ ದೇಹದಲ್ಲಿ ಅನುಭವಿಸುತ್ತಿರುವ ವಿಜಯನಗರದ ಸಾಮ್ರಾಜ್ಯಲಕ್ಷ್ಮಿಯ ಅಪಾವಸ್ಥೆಯನ್ನು ಏನೆಂದು ಹೇಳೋಣ! ಕಾಲದ ಚಕ್ರಪರಿವರ್ತನೆಯಲ್ಲಿ ಆಕೆಯ ಅದೃಷ್ಟಪಂಕ್ತಿಯ ಅರಗಳು ಯಾವ ರೀತಿಯಾಗಿ ಪರಿಭ್ರಮಿಸಿ ಕಳಚಿ ಹೊರಗೆ ಬಿದ್ದವೊ ಓದಿ ತಿಳಿದುಕೊಂಡಿರುವ ನಮಗೆ ಈ ದೃಶ್ಯವನ್ನು ನೋಡುತ್ತಲೆ ಯಾವ ವಿಧವಾದ ಮಾನಸಿಕ ಪರಿಣಾಮಗಳು ಉಂಟಾಗುವವೊ ಅದರ ವಾಸ್ತವತೆಯನ್ನು ಇತರರಿಗೆ ಹೇಗೆ ವ್ಯಕ್ತಪಡಿಸುವುದು?

ಆನೆಗೊಂದಿಯು ನದಿಯ ಆಚೆಯ ಭಾಗದಲ್ಲಿ; ನಮ್ಮ ಕಡೆಯಿಂದ ಅಲ್ಲಿಗೆ ಹರಿಗೋಲುಗಳಲ್ಲಿ ದಾಟಿ ಹೋಗಬೇಕು. ಹರಿಗೋಲೂ ಅಂಬಿಗರೂ ಸಿದ್ಧರಾಗಿದ್ದರು. ಅವುಗಳಲ್ಲಿ ಒಂದನ್ನು ಹತ್ತಿ ಕುಳಿತೆವು. ನದಿಯ ಹೊರದಡವನ್ನು ಸೇರಿದುದಾಯಿತು. ಉದ್ದಕ್ಕೆ ಹೊರಟೆವು. ಆನೆಗೊಂದಿ ಸಂಸ್ಥಾನವನ್ನು ಹೊಕ್ಕು ಮುಂದೆ ನಡೆದೆವು. ಇಲ್ಲಿ ಜನರು ವಾಸವಾಗಿದ್ದಾರೆ; ಮನೆ, ಬೀದಿ, ದೇವಸ್ಥಾನ, ಅಂಗಡಿ, ಹೊಲ, ಗದ್ದೆ ಎಲ್ಲ ಇದೆ. ಆದರೆ ಆವೂರನ್ನು ದಾಟಿ ಹೋಗುತ್ತಿರುವಲ್ಲಿ ನಮಗೆ ಇವಾವುದೂ ಜೀವಂತವಾಗಿರುವಂತೆ ಕಾಣಲಿಲ್ಲ. ಸ್ವಪ್ನಪ್ರವಾಹದಲ್ಲಿ ಹರಿದು ಹೋಗುತ್ತಿರುವ ಜಲವಾಹಿನಿಯಂತೆ ನಮ್ಮ ಅಂತರಂಗವೂ ಅದರ ಭಾವನೆಗಳೂ ಬೇರೆ ಕಡೆ ಹರಿದು ಹೋಗುತ್ತಿದ್ದುವು. ಒಟ್ಟಿಗೆ ನಮ್ಮ ಪಾಲಿಗೆ ಪ್ರಪಂಚವೆಲ್ಲ ಶೂನ್ಯವಾಗಿ ಭಗ್ನವಾಗಿ ವಿಜಯನಗರದಂತೆ ಆಗಿ ಮುರಿದಿತ್ತು. ಕಮರಿ ಹೋದ ಆ ಸೌಂದರ್ಯ ಸಾಮ್ರಾಜ್ಯದ ಪಾಳೇ ಸತ್ಯ, ಈ ಜೀವಂತ ಸಂಸ್ಥಾನವು ಮಿಥ್ಯ ಎಂಬುವಂತೆ ಶಿಥಿಲ ಸೌಂದರ್ಯದ ಚಿತ್ರವೊಂದು ಮಾತ್ರ ಕಾಣುತ್ತಿತ್ತು.

ಊರನ್ನು ಬಿಟ್ಟು ಮುಂದೆ ಮುಂದೆ ಜಾಗ್ರತೆಯಾಗಿ ಹೊರಟೆವು. ಇಲ್ಲಿಯೆ ಎಲ್ಲಿಯೊ ರಾಮದರುಶನ ಸುಧಾಪಾನಕ್ಕಾಗಿ ಚಕೋರಿಯಂತೆ ಕಾದಿದ್ದ ಪೂಜ್ಯಳಾದ ಶಬರಿಯ ಆಶ್ರಮ; ಮುಂದೆ, ವಾಲಿ-ಸುಗ್ರೀವರು ಕಿಷ್ಕಿಂಧೆಗಾಗಿ ಹೋರಾಡಿದ ಪ್ರದೇಶಗಳು. ಈ ಗುಂಡುಗಳೇ ಅವರ ಆಯುಧಗಳು. ಎಡದಲ್ಲಿನ ಈ ಬೆಟ್ಟದ ಡೊಗರೇ ವಾಲಿಯ ಭಂಡಾರ. ಅದು ಸುಗ್ರೀವನನ್ನು ದೂಡಿದ್ದ ಕಾರಾಗಾರ; ಮುಂದೆ ಇಲ್ಲಿಯೆ ಅಣ್ಣ ತಮ್ಮಂದಿರು ಘೋರವಾಗಿ ಯುದ್ಧ ಮಾಡಿ ಕಪಿರಕ್ತದ ಕಾಲುವೆಗಳನ್ನು ಸುರಿಸಿದುದು. ಹೀಗೇ ರಾಮಲಕ್ಷ್ಮಣರು ಸೀತಾವಿಯೋಗದಿಂದ ಬಾಡಿ ಬಳಲಿ ಪಂಪಾಸರಸ್ಸಿಗೆ ನಡೆದು ಹೋಗಿದ್ದುದು. ಮುಂದೆ ಒಂದು ಸಣ್ಣ ಕಲ್ಲು ಸೇತುವೆ; ಎಡಕ್ಕೆ ಸ್ವಲ್ಪ ತಿರುಗಿದರೆ ಅಲ್ಲಿಯೇ ಎದುರಿಗೆ, ಅಂಜನಾಪರ್ವತದ ತಪ್ಪಲಿನಲ್ಲಿ, ತಿಳಿಹಸುರಿನ ಮೃದು ಚೌಕಟ್ಟಿನಲ್ಲಿ ನೆಲಸಿರುವ ಪ್ರಶಾಂತ ಪಂಪಾಸರಸ್ಸು!

ಆ ದಿವ್ಯ ಸರಸ್ಸನ್ನು ಕಂಡಕೂಡಲೇ ಮನಸ್ಸಿನ ಎಲ್ಲಾ ಅಲ್ಪಭಾವನೆಗಳೂ ದೇಹದ ಎಲ್ಲಾ ತಾಪಗಳೂ ಮಾಯವಾದವು. ಇದಕ್ಕೆ ಮೂರು

ಕಡೆ ಸೋಪಾನ ಕಟ್ಟಿದ್ದಾರೆ. ದಂಡೆಯ ಮೇಲೆ ಸಾಲಿಗೆ ಹೂ ಗಿಡಗಳು. ಪಕ್ಕದಲ್ಲಿ ಸೀತಾ ದೇವಿಯ ದೇವಾಲಯವೊಂದು. ಉತ್ತರ ದೇಶ ದಿಂದ ಯಾತ್ರೆ ಬಂದು, ಈ ದೇವಾಲಯದಲ್ಲಿ ವಾಸಮಾಡಿಕೊಂಡು ನೆಲಸಿರುವ ನಾಲ್ಕೈದು ಜನ ಬೈರಾಗಿಗಳು.

ಸರೋವರದ ಸುತ್ತಲೂ ಹೊರಗೆ ಬೆಟ್ಟಗಳು. ಉತ್ತರಕ್ಕೆ ಅಂಜನಾಪರ್ವತ. ಇನ್ನು ಮೂರು ಕಡೆಯೂ ಬೇರೆ ಪರ್ವತಗಳ ಸಾಲುಪ್ರದೇಶವು ಈ ಸರಸ್ಸಿನ ವರೆಗೂ ಇಳಿದುಬಂದಿದೆ. ಕಾಲದ ಆದಿಯಿಂದಲೂ, ಇಲ್ಲೇ ಹೀಗೇ ಬಂದರ ಸಖ್ಯ ದಲ್ಲೊಂದು ಬೆಳೆದು ಏಕಾಂತರಂಗದಿಂದ ಕಾಲ ಕಳೆಯುತ್ತಿರುವ ಚಿರಂಜೀವಿಗಳು ಇವು. ಎಲ್ಲೆ ಲ್ಲಿಯೂ ನಿಶ್ಶಬ್ದ. ವ್ಯವಹಾರ ಪ್ರಪಂಚವು ಈ ಭೂಭಾಗದ ಹೊರಎಲ್ಲೆಗೆ ಬಹು ದೂರದಲ್ಲಿ ಎಲ್ಲಿಯೊ ಕೊನೆಗೊಂಡಂತಿದೆ. ಬೆಟ್ಟಗಳು ಕೂಡ ಇಲ್ಲಿ ನಮ್ರತೆಯಿಂದ ಸರಸ್ಸಿಗೆ ಮರ್ಯಾ ದೆಯಿತ್ತು, ಅದರ ಶಾಂತಿಯನ್ನು ಕಾಪಾಡಿ ಕೊಂಡು ಬಂದಿವೆ. ಉಗ್ರವಾಗಿ ಬೀಸುವ ಮಾರುತವು ಕೂಡ, ಭಕ್ತಿಯಿಂದ ಮೃದುವಾಗಿ ಚಲಿಸಿ, ಸರಸ್ಸಿನ ಗೋಜಿಗೆ ಹೋಗದೆ ತನ್ನ ಸ್ವಾಚ್ಛಂದ್ಯವನ್ನು ಮರೆತು, ಮೆಲ್ಲನೆ ಸುಳಿದು ಹೋಗುತ್ತದೆ. ಅನೇಕ ಶತಮಾನಗಳ ಪರ್ಯಂತ ಯೋಗನಿರತನಾಗಿ, ಶಾಂತಾತ್ಮವನ್ನೂ ಸಿದ್ಧಿ ಯನ್ನೂ ಪಡೆದು, ಏಕಾಗ್ರತೆಯಿಂದ ಸದಾನಂದ ವನ್ನು ಅನುಭವಿಸುತ್ತಿರುವ ಯೋಗಿವರ್ಯನಂತೆ ಸರಸ್ಸು ಕಾಣುತ್ತದೆ.

ದಾರಿಯಲ್ಲಿ ಆನೆಗೊಂದಿಯಲ್ಲಿ ಕಬ್ಬನ್ನೂ ಮಾವಿನಹಣ್ಣುಗಳನ್ನೂ ಕೊಂಡುಹೋಗಿದ್ದೆವು. ಸರಸ್ಸಿನಲ್ಲಿ ಮುಖವನ್ನು ತೊಳೆದು ಅವನ್ನು ತಿಂದು, ಮನಸ್ಸಿನ ದಾಹವಡಗುವಂತೆ ನೀರನ್ನು ಕುಡಿದು ಆಯಾಸವನ್ನು ಪರಿಹರಿಸಿಕೊಂಡೆವು. ಆಗಲೇ ಸಂಜೆಯಾಗಿತ್ತು. ಎಷ್ಟು ಹೊತ್ತು ಅಲ್ಲಿ ಕುಳಿತಿದ್ದರೂ ಅದನ್ನು ಬಿಟ್ಟು ಏಳಲು ಮನಸ್ಸೇ ಬಾರದು. ಏಳದಿದ್ದರೆ? ಮಳೆ ಬರುವುದರೊಳ ಗಾಗಿ ಗೂಡು ಸೇರಿಕೊಳ್ಳಬೇಕು.

ಬಂದ ದಾರಿ ಹಿಡಿದು ಹಿಂತಿರುಗಿ ದೇವಸ್ಥಾನ ವನ್ನು ಸೇರಿದೆವು. ಮೊದಲು ಬಟ್ಟೆಗಳನ್ನು ಬದಲಿಸಿ ಸ್ವಲ್ಪ ವಿಶ್ರಮಿಸಿಕೊಂಡಾದ ಮೇಲೆ ಕೈಲಾದಷ್ಟು ಊಟಮಾಡಿ ಎಲ್ಲರೂ ಮಲಗ ಹೋದೆವು. ರಾತ್ರಿ ಕಳೆದು ಬೆಳಗಾಗುತ್ತಲೇ ಬಂದದಾರಿ ಹಿಡಿದು ಊರಿಗೆ ಪ್ರಯಾಣಮಾಡುವ ಪ್ರಯತ್ನ ನಡೆಯಿತು. ನಾವು ಎಲ್ಲವನ್ನೂ ಸಿದ್ಧ ಮಾಡಿಕೊಂಡು ನಿಲ್ಲುವ ಹೊತ್ತಿಗೆ ಹೊಸಪೇಟೆಗೆ ಹೇಳಿಕಳುಹಿದ್ದ ಗಾಡಿಗಳು ಬಂದುವು. ಗಾಡಿ ಯಲ್ಲಿ ಕುಳಿತುಕೊಳ್ಳುವ ಮುಂಚೆ ಚೆನ್ನಯ್ಯನಿಗೆ ಮರ್ಯಾದೆಯನ್ನು ಮಾಡಿ ಅವನ ಪ್ರಣಾಮ ಸ್ವೀಕರಿಸಿ ಅವನಿಗೊಂದು ಯೋಗ್ಯತಾಪತ್ರವನ್ನು ಕೊಟ್ಟುದಾಯಿತು.

ಎರಡು ದಿನಗಳ ಅಲ್ಪಾವಧಿಯಲ್ಲಿ ೨೫೦ ವರುಷಗಳ ಚರಿತ್ರೆಯನ್ನು ಸತ್ವತಃ ಅನುಭವ ಮಾಡಿಸಿಕೊಟ್ಟು, ಒಂದೇ ಕಾಲದಲ್ಲಿ ಸುಖದುಃಖ ಗಳನ್ನು ಉಂಟುಮಾಡಿದ ಆ ಸೌಂದರ್ಯದ ಪಾಳನ್ನೂ ಪಾಳೆಯವನ್ನೂ ಬಿಟ್ಟು ಹೊಂಟೆವು. ಏರಿನಲ್ಲಿಯೂ ತಗ್ಗಿನಲ್ಲಿಯೂ ಆ ಶಾಂತಿಯ ರುದ್ರಭೂಮಿಯಲ್ಲಿ ಗಾಡಿ ಹೊರಟಿತು. ಆದರೆ, ಆ ಪಾಳುಗಳಲ್ಲಿ ಸ್ವಚ್ಛಂದವಾಗಿ ತಿರುಗಾಡ ಬೇಕು. ಅಲ್ಲಿನ ಚಮತ್ಕೃತಿಗಳನ್ನು ಪರಿಶೀಲಿಸ ಬೇಕು. ಅಲ್ಲಿನ ವಸ್ತುಚಯವನ್ನು ಮೇಲಿಂದ ಮೇಲೆ, ಒಂದು ಪರ್ವತದ ಮೇಲಿಂದ ಇನ್ನೊಂ ದಕ್ಕೆ ಹೋಗಿ ನಿಂತು ನದಿ ಕಾಲುವೆ ಗುಡಿ ಗೋಪುರ ಕೊತ್ತಲ ಮುಂತಾದವುಗಳ ನೆಲಸು ಬೆಡಗುಗಳನ್ನು ನೋಡಬೇಕು. ಸೂರ್ಯೋ- ದಯ ಸೂರ್ಯಾಸ್ತಗಳ ಕೋಟಿ ಕಳೆಕಾಂತಿ ಗಳನ್ನು ಕಣ್ಣಿನಿಂದ ನೋಡಿ, ಅದರಲ್ಲಿ ಮನಸ್ಸನ್ನು ಜಾಲಿಸಿ ತೊಳೆದು, ಹೃದಯವನ್ನು ತೆರೆದು ವಿಶಾಲಗೊಳಿಸಿ ಆನಂದಿಸಬೇಕು. ಎಲ್ಲ ಪ್ರದೇಶಗಳನ್ನೂ ಗುರುತಿಸಿ ಅಲ್ಲಲ್ಲಿ ಕುಳಿತು ಆಯಾ ಸ್ಥಳಗಳಿಗೆ ಸಂಬಂಧಪಟ್ಟ ವ್ಯಕ್ತಿಗಳನ್ನೂ ಘಟನೆಗಳನ್ನೂ ಸನ್ನಿವೇಶಗಳನ್ನೂ ಕಲ್ಪಿಸಿ ಕೊಂಡು ಅವುಗಳಲ್ಲಿ ಪ್ರಾಣಪ್ರತಿಷ್ಠಾಪನೆ ಮಾಡಿ, ಪುನಃ ನಮ್ಮೆದುರಿಗೆ ಅವು ಜೀವಿಸುವಂತೆ

ಮಾಡಿಕೊಳ್ಳಬೇಕು. ನಮಗೆ ಇವು ಸಾಧ್ಯವಾಗದುದಕ್ಕೆ ಮಾತ್ರ ಪಶ್ಚಾತ್ತಾಪ.

ಮಧ್ಯಾಹ್ನ ಮೂರು ಗಂಟೆಯ ಹೊತ್ತಿಗೆ ಹೊಸಪೇಟೆ ಸೇರಿದೆವು. ರೈಲು ಹೊರಟಿತು. ಎಲ್ಲರೂ ಕಿಟಕಿಗಳಿಂದ ಹಿಂದೆ ಮುಂದೆ ನೋಡಲುಪಕ್ರಮಿಸಿದರು. ಆ ದೃಶ್ಯಗಳು ದೂರದ ಬಿಸಿಲಿನ ಝಳ ಮಸಕುಗಳಲ್ಲಿ, ಬಿಸಿಲುಕುದುರೆಗಳ ಓಟದಲ್ಲಿ ಮುಚ್ಚಿಹೋದುವು. ವಸ್ತು ಪ್ರಪಂಚದ ಇತರ ದೃಶ್ಯಗಳೂ ಶಬ್ದಗಳೂ ಜೀವ ವ್ಯಾಪಾರಗಳೂ ಸಹವಾಸಗಳೂ ಕರ್ತವ್ಯ ಚಿಂತೆಗಳೂ ಮನಸ್ಸಿಗೆ ಬಂದುವು. ಇನ್ನೊಂದು ಸಲ ಆ ಕಡೆ ನೋಡಿ ಕೈ ಮುಗಿಯಬೇಕೆನ್ನಿಸಿತ ಆದರೆ ಯಾರಾದರೂ ನೋಡಿ ನಕ್ಕರೆ? ಏ ಎಂದುಕೊಂಡು ಮುಗಿಸುವದರಲ್ಲಿ ವೆಂಕಟೇ ಯ್ಯನವರೂ ರಾಯರೂ ನಿಟ್ಟುಸಿರು ಬಿಟ್ಟಂ ಕೇಳಿಸಿತು. ಮೂರ್ತಿ ಕಿಟಕಿಯ ಹೊರಗೆ ತ ಹಾಕಿ ಹೊರಗಿನ ದೂರವನ್ನೇ ನೋಡುತ್ತಿದ್ದರ

"ಪಂಪಾ ಯಾತ್ರೆ ಮುಗಿಯಿತಪ್ಪ" ಎಂದರ ರಾಯರು.

"ಇನ್ನೊಂದು ಸಲ ನಾವು ಬರುವ ಹೊತ್ತಿ ಅಲ್ಲಿನ ಬೆಟ್ಟಗಳೆಲ್ಲ ಉರುಳಿ ಪುಡಿಪುಡಿಯಾ ಹೋಗಿರುವುವೇನೋ" ಎಂದರು ವೆಂಕಟೇ ಯ್ಯನವರು.



## ಕಲೆಗಳನ್ನು ಹೀಗೆ ಹೋಗಲಾಡಿಸಿರಿ

ಕಬ್ಬಿಣದ ಜಂಗು: ಹುಳಿಯೊಡೆದ ಹಾಲಿನಿಂದ ತಿಕ್ಕಿ ತೊಳೆದರೆ ಜಂಗಿನ ಕಲೆಯು ಮಾಯವಾಗುತ್ತದೆ.

ಎಣ್ಣೆಯ ಕಲೆ: ಕಾಗದ ಅರಿವೆ ಮೊದಲಾದುವುಗಳ ಮೇಲೆ ಕುಂಬಾರನ ಮಣ್ಣಿನ ರಾಡಿಯನ್ನು ಒರಸಿ ೮-೧೦ ತಾಸುಗಳವರೆಗೆ ಬಿಟ್ಟು ಒರಸಿದರೆ ಎಣ್ಣೆಯ ಕಲೆಯು ಹೋಗಿಬಿಡುವುದು.

ಅರಿವೆಯ ಮೇಲಿನ ಬಣ್ಣ: ಟರ್ಪಂಟೈನ್ ಮತ್ತು ಸ್ಪಿರಿಟ್ ಅಫ್ ಅಮೋನಿಯಾ ಇವುಗಳನ್ನು ಸಮಪ್ರಮಾಣದಲ್ಲಿ ಬೆರಿಸಿ, ಅರಿವೆಯ ಮೇಲೆ ತಿಕ್ಕಬೇಕು.

ಕಟ್ಟಿಗೆಯ ಸಾಮಾನುಗಳ ಮೇಲಿನ ಕಲೆ: ಮೇಜು, ಕುರ್ಚಿ ಮೊದಲಾದವುಗಳ ಮೇಲೆ ಕೈಬೆರಳಿನ ಕಲೆಯಿರುವ ಸ್ಥಳಗಳಲ್ಲಿ ಕುಸುಬೆ ಎಣ್ಣೆಯಲ್ಲಿ ಅದ್ದಿದ ಅರಿವೆಯ ಚೂರಿನಿಂದ ಚನ್ನಾಗಿ ತಿಕ್ಕಬೇಕು.

ಕಾಯಿಪಲ್ಯಗಳ ಕಲೆ: ಯಾವುದೇ ವಸ್ತುವಿನ ಮೇಲೆ ಕಲೆ ಬಿದ್ದಲ್ಲಿ ಬಟಾಟಿಯ ಚೂರಿನಿಂದ ತಿಕ್ಕಬೇಕು.

ಕಾಜಿನ ಮೇಲಿನ ಕಲೆ: ಸೋಡಾದ ಮಂದನೀರಿನಿಂದ ತಿಕ್ಕಿ ತೊಳೆಯಬೇಕು.

ಕರಿಯ ರೇಶಿಮೆ ಅರಿವೆಗಳು: ಕರಿಯ ರೇಶಿಮೆಯ ಅರಿವೆಯ ಮೇಲೆ ಕಲೆಯು ಬಿದ್ದರೆ ಆ ಭಾಗವನ್ನು ತೊಳೆದು ಸ್ವಲ್ಪ ಊದಿ ಒರೆಸಬೇಕು. ನಂತರ ಬಿಸಿಯಾದ ಸ್ವಲ್ಪ ಕಾಫಿಯನ್ನು ಅಲ್ಲಿ ಸುರಿಯಬೇಕು. ಅರ್ಧ ಮರ್ಧ ಒಣಗಿದ ನಂತರ, ಮಡಿಕೆಗಳನ್ನು ಹೋಗಲಾಡಿಸಲು ಇಸ್ತ್ರಿಮಾಡತಕ್ಕದ್ದು.

# ವಾಣಿಜ್ಯ ಹಾಗೂ ಬ್ಯಾಂಕ






Edited, printed and published by H. R. Moharay at the Samyukta Karnatak Press, Koppikar Road, Hubli.

# ಸಂಚಿಕೆಯಲ್ಲಿ



ನಿಮಗೆ ರುಚಿಸುವವೋ ನೋಡಿರಿ



ಲೋಕ ಶಿಕ್ಷಣ ಟ್ರ

ಪ್ರಕಟನೆ